# ಮುನ್ನುಡಿ

---

ಹತ್ತು ವರುಷದ ಹಿಂದೆ ಆರಂಭಿಸಿದ "ನವರಾತ್ರಿ"ಯ ಕೆಲಸ ಈ ಮೊದಲ ಭಾಗದ ಪ್ರಕಟನೆಯಿಂದ ಈಗ ಮುಗಿದಿದೆ.

ಪದ್ಯಕಥನಗಳ ಈ ಗುಚ್ಛ ಮೈಸೂರಿನಲ್ಲಿ ಒಂದು ನವರಾತ್ರಿಯಲ್ಲಿ ನೆರೆದ ಗೆಳೆಯರ ಕಥೆಗಳಿಂದ ರೂಪುಗೊಂಡಿತೆನ್ನುವುದು ಬರಿಯ ಒಂದು ಕಲ್ಪನೆ. ಕಥೆಹೇಳಿದವರವು ಟೀಕೆಮಾಡಿದವರವು ಎಂದು ಈ ಪ್ರಸ್ತಾವನಾಭಾಗದಲ್ಲಿ ವರ್ಣಿತವಾಗಿರುವ ವ್ಯಕ್ತಿಚಿತ್ರಗಳು ಬಹು ಪಾಲು ನನ್ನ ಜೊತೆಯ, ನನಗೆ ಹಿರಿಯರಾದ, ಕನ್ನಡ ಸೇವಕರನೇಕರ ಶೀಲವನ್ನು ಆಧರಿಸಿ ಬರೆದಿರುವ ಕಲ್ಪಿತ ಚಿತ್ರಗಳು. ಪ್ರೀತಿಯಿಂದ ಬರೆದಿರುವ ಈ ಶಬ್ದಚಿತ್ರಗಳಲ್ಲಿ ಅಲ್ಲಿ ಇಲ್ಲಿ ಮಾತು ತಪ್ಪಿದ್ದರೆ ಆಯಾ ಹಿರಿಯರೂ ಗೆಳೆಯರೂ ಮನ್ನಿಸಬೇಕೆಂದು ಈ ಮೂಲಕ ಬೇಡುತ್ತೇನೆ.

ಗವೀಪುರ ವಿಸ್ತರಣ
ಬೆಂಗಳೂರು, ವಿಜಯ ಸಂ.
ನಿಜವೈಶಾಖ ಬಹುಳ
ಸಪ್ತಮಿ ೪–೬–೧೯೫೩

ಶ್ರೀನಿವಾಸ

# ನವರಾತ್ರಿ

## ೧

## ಪ್ರಸ್ತಾವನೆ

---

ಸಿರಿಯರಸನಡಿಯೊಳಭಿನಮಿಸಿ ; ಮನುಜನ ಮನದ
ಭಾವನೆಗೆ ಒಡಲೀಯಲವನ ಕೃಪೆ ತಳೆದಿರುವ
ನುಡಿಯೆಂಬ ಶಕ್ತಿಯಿದಿರಲಿ ಮಣಿದು ; ಕರುನಾಡ
ಭರತವರ್ಷದ ಪೂರ್ವಪಶ್ಚಿಮದ ದೇಶಗಳ
ನಲಿವು ಕಲಿವಿನ ಗುರುಗಳೆನಿಸಿ ಶತಮಾನಗಳ
ಹಂತವನು ನಿಡುಬೆಳಗಿ ನಿಂತು ಕೀರ್ತಿಯೊಳಾಳ್ದ,
ಅಂತೆ ಇಂದಾಳುತಿಹ, ಕವಿಕುಲಕೆ ತಲೆವಾಗಿ ;
ತಾಯಿನುಡಿ ಕನ್ನಡದ ಸಿರಿವಾತಿನಲಿ, ನನ್ನ
ಕನ್ನಡದ ಒಡಹುಟ್ಟುಗಳ ಮನವನೇನೆನಸೊ
ನಲಿಸುವೆನೆ ಅವರೊಳೆಳೆಯರಿಗೇನನಾದರೂ
ತಿಳಿಸುವೆನೆ ಎಂಬೊಂದು ಆಸೆಯಲಿ, ಕತೆ ಇವನು
ಹೇಳೆ ನಾ ತೊಡಗಿಹೆನು. ಸಂಸ್ಕೃತದ ವಾಲ್ಮೀಕಿ,
ಕನ್ನಡದ ನಾಡ ಹಿರಿ ಕವಿ ಕುಮಾರವ್ಯಾಸ,
ಭರತವರ್ಷದಲಿ ಕರ್ಣಾಟದಲಿ ಕತೆಯೊರೆದ
ಕವಿಗುರುಗಳೆನಗೆ. ಗೊಂಚಲಿನ ಕತೆಗಳ ಕಟ್ಟೆ
ಇಲ್ಲಿ ಬೇರೆಡೆಗಳಲಿ ಅಗ್ಗಳೆಯರೆನಿಸಿರುವ,
ಅಂದಿನ ಕಥಾಸರಿತ್ಸಾಗರದ ಕವಿರಾಯ
ಸಹಜ ಕಥನಕಲಾಪ್ರವೀಣ ಪೂರ್ವಾಚಾರ್ಯ
ಸೋಮದೇವ, ಆ ಬೃಹತ್ಕಥಾಮಂಜರಿಯ
ಪ್ರೌಢಕಥಕ ಗುಣಾಢ್ಯ, ಆ ಪಂಚತಂತ್ರವನು

ನಿರ್ಮಿಸಿದ ನೀತಿವಿದ ನಿಖಿಲರಾಜನ್ಯಗುರು
ವಿಷ್ಣುಶರ್ಮ, ಅರಬರರಸನಿಗೆ ಕತೆಯೊರೆದು
ಬುದ್ಧಿಕಲಿಸಿದ ವೀರಸೋದರಿ ಷಹರ್‌ಜಾದೆ,
ವಿಷ್ಣುಶರ್ಮನ ಕತೆಯ ಕೇಳಿ ಗ್ರೀಸಿಗೆ ಅಂತೆ
ಹಕ್ಕಿಮಿಗಗಳ ಹೆಸರಿನಿಂದ ನೀತಿಯ ನುಡಿದ
ದಾಸಕುಲಸಂಜಾತ ಹಿರಿಯಗುರು ಈಸೋಪ,
ಹತ್ತಿರುಳ ಸರಸಕಥನದಲಿ ಇಟಲಿಯ ಮನವ
ಸೂರೆಮಾಡಿದ ಬೊಕಾಚಿಯೊ, ಆಂಗ್ಲದೇಶದಲಿ
ಹೊಸಕಾವ್ಯವನು ನಟ್ಟ ಧೀರ ಕಾಂಟರ್‌ಬರಿಯ
ಕಥನಮಂಜರಿಯ ಜೀವನವಿಜ್ಞ ನಗೆಗಾರ
ಛಾಸರ್ ಕವಿಪ್ರವರ, ಕಥನಕಲೆ ಇಂತೆಂದು
ಎನಗೆ ತೋರಿದ ಅಣ್ಣಅಕ್ಕದಿರು. ಕಲೆ ಹಿರಿದು.
ಎನಿತ ಕಲಿತಿಹೆನೊ, ಕಲಿಯೆನು ಇನ್ನು ಎನಿತನೊ,
ನಾನರಿಯೆ. ಬಂದನಿತು ಚಂದದಲಿ ಕತೆಯೊರೆವ
ಬಯಕೆಯಲಿ ನಡೆದಿಹೆನು. ನನ್ನ ಒಡಹುಟ್ಟಿಲ್ಲ
ಬೇಸರಾಸರಿಗೆ ಎಡೆಗೊಡದೆ ಇದ ಕೇಳಲಿ
ಎಂಬದೊಂದೇ ನನ್ನ ಮನದ ಹಿರಿಹಾರಯಿಕೆ.
ನಾನೊಬ್ಬ ಬಲ್ಲಕಬ್ಬಿಗನೆಂಬ, ನಾನೊರೆವ
ಕತೆ ಬಲಿದ ನಲ್ಗಬ್ಬವಹುದೆಂಬ, ಅಭಿಮಾನ
ಎನಗಿಲ್ಲ. ಜಗಕೆ ಕಬ್ಬವನೊರೆಯುತಿಹ ಸತ್ವ
ಕೃಪೆಯಿಂದ ಈ ನನ್ನ ಮನವ ತನ್ನ ವಿಹಾರ
ವಿಲಸನಕೆ ಎಡೆಮಾಡಿಕೊಂಡು ಸಾಸಿರನೂರು
ನೂರುಸಾಸಿರದ ಲೆಕ್ಕವ ಮಿಕ್ಕ ತನ್ನ ಆ
ನಾಲಗೆಯ ಸಾಲಿನಲಿ ನನ್ನನೂ ಒಂದೆಂದು
ಗೆಯ್ದುದೇ ಧನ್ಯನಹೆ ನಾನು. ಇಂತಲ್ಲದೆ,
ಮಿಗಕೆ ದನಿಯಿಲ್ಲ, ಖಗಕುಲಕೆ ಇಂಚರವಿಲ್ಲ,
ಕವಿಗೆ ಸವಿನುಡಿ ಇಲ್ಲ. ವಿಶ್ವಕಾವ್ಯದ ಸತ್ವ

ನನ್ನೊಳಗೆ ಹಾಯ್ದೋದುತಿರುವ ಹಾಡಾವುದಿದೆ
ಅದಕೆನ್ನ ಜಿಹ್ವೆ ತಡೆಯಾಗದಿರಲೆಂದೆಳಸಿ
ಪೂಜೆಯಲಿ ಎಂತಂತೆ ನಡೆಯುವೆನು.

ಕಾವೇರಿ

ತೆಂಕಣದ ಮೇರೆಯಾಗಿರಲು ಗೋದಾವರಿ
ಬಡಗಣದ ಮೇರೆಯಾಗಿರುತ ಈ ಮಧ್ಯದಲಿ
ಇರುವುದಾವುದು ಅದುವೆ ಕನ್ನಡದನಾಡೆಂದು
ಅಂದು ಕಾವ್ಯೋತ್ತುಂಗ ಗಿರಿಯನಾರೋಹಿಸಿದ
ರಾಜಕವಿಪುಂಗವನು ಹಾಡಿದನು. ಮೂಡಲಲಿ
ಪಡುವಲಲಿ ಸಾಗರವೆ ಮೇರೆ ಎಂಬುದ ಬೇರೆ
ಹೇಳಲೇತಕೆ? ತನ್ನ ಒಲುಮೆಯಾ ನಾಡ ಜನ
ಕಿರಿಯ ನುಡಿಯಲಿ ಹಿರಿಯ ಅರ್ಥವನು ತುಂಬುವರು
ಎಂದ ಕವಿ ಮೌನವನೆ ನುಡಿಗೆ ಸಮ ಮಾಡಿದನು.
ಪಡುಗಡಲ ಬೀಳ್ಕೊಂಡು ನಡೆಯ ಹೊರಟೆದು ನಾಡು
ಕಾರ್‍ವಾರ ಗೋಕರ್ಣ ಕುಮಟ ಹೊನ್ನಾವರದ
ಭಟ್ಕಳ ಮಂಗಳೂರುಡುಪಿ ಮಂಜೇಶ್ವರದ
ಕರೆಯಗೆರೆಯಲಿ ಚೆಲುವನೂರಿ ಪಯಣಕೆ ಶುಭವ
ಹಾರಿ ರಕ್ಷಕ ಮಹಾಬಲನಡಿಗೆ ಪೊಡಮಟ್ಟು,
ಪರಶುರಾಮನ ಹೆಸರನುಳಿಸಿರುವ ಸೀಮೆಯಲಿ
ಶೌಂಗು ವೀಳೆಯ ಬಾಳೆ ತೆಂಗಿನಲಿ ಬಾನ್ಕೊಂಡು,
ಹೊಲತೋಟಗದ್ದೆ ಕಾಡನು ಮೆರೆದು ಸಾಗರಕೆ
ಹರಿದೋಡುತಿಹ ಒಂದು ಹೊಸತು ಒಪ್ಪದ ಚೆಲುವ
ಹಿರಿಯ ಹೊಳೆಗಳ ಬೆಡಗಿನುತ್ತರೀಯವ ಹೊದೆದು,
ಸಹ್ಯಭೂಧರದ ಭುಜವಡರ್ದು ಮುಗಿಲನು ಸೋಂಕಿ
ಅಲ್ಲಿಂದ ಮೆಲುಮೆಲನೆ ಇಳಿತಂದು ಮಲೆನಾಡ
ಹೆಮ್ಮರನ ಕಾಡಕಳ್ತಲೊಳೊಂದು ಸೊಗವೇರಿ,
ಇಲ್ಲಿ ಲಕ್ಷ್ಮಣ ತೀರ್ಥ ಲೋಕಪಾವನೆ ಇಲ್ಲಿ

ಹೇಮಾವತೀ ಷಿಂಷೆ ತುಂಗೆ ಭದ್ರೆ ಕೃಷ್ಣೆ
ನೀರಾಡೆ, ಉತ್ತರಕೆ ಬೆಳುವೊಲದ ನಲುನಾಡು
ಮಧ್ಯೆ ಹೊಂಜಾವಣಿಗೆ ಹೆಸರಿನಾ ಬೆಳೆನಾಡು
ತೆಂಕಣಕೆ ಹದಿನಾಡ ಸೊಬಗುಬೆಡಗಿನ ಬೀಡು,
ಇಂತು ತೆರತೆರನ ಸಂಪದದ ಸಿರಿ ವಸತಿಯಲಿ
ತಾಯಾಗಿ ಲೋಕವನುಸಲಹಿ ಮೂಡಣಗಿರಿಯ
ಸಾಲಮೇಗಡೆಗೇರಿ ಕೆಳಗಿಳಿದು ತಿರುಮಲೆಯ
ಪಾವನಶಿಲೋಚ್ಚಯವ ಸಾರಿ ಮುಂಬರಿದಂತೆ
ಸೋದರರದ ತೆಲುಗಾಣ್ಯದಲಿ ಬೆರೆದು ಸಾಗರವ
ಮತ್ತೆ ಸೋಕುವಳು. ಎಂತಪ್ಪ ಚೆಲುವಿನ ಭೂಮಿ
ಎನಿತು ತೆರತೆರನ ಚೆಲುವಿನದು ಕನ್ನಡ ಭೂಮಿ !
ಮಲೆಯೇನು ; ಮಲೆಯ ತಲೆಯಿಂದ ತಪ್ಪಲವರೆಗೆ
ಬೆಳೆದ ಬನವೇನು ; ಬನವನು ಹೂವು ಹಸುರಿಂದ
ತುರುಗಿಸಿಹ ಪರಿಪರಿಯ ತರುವೇನು ; ತರುಗಳಲಿ
ಬಣ್ಣಬಣ್ಣದ ಗರಿಯ ಚೆಲುವಿನಲಿ ಮೆರೆಯುತಿಹ,
ಕಲರವದ ಕೂಜನದಿ ಹಲವಿಧದಿ ಹಾಡುತಿಹ
ವಿಧವಿಧದ ವಿಹಗ ಸಂಕುಲವೇನು ; ಆ ಹಾಡ
ಇಂಪಿನಲಿ ಸೋಲಿಸುವೆನೆಂದು ಪಂಥವ ಹೂಡಿ
ಹಸುರ ಹಾಸಿನ ನೆಲದಿ ಕೊರೆದ ಕಾಲುವೆಗಳಲಿ
ಹರಿವ ಕಿರಿಕಿರಿ ಸರಳು ಹಿರಿಹಿರಿಯ ಹೊಳೆಯೇನು ;
ಮಲೆಬನವ ತೀವಿ ಬಾಳುತಲಿರುವ ಮಿಗವೇನು;
ಮಳೆಯಿಂದ ಬಳೆವ ಹೊಲ, ಹೊಳೆಕೆರೆಯ ನೀರಿಂದ
ಬಳೆವ ಮಡಿ, ಇವ ನಂಬಿ ಬಾಳುತಿಹ ಜನದಿಂದ
ಕಿಕ್ಕಿರಿದ ಹಳ್ಳಿ ಊರುಗಳು ನಗರಗಳೇನು ;
ಇತ್ತ ಮಲೆ ಮುಗಿಲೆಡೆಗೆ ದಾಳಿಇಟ್ಟಿರೆ ಇತ್ತ
ಜೋಗದಲಿ ಒಂದೆಡೆ ಶರಾವತಿಯೊ ಒಂದಿತ್ತ
ಬರಚುಕ್ಕಿ ಗಗನಚುಕ್ಕಿಯಲಿ ಕಾವೇರಿಯೋ,

ಸಗ್ಗದಗ್ಗಳಿಕೆಯನು ಕಡೆಗಣಿಸಿ ಈ ನೆಲನ
ಪೊರೆಯಲಿಳಿತರುವ ಪುಣ್ಯಾತ್ಮರೊಲು, ನೆಲದಿಂದ
ಪಾತಾಳಕೆನಲು ದುಮ್ಮಿಕ್ಕಿರುವ ಭರವೇನು;
ತೆಂಕಣದ ಅಂಚಿನಲಿ ಮೂಡಣದ ಮಲೆಸಾಲು
ಪಡುಮಲೆಯಸಾಲು ಒಂದೊಂದನೀಕ್ಷಿಸಿ ಕೆಲೆದು
ಆಟದಲಿ ಬೆರೆವ ತರಳರತೆರಕೆ ಕ್ರೀಡೆಯಲಿ
ಬೆರೆತಿರಲು ನೆಲನ ಚೆಲುಸಂತೆ ನೆರೆಯಿತೊ ಇಲ್ಲಿ
ಎಂಬ ವಿಹ್ವಲತುಮುಲಸುಂದರದ ನೀಲಗಿರಿ
ನೆಲನಗಲವನು ಅಳೆದು ಬಾನಡರುವಗುರ್ವೇನು!
ಇಂತಪ್ಪ ಚೆಲುವಿಗಂತಂತುಪಾವನತೆಗೂ
ನೆಲೆಯಾಗಿ ಮೆರೆದಿಹುದು ನಮ್ಮ ಈ ತಾಯ್ನಾಡು.
ಶ್ರೀರಾಮಚಂದ್ರನೀಯೆಡೆ ತನ್ನ ಸತಿ ಸೀತೆ
ತಮ್ಮ ಲಕ್ಷ್ಮಣನೊಡನೆ ಅಂದು ನಡೆದಾಡಿದನು,
ಇಲ್ಲಿಯೆ ವಿರಾಟಪುರಿ ಇದೆ, ಭಾರತದ ಕತೆಯ
ಪಾಂಡವ ಸಹೋದರರು ಸತಿಯೊಡನೆ ಇಲ್ಲಿಯೇ
ಅಜ್ಞಾತವಾಸದಲಿ ಧರ್ಮವನು ನಡಸಿದರು,
ದಾನ ಮಾಡಿದ ನೆಲದಿ ನಿಲ್ಲಸಲ್ಲದು ಎಂದು
ಜಮದಗ್ನಿಸೂನು ಸಾಗರದಿಂದ ಈ ನೆಲನ
ಪಡುಕಡೆಯ ಪಟ್ಟಿಯನು ಬಿಡಿಸಿಕೊಂಡದರಲ್ಲಿ
ತಪವನಾಚರಿಸಿದನು, ಎಂದು ಇತಿಹಾಸಕೂ
ಮೊದಲಿನ ಪ್ರತೀತಿ ನುಡಿವುದು. ಚರಿತ್ರೆಯ ದಿನಕೆ
ಬುದ್ಧಧರ್ಮಾಬ್ಧಿಚಂದ್ರ ಅಶೋಕನರಪತಿಗೆ
ಧರ್ಮಲಾಲಸೆಯ ಕುರುಹನು ಕೊರೆಯಲೆಡೆಯಿತ್ತು
ಎರಡು ಸಾವಿರ ವರ್ಷದಿನ ಅವನ ನುಡಿಗಳನು
ತಮ್ಮ ಎದೆಯಲಿ ಹಿಡಿದೆ ಇಹವು ಕನ್ನಡಕಲ್ಲು.
ಎರಡು ಸಾವಿರವೊ ಬೇರೆನಿತೊ ವರ್ಷಕೆ ಹಿಂದೆ
ವಿಂಧ್ಯದುತ್ತರದ ನೆಲ ಬರದಿಂದ ಸೊರಗಿರಲು

ಜಿನಸಮಯಸಾರಸಿಧಿಯಾಗಿರ್ದ ಗುರುವರ್ಯ
ಭದ್ರಬಾಹು ಮುನೀಂದ್ರನಯುತ ಶಿಷ್ಯರವೆರಸಿ
ಇತ್ತ ಬಿಜಗೆಯ್ದನಪ್ಪುದು. ಶ್ರವಣಬೆಳುಗುಳದ
ಕಾರಕಳ ವೇಣೂರು ಮೂಡಬಿದಿರೆಯ ಬಳಿಯ
ಗಾಳಿ ಇನ್ನೀಗಳೂ ಜೈನಧರ್ಮದ ಕಂಪ
ಸೂಸಿ ಜೀವಗಳ ತಣಿಸುತಿದೆ. ಮತ್ತಿನದಿನಕೆ
ವೇದಾಂತವನು ಭದ್ರಪೀಠದಲಿ ಕುಳ್ಳಿರಿಸಿ
ಇದು ಸಾರ್ವಭೌಮವೆಂದಭಿಷೇಕ ನಡೆಯಿಸಿದ
ಗುರುಪರಬ್ರಹ್ಮಶಂಕರರಿಲ್ಲಿ ಮಲೆನಾಡ
ಶೃಂಗಗಿರಿಯೆಡೆ ತಮ್ಮ ತಪವ ಮುಗಿಸಿದರಹುದು.
ಕೆಲವು ಶತಮಾನ ಹರಿದಿರಲು ಆ ಗುರುದೇವ
ರಾಮಾನುಜರು ಚೋಳರಾಜನುಪಟಲದಿಂದ
ತಮ್ಮ ರಕ್ಷಿಸಿಕೊಂಬ ಚರಿತದಲಿ ಹೊಯ್ಸಳರ
ಈ ಭೂಮಿಯನು ಸಾರಿ ಗುಪ್ತದಲಿ ತಪವೆಸಗಿ
ಪ್ರಕಟದಲಿ ಧರ್ಮವನು ಸಾರಿ ಸಿದ್ಧಾಂತವನು
ನೆಲೆನಿಲಿಸಿ ಭೂಗರ್ಭದಲಿ ಮೆರೆದ ದೈವವನು
ಹೊರಕೆಲಕೆ ತಂದು ಅದನಾಚಂದ್ರತಾರಾರ್ಕ
ಲೋಕನಯನಾನಂದವಸ್ತುವಾಗಿರಲಿರಿಸಿ
ದುಡಿದು ದಣಿಯರು, ತಣಿದರಹುದು. ಇನ್ನಿಲ್ಲಿಯೇ
ತುಳುನಾಡಿನಲಿ ಜನ್ಮವೆತ್ತಿ ಸತ್ಯವ ಹಿಡಿದು
ದ್ವೈತವನು ಸಿದ್ಧಾಂತ ಮಾಡಿ ಶ್ರೀ ಕೃಷ್ಣನನು
ಕೈಯಕಡಗೋಲಿನಲಿ ಹುಡುಗಾಗಿ ಉಡುಪಿಯಲಿ
ಭಕ್ತಿಯಲಿ ಕಡೆದು ನಿಲಿಸಿದರು ಮಧ್ವಾಚಾರ್ಯ
ಶ್ರೀಮದಾನಂದತೀರ್ಥರು. ಶೈವಸಾಯುಜ್ಯ
ನಿತ್ಯದುಣಿಸಾದ ಆ ಅಲ್ಲಮ ಪ್ರಭುದೇವ,
ಎಲ್ಲ ಜೀವಗಳಣ್ಣ ಬಸವಣ್ಣಗಳು, ಇಲ್ಲೆ
ಜನ್ಮವನು ಧರಿಸಿ ದಯೆ ಸಮತೆಗಳ ಧರ್ಮವನು

ಸಾರಿದರು ಬಾಳಿದರು ಹರಹಿದರು ನಿಲಿಸಿದರು.
ಧರ್ಮದೀರ್ಘಿಕೆ ಇನಿತ ತನ್ನೆಡೆಗೆ ಸೆಳೆತಂದ
ಇನ್ನೊಂದು ನಾಡುಂಟೆ? ಇಲ್ಲಿ ಗೊಮ್ಮಟ ಮೂರ್ತಿ
ಇಲ್ಲಿ ಸಿರಿ ರಂಗೇಶ ಇಲ್ಲಿ ನಂಜುಂಡೇಶ
ವಿಜಯ ವಿಕ್ರಮ ಕೀರ್ತಿ ವೀರ ನಾರಾಯಣರು
ಇಲ್ಲಿಇಲ್ಲಿಇಲ್ಲಿ; ಗೋಕರ್ಣ ಉಡುಪಿಗಳ
ಬಿಳಿಗಿರಿಯ ಯದುಗಿರಿಯ ಮೈಲಾರ ನಂದ್ಯಾಲ
ಸೊನ್ನಲಾಪುರದ ಕೂಡಲಸಂಗಮದ ಇನ್ನು
ನೂರು ಪುಣ್ಯ ಕ್ಷೇತ್ರಗಳ ದಿವ್ಯದೇದೀಪ್ತಿ
ತಾರಕಿಸುತಿಹುದು ಈ ಭೂಮಿಯನು.

ಈ ತೆರದಿ

ಮೆರೆದ ಕನ್ನಡನಾಡ ಹೃದ್ದೇಶವೆಂಬಂತೆ
ಮೆರೆದು ಜಗದಲಿ ಕೀರ್ತಿವಡೆದು ಬಾಳುತಲಿಹುದು
ಮೈಸೂರದೇಶ. ಈ ದೇಶವನು ಅರಸಾಳ್ದ
ಲೋಕವಿಖ್ಯಾತವಾಗಿಹುದು ಯದುರಾಜ ಕುಲ.
ಬನವಸಿಯೊಳಾಳಿದ ಕದಂಬರಾಜರು ಮೊದಲು
ಚಾಳುಕ್ಯ ರಾಷ್ಟ್ರಕೂಟರ ಸಾಳ್ವ ಹೊಯ್ಸಳರ
ಗಂಗತುಳುವರ ರಾಜಮನೆತನಗಳೀನಾಡ
ಪೂರ್ವದಲಿ ಆಳಿ ಜನವನು ಪೊರೆದು ತಮ್ಮ ಕತೆ
ಲೋಕದಿತಿಹಾಸಪಟದಲಿ ತೊಳಗುವಂದದಲಿ
ನಡೆದು ಮರೆಯಾದುವಲೆ. ಆ ರಾಜವಂಶಗಳ
ಧರ್ಮನಿಷ್ಠೆಗೆ ಕಲಾಭಿಜ್ಞತೆಗೆ ವಿಕ್ರಮಕೆ
ಒಂದೆನೆಲೆ ತಾನಾಗಿ ಬೆಳಗಿಹುದು ಯದುವಂಶ.
ಯದುರಾಜರಲಿ ಮೊಳೆತು ರಾಜೊಡೆಯರಲಿಬೆಳೆದು
ಕಂಠೀರವಾಖ್ಯ ನರಸಿಂಹರಾಜೇಂದ್ರರಲಿ
ಚಿಕದೇವರಾಜರಲಿ ಗರಿಕಟ್ಟಿ ಹಿರಿದಾಗಿ
ಸತ್ಯಮೇವೋದ್ಧರಾಮ್ಯಹಮೆಂಬ ಪೂಣ್ಕೆಯಲಿ

ರಾಜ್ಯಕರ್ಮದಲಿ ಬಳಿ ದೇವರನು ಪೂಜಿಸಿತು.
ಕಾಲವಾಹಿನಿ ತಂದ ಏರಿಳಿತಗಳ ಸಹಿಸಿ
ರಾಜಾನ್ವಯದ ಕೀರ್ತಿ ಶಾಲಿವಾಹನಶಕದ
ಹದಿನೇಳು ಶತಮಾನ ಕಳೆದಿರಲು ಮುಮ್ಮಡಿಯ
ಕೃಷ್ಣಭೂಪನನಾಶ್ರಯಿಸಿತು. ಆ ರಾಜರ್ಷಿ
ದಿವವಸಾರಲು ನಾಡಸಿರಿ ಚಾಮಭೂಪನಲಿ
ನೆಲಸಿದುದು. ಆ ನೃಪತಿ ದಿನ ಕಳೆವ ಮುನ್ನವೇ
ಸ್ವರ್ಗವನು ಕುರಿತೇರೆ ಕುವರರಹ ಶ್ರೀಕೃಷ್ಣ
ನಾಲ್ಮಡಿಯ ಕೃಷ್ಣರಾಜೇಂದ್ರರೆಂದರಸಾಗಿ
ಮೈಸೂರ ಪಾಲಿಸಿದರಹುದು. ಮೂವತ್ತೆಂಟು
ಅಬುದಗಳ ಕಾಲ ನಾಲ್ಮಡಿಕೃಷ್ಣಭೂಮಿಪನ
ಒಲವ ಲಾಲನೆ ಪಾಲನೆಯಲಿ ನಲಿದುದು ನಾಡು
ರಾಜಧರ್ಮವೆ ರೂಪುವೆತ್ತಂತೆ ಧರ್ಮದಲಿ
ನಾಲ್ಮಡಿಯ ಕೃಷ್ಣರಾಜೇಂದ್ರರೀ ರಾಜ್ಯವನು
ಆಳಿ ಕೆರೆಕಟ್ಟೆಗಳ ಕಟ್ಟಿ ಕಾಲುವೆತೋಡಿ
ವಿದ್ಯೆಯನು ಹರಡಿ ಉದ್ಯೋಗಗಳ ನೆಲೆಗೊಳಿಸಿ
ಲಕ್ಷ್ಮಿಯನು ನೆಲೆಯಾಗಿ ನಿಲಿಸೆ ನಿಧಿಗಳ ಹೂಡಿ
ಹಳೆಯಬೆಳೆ ಹೆಚ್ಚಿ ಹೊಸಬೆಳೆಸೇರಿಬರುವಂತೆ
ಬೇಸಾಯವನು ತಿದ್ದಿ ರಾಜಮಾರ್ಗವಗೆಯಿಸಿ
ಕಾವ್ಯ ಸಂಗೀತ ನಾಟಕ ಶಿಲ್ಪ ಚಿತ್ರಗಳು
ನಿಲುವಂತೆ ಬೆಳೆವಂತೆ ಕಲೆಯನನುಪಾಲಿಸುತ
ಪೋಷಿಸುತ ನಾಡು ನಗರಗಳು ಚೆನ್ನಪ್ಪಂತೆ
ಸಿಂಗಾರ ಮಾಡಿಸುತ ದೀಪಗಳ ಬೆಳಗಿಸುತ
ಕೃತಕೃತ್ಯರಾದರಪ್ಪುದು.
ಇಂತ ನಮ್ಮೊಡೆಯ
ನಾಲ್ಮಡಿಯ ಕೃಷ್ಣರಾಜೇಂದ್ರಭೂಪನ ಶಕದ
ಮೂವತ್ತ ಆರನೆಯ ವರ್ಷ ಬಹುಧಾನ್ಯದಲಿ

ರಾಮುವಿನ ಚಿಕ್ಕಪ್ಪ ತಮ್ಮಮಗನಿಗೆ ಇಂತು
ಒಂದು ಕಾಗದವ ಬರೆದರು: "ನಿಮ್ಮ ಚಿಕ್ಕವ್ವ
ಈ ಸಲದ ದಸರೆಯುತ್ಸವವ ನೋಡುವ ಎಂದು
ಮೈಸೂರ ಕಡೆಗೆ ಮುಖಮಾಡಿಹರು. ಅರಸರು
ಉತ್ಸವವನೇನೇನೊ ರೀತಿಯಲಿ ಹಸಗೆಯ್ದು
ಚೆನ್ನಮಾಡಿಹರೆಂಬುದನು ಕೇಳಿ ಅದ ತಾವು
ನೋಡಬೇಕೆನ್ನುವರು. ನಾನಾದರೂ ಅದನು
ನೋಡಿ ಹಲವರ್ಷ ಆಗಿಹುದು; ಹೆಂಡಿರ ಜೊತೆಗೆ
ನೋಡುವರೆ ಆಸೆ. ಅದರಿಂದ ನಾವಿಬ್ಬರೂ
ನವರಾತ್ರಿಯಲಿ ನಿನ್ನ ಮನೆಯತಿಥಿ ದೈವಗಳು
ಆಗಲುದ್ದೇಶಿಸಿರುವೆವು. ಬರುವುದಾಯಿತು;
ಇದೆ ಹೊತ್ತಿನಲಿ ನೀನು ಹಲವು ವರ್ಷಗಳಿಂದ
ನೆರೆಸಬೇಕೆಂದಿರುವ ಕವಿಮಿತ್ರಮಂಡಲಿಯ
ನೆರೆಸಿದರೆ ಬಹುಚೆನ್ನವಾಗುವುದು. ಗೆಳೆಯರನು
ಕಾಲೇಜು ಬಿಟ್ಟ ಈಚೆಗೆ ಇಲ್ಲಿ ಒಬ್ಬನನು
ಅಲ್ಲಿಇನ್ನೊಬ್ಬನನು ನೋಡುವುದೆ ಆಯಿತು.
ಒಟ್ಟುಒಂದೆಡೆ ಸೇರಿ ಎಲ್ಲ ಮುಖಗಳ ನೋಡಿ
ಎಲ್ಲ ದನಿಗಳ ಕೇಳಿ ಸುಖಿಸುವರೆ ಆಶೆಇದೆ.
ಅಂತೆ ಮೈಸೂರ ಗೆಳೆಯರನು ಎಲ್ಲರಜೊತೆಗೆ
ಸೇರಿಸಲು ಒಳ್ಳೆಗೋಷ್ಠಿಯೆ ಆಗುವುದು. ಕಾರ್ಯ,
ಬೆಳಗು ಮಧ್ಯಾಹ್ನ ಸಂಜೆಯ ವೇಳೆ ಅವರವರು,
ಅರಮನೆಗೆ ಪೇಟೆಕೋಟೆಗೆ ಹೋಗುವುದು, ಇಲ್ಲ
ತಂತಮ್ಮ ಕೋಣೆಯಲಿ ಕುಳಿತು ಕಾಗದಪತ್ರ
ಹರಿಸುವುದು, ಏನಿದೆಯೊ ಅದಮಾಡಿಕೊಳಬಹುದು,
ಸಂಜೆ ಊಟಕೆ ಎಲ್ಲ ನಮ್ಮ ಮನೆಗೈತಂದು
ಎಲೆಅಡಿಕೆ ಮೆಲುತ ಯಾರೋ ಒಂದು ಕತೆಹೇಳಿ
ಉಳಿದವರು ಕೇಳಿ ಸಂತೋಷದಲಿ ಕುಳ್ಳಿರ್ದು

ಹನ್ನೊಂದುಗಂಟೆ ಹೊತ್ತಿಗೆ ಬಿಡಾರಕೊ ಮನೆಗೊ
ಹೋಗುವುದು ಏನೆಂಬೆ ? ಆಗಲಿ ಎಂದಲ್ಲ ?
ಭಪ್‌ಭಪ್ಪರೇ ನೀನು ತುಂಬ ಒಳ್ಳೆಯಹುಡುಗ.
ಸೌಭಾಗ್ಯವತಿ ನಿನ್ನ ಹೆಂಡತಿಗೆ ಈ ಮಾತ
ಸಮಯವನು ನೋಡಿ ಮೆಲ್ಲನೆ ಹೇಳು. ದಿನದಿನವು
ಬಂದವರ ನೋಡಿಕೊಳ್ಳುವ ಕಷ್ಟ ಸಹಿಸುವುದು
ಅವಳ ಹಣೆಯಲಿ ಬರೆದ ಕುಂಕಮುದ ಸೌಭಾಗ್ಯ.
ಇದರಮೇಲೂ ಹುಡುಗಿ, ಬಂದಿತೇ ಗ್ರಹಚಾರ,
ಎಂಬಂತೆ ಮುಖಮಾಡಿದರೆ, ಅವಳ ಚಿಕ್ಕವ್ವ
ಮನೆಗೆಲಸವನು ನೋಡಿಕೊಳಲೆಂದೆ ಬರುತಿಹರು,
ಎಂದು ಹೇಳುವುದು. ಇಂತೆಂದು ಪತ್ರವ ಮುಗಿಸಿ
ಈ ನಮ್ಮ ಚಿಕ್ಕಪ್ಪ "ಮರಳಿ ಬರೆದುದು" ಎಂದು
ಈ ಮಾತ ಸೇರಿಸಿದ್ದರು. "ನನ್ನ ಕಾಗದಕೆ
ಒಂದು ಉತ್ತರ ಅಂತೆ ಮಿತ್ರರಿಗೆ ಪತ್ರಗಳ
ಬರೆವ ಕಷ್ಟವ ನಿನಗೆ ಕೊಡಲು ಮನಸಿಲ್ಲದೆ
ನಾನೆ ಈ ಮುಂದೆ ತೋರಿರುವ ಗೆಳೆಯರಿಗೆಲ್ಲ
ನಮ್ಮ ಇಬ್ಬರ ಹೆಸರೊಳಾಹ್ವಾನ ಕಳುಹಿರುವೆ.
ಯಾರು ಬರುವರೊ ಯಾರುಬಾರರೋ. ಈ ವರುಷ
ಎಂತು ನಡೆಯುವುದೊ ನೋಡಿಯೆ ಬಿಡುವ. ಎಲ್ಲರೂ
ಬರಲೆಬೇಕೆಂದು ಒತ್ತಾಯದಲಿ ಬರೆದಿಹೆನು.
ನಿನ್ನ ಹೆಂಡತಿ ಚಿರಂಜೀವಿ ಸೌಭಾಗ್ಯವತಿ
ನನ್ನ ಈ ಮೊದಲ ಮಾತನು ನೋಡಿ ನಿಜವೆಂದೆ
ಬಗೆದಾಳು ಹಾಸ್ಯದಲಿ ಬರೆದ ಮಾತೆಂಬುದನು
ತಿಳಿಯಹೇಳುವುದು ಒಳ್ಳಿತು." ಹಿಡಿದ ಕೆಲಸವನು
ಈ ರೀತಿ ಇಂತು ನಡಸುವುದು ಚಿಕ್ಕಪ್ಪನಿಗೆ
ಶೀರವಾಡಿಕೆ. ಹಲವುಮಂದಿ ಮಿತ್ರರು ತಾವು
ಬರುವುದನು ತಿಳಿಸಿದರು. ಇನ್ನು ಹಲವರು ತಾವು

ಬರಲು ಅನುಕೂಲವಿಲ್ಲೆಂಬುದನು ಅರುಹಿದರು.
ಅದು ಎಂತೆ ಇರಲಿ ಬರುವೆವು ಎಂದವರು ಯಾರು
ಅವರಷ್ಟರದೆ ಕೂಟವಾದರೂ ಸಂತಸವೆ
ಎಂದು ಚಿಕ್ಕಪ್ಪ ವಾರದ ದಿವಸ ಮುಂದಾಗಿ
ಚಿಕ್ಕವ್ವನೊಡನೆ ಮೈಸೂರಿಗೈತಂದವರು
ಎಲ್ಲವನು ಅಣಿ ಮಾಡಿದರು. ಮಹಾಲಯ ಮುಗಿದು
ಪಾಡ್ಯ ಉದಯಿಸಿದಾಗ ಮೈಸೂರಿನಲಿ ನಮ್ಮ
ಸಂತಸದ ನೆರವಿಗೆಂದೇ ಬಂದವರು ಹಲರು,
ಅರಮನೆಯ ಉತ್ಸವಗಳಿಗೆ ಅಂತೆ ಆವೇಳೆ
ಮೈಸೂರಿನಲಿ ನೆರೆವ ಸಭೆ ಮಹಾಸಭೆಗಳಲಿ
ಕೆಲಸವಿದ್ದುದರಿಂದ ಬಂದವರು ಹಲವರು,
ಅಂತು ಇಂತೂ ನಮ್ಮ ಜತೆಯ ಜನ ಹನ್ನೆರಡು
ಮಂದಿಕೂಡಿದರು. ಚಿಕ್ಕಪ್ಪ ಈ ಮಧ್ಯದಲಿ,
"ಗೆಳೆಯರಾದವರು ನೆರೆಯುತ ಎಲ್ಲ ಕಾಲೇಜ
ಜೊತೆಗಾರರಾಗಿ ಇರಬೇಕೇಕೆ? ಜೊತೆಸೇರಿ
ಕತೆ ಹೇಳುವರು ಕೇಳುವರು ಹಿರಿಯ ಕಿರಿಯವರು
ಮನಸುಕೂಡಿರುವವರು ಎಲ್ಲರೂ ನೆರೆಯಲಿ.
ತೀರ ಹೊಸಬರು ಬೇಡ; ತಕ್ಕಷ್ಟು ಬಲ್ಲವರು
ಸಂಕೋಚಪಡದೆ ನಡೆಯುವ ನುಡಿವ ಮಂದಿಯನು
ಕರೆಯೋಣ," ಎಂದು ನಿಶ್ಚಯಿಸಿದರು. ಇಂತಾಗಿ
ಇನ್ನೆಂಟು ಮಂದಿ ಸೇರಿದರು. ಚಿಕ್ಕಪ್ಪನದು
ಸಂಭ್ರಮವೆ ಸಂಭ್ರಮ: ಗೆಳೆಯರೊಬ್ಬೊಬ್ಬರೂ
ಸ್ವಲ್ಪ ಮುಂಚಾಗಿಯೋ ಹಿಂಚಾಗಿಯೋ ರೈಲು
ಕಾರಿನಲಿ ಬಂದಂತೆ ಇವರು ಅವರೆಲ್ಲರನು
ನೋಡಿ ಮಾತಾಡಿ ನಮ್ಮಲಿ ಬಂದು ಇಳಿವವರು
ತಮ್ಮ ಅಧಿಕಾರಿ ಬೀಡಾರಗಳಲಿಳಿವವರು
ಯಾರು ಯಾರೆಂದು ನಿರ್ಣಯಿಸಿ ಬೀಡಾರಗಳ

ಇಂಥ ಗೆಳೆಯರು ಕೂಡ ರಾತ್ರಿಯಲಿ ಭೋಜನಕೆ
ನಮ್ಮ ಮನೆಗೈತಂದು ಭೋಜನಾನಂತರದ
ಸುಖಸಂಕಥಾಲಾಪದಲಿ ಸೇರಬೇಕೆಂದು
ಬೇಡಿಬಂದರು. ಪಾಡ್ಯಮಿಯ ಸಂಜೆ ಮೊದಲಾಗಿ
ಹದಿನಾರು ದಿವಸ ನಡೆಯಿತು ಕೆಳೆಯ ಈ ಹಬ್ಬ.
ಇದರ ಉತ್ಸಾಹ ಸಂತೋಷಗಳ ಬಣ್ಣಿಸಲು
ಏಕೆ ತೊಡಗಲಿ ? ಮಧ್ಯೆ ಪಂಚಮಿ ಮಾನವಮಿ
ದ್ವಾದಶಿ ಚತುರ್ದಶಿ ಹುಣ್ಣಿಮೆಯ ಹಬ್ಬದಲಿ
ಊರಬೇರೆಯ ಐದುಮಂದಿ ಗೆಳೆಯರು ಕಥನ
ತಮ್ಮಮನೆಗಳಲಿ ನಡೆಯಲಿ ಎಂದು ಬೇಡಿರಲು
ಅಂತೆನಡೆಯಿತು. ಇಂತು ಒಂಬತ್ತು ರಾತ್ರಿಗಳ
ನವರಾತ್ರಿ ನಮಗೆ ಷೋಡಶರಾತ್ರಿಯಾಗಿರಲು
ಕೆಳೆಯರ ಸಮಾಗಮದ ಸಂತೋಷ ದಿನದಿನಕೆ
ಚಂದ್ರನೆಂತಂತೆ ಕಳೆಕೂಡಿ ಬೆಳೆಯಿತು.

ಇಂತು
ನೆರೆದ ಮಿತ್ರರ ಕಥೆಗಳನು ಅವರ ಮಾತಿನಲೆ
ಬರೆಯುವುದು ನನ್ನ ಹೊಣೆಯೆಂದು ನಿಶ್ಚಯ ಆಗಿ
ಆದೆ ಕೆಲಸ ಈಗ ನಡೆಯುತಲಿಹುದು.

ಕತೆಗಳನು
ಬರೆಯತೊಡಗುವ ಮುನ್ನ ನೆರೆದಿದ್ದ ಕೆಳೆಯರನು
ಹೆಸರಿಸದೆ ಉಂಟೆ ? ಹೆಸರೆಲ್ಲವನು ಹೇಳುತ್ತ
ಕೊಂಡಾಡಿ ಎರಡೆರಡು ಮಾತಹೇಳದೆ ಉಂಟೆ ?
ಆದರಿಂದ ಮುಂದಿನಧ್ಯಾಯ.

ಬಂದವರಲ್ಲಿ
ಎಲ್ಲರಿಗೆ ಮೊದಲು ಹಿರಿಯಣ್ಣನವರನು ಬಿಟ್ಟು
ಬೇರೆಯಾರನು ಹೇಳಲಾದೀತು ? ಕನ್ನಡದ
ಹೊಸನಡೆಯ ಹೆಜ್ಜೆಗಳನಿಡಲು ಕಲಿಸಿದ ನಮ್ಮ

ಗುರುಗಳಲಿ ಇವರು ಮುಖ್ಯರು. ಎಳೆಯ ದಿವಸದಲಿ
ಇಂಗ್ಲೀಷ ಕಲಿತು ಒಳ್ಳೆಯ ಕವಿತೆ ಕತೆಗಳನು
ಸವಿವಂದು ನಮ್ಮ ಜನರಿಗೆ ನಮ್ಮ ಭಾಷೆಯಲಿ
ಇಂಥ ಕೃತಿಗಳ ರಚಿಸಿ ಒದಗಿಸುವುದೇ ತಮ್ಮ
ಮೊದಲ ಕರ್ತವ್ಯ ಎಂಬುದನು ಮನಗಂಡವರೆ
ಹಿರಿಯಣ್ಣ ಅಂದಿನಿಂದಲು ಏನಮಾಡುವುದು
ಎಂತು ಮಾಡುವುದು ಎನ್ನುವಗುಣಾಕಾರದಲಿ
ದುಡಿಯುತ್ತ ಸಾಗಿದರು. ಕನ್ನಡದ ಸಂಪತ್ತು
ಎನಿತು ಎಂತಪ್ಪುದೆಂಬುದ ತಿಳಿವ ಬಯಕೆಯಲಿ
ತಾವು ಬೇರೆಯ ಓದನೋದಿದುದು ಒಮ್ಮೊಮ್ಮೆ
ತುಸು ಸಾಲದಾಗಿ ಯಾವುದೆ ಪರೀಕ್ಷೆಯ ತಾವು
ಮೇಲ್ಮಟ್ಟದಲಿ ತೇರಲಿಲ್ಲ ಎಂಬುದ ತಾವೆ
ಒಮ್ಮೊಮ್ಮೆ ಇವರು ಹೇಳುವರು. ಮೇಲ್ಮಟ್ಟದಲಿ
ತೇರಲಿಲ್ಲೆಂಬ ನುಡಿಹೊರತು ಓದಷ್ಟಕ್ಕೆ
ಇವರ ಜೊತೆ ಎಲ್ಲಿ? ಇಂಗ್ಲೀಷು ಗ್ರೀಕ್ ಸಂಸ್ಕೃತ
ತಮಿಳು ತೆಲುಗಿನ ಇವರ ಪಾಠಗಳ ವಿಸ್ತಾರ
ಇವರವೇ. ಇಂತಿರುತ ಕನ್ನಡದ ನುಡಿಯೆನಲು
ಇವರ ಭಕ್ತಿಯ ಮೊದಲ ದೈವ. ಎನೆ ಕನ್ನಡದ
ಎಲ್ಲಕೃತಿ ಒಳಿತೆಂಬ ಒಣಹೆಮ್ಮೆಗಿವರ ಮನ
ಎಡೆನೀಡಿತೆಂದಲ್ಲ. ಇರುವ ಒಳಿತೆನಿತೊ ಇದೆ,
ಇಲ್ಲದುದು ಅದಕಿಂತ ಮಿಗಿಲು, ಎಂಬುದೆ ಇವರ
ಮತ. ಹತ್ತುನೂರು ವರ್ಷಕುಮಿಕ್ಕು ಬಾಳಿರುವ
ನುಡಿ ಏಕೆ ಇಷ್ಟೆಸಂಪತ್ತ ಪಡೆದಿದೆ, ಏಕೆ
ಇದಕೆ ಮಿಗಿಲಾಗಿ ಬಾಳದು? ಕನ್ನಡವೆ ಮುಖ್ಯ
ಕನ್ನಡವೆ ಮೊದಲು ಕನ್ನಡವೆ ನಮ್ಮುಸಿರೆಂದು
ತಕ್ಕಷ್ಟು ಸಂಖ್ಯೆಯಲಿ ಕನ್ನಡದ ಮಕ್ಕಳು
ಶಪಥ ಮಾಡದೆಹೋದರೀ ಮುನ್ನ ಬಲ್ಲವರು.

ಎಲ್ಲರೂ ಗೀರ್ವಾಣಭಾಷಾಪ್ರವೀಣರೇ?
ಬಲ್ಲವರ ಮೆಚ್ಚಿಸುವ ಅವಸರದ ಬಾಳ್ವೆಯಲಿ
ಕನ್ನಡಕೆ ಎರಡನೆಯ ಪೀಠವನು ಹಾಕಿದರು.
ಎಂದು ಹೇಳುತ ಇವರು ಸಂಸ್ಕೃತದ ಪಾಂಡಿತ್ಯ
ಕನ್ನಡದ ಬೆಳವಣಿಗೆಯನು ತಡೆಯಿತೆನ್ನುವರು.
ಪಾಂಡಿತ್ಯವನು ಕುರಿತ ನುಡಿ ಪಂಡಿತರ ತಾಗಿ
ಹಿರಿಯಣ್ಣನವರ ಭಾವವ ತಪ್ಪು ತಿಳಿದವರು
ಇವರು ಸಂಸ್ಕೃತದ ಹಗೆಯೆಂದಿವರ ದೂರಿದರು.
ದಿಟಕೆ ಇವರಾತ್ಮದಲಿ ಒಳಿತು ಸಾಹಿತ್ಯ ಅದು
ಯಾವುದೇ ಇರಲಿ ಪ್ರೇಮವೆ ಹೊರತು ಬೇರೊಂದು
ಎಣಿಕೆಗೆಡೆ ಇರಲಿಲ್ಲ. ಕನ್ನಡದ ರನ್ನನನು
ಎಂತು ಅಂತೇ ಇವರು ಸಂಸ್ಕೃತದ ವಾಲ್ಮೀಕಿ
ಕಾಳಿದಾಸವ್ಯಾಸರನು ಹಿರಿಯರೆಂದೆತ್ತಿ
ನಾಡಿನಲಿ ಮೆರೆಸಿದರು. ತಮಿಳ ತಿರುವಳ್ಳುವರ್
ಕಂಬರನು ತಿರುವಾಚಕಂ ಶಿಲಪ್ಪದಿಕಾರಂ
ಕವಿಗಳನು ತೆರೆದಕಣ್ಣಲಿ ನೋಡಿ ನೆರೆಮೆಚ್ಚಿ
ಬಲ್ಲವರ ಎದುರು ಹೊಗಳಿದರು. ಕನ್ನಡ ಕಾವ್ಯ
ಹೊಸದಿನಕೆ ತಕ್ಕಂತೆ ಬೆಳೆಯಲೆಳಸಿತೆಯಾವ
ಗುಣಗಳನು ಬೆಳಸಿಕೊಳಬೇಕು ಅಂತೇ ಯಾವ
ದೋಷಗಳ ದೂರ ನಿಲ್ಲಿಸಬೇಕು ಎಂಬುದನು
ದಿನವೆಲ್ಲ ಸಾರಿದರು. ಕಾವ್ಯವನು ಕುರಿತ ಈ
ಹತ್ತುಮಾತಿನಲಿ ಎಂತಂತೆ ಮತವನು ಕುರಿತು
ತತ್ತ್ವವನು ಅಂತೇ ಸಮಾಜ ಶಾಸ್ತ್ರವ ಕುರಿತು
ಹೊಸ ವಿಚಾರದ ಒಂದು ಪಥವನೇ ಹಿಡಿದಿವರು
ಹಳೆಯ ಒಳ್ಳಿತನುಳಿಸಿಕೊಂಡು ಹೊಸಬಳ್ಳಿತನು
ಬೆಳೆಯುವುದು ಎಂತೆಂದು ತೋರಿದರು. ಕರ್ನಾಟ
ಒಂದು ಕೂಡಲಿ ಎಂದ ನಮ್ಮ ಹಿರಿಯರ ಕನಸ

ನಮ್ಮ ದಿನದಲಿ ಮುಂದುವರಿಸಿದರು ಹಿರಿಯಣ್ಣ.
ಇದಕೆಂದು ಇವರು ನಾಡೆಲ್ಲವನು ಸುತ್ತಿದರು.
ಜನವ ಕಂಡರು, ನೂರು ಸಭೆಯೆದುರು ಮಾತಾಡಿ
ತಮ್ಮ ಆಸೆಯನು ಜನತೆಯ ಮನದಿ ನೆಟ್ಟರು.
ಮೈಸೂರಿನರಮನೆಯ ಕನ್ನಡದ ಜನವೊಪ್ಪಿ
ಕರ್ಣಾಟಕದ ರತ್ನಸಿಂಹಾಸನಾಧೀಶ
ಎಂದೆಂಬ ನಮ್ಮ ಒಡೆಯರ ಬಿರುದು ನಿಜವೆನಿಸಿ
ಮೈಸೂರು ಉಳಿದು ಕನ್ನಡ ನಾಡು ಒಂದಾಗಿ
ಜನತೆ ನಮ್ಮರಸರಲಿ ಕನ್ನಡದ ಸಂಸ್ಕೃತಿಯ
ಮೇಟಿಯನು ಗುರುತಿಸಲಿ ಎಂದಿವರು ಬಯಸಿದರು.
ಬಹುವಿಧದ ಕೃತಿಗಳನು ರಚಿಸಿ ಹೊಸ ಸಾಹಿತ್ಯ
ಸತ್ಯಧರ್ಮಗಳ ಸೇವೆಯನು ಮಾಡುವ ರೀತಿ
ಇಂತೆಂದು ಕಲಿಸಿದರು; ಇಂತು ನಡೆಯಿರಿ ಎಂದು
ಎಳೆಯರಿಗೆ ದಾರಿಯನು ತೋರಿದರು.

ಮೊದಲಿನಲಿ

ಇಂಥ ಸಾಹಿತ್ಯದ ಪುರೋಹಿತರ ಹೆಸರಿಸಿ
ನೆರೆದ ಕೆಳೆಯಲಿ ಎರಡನೆಯ ಹೆಸರು ಯಾರದೆನೆ
"ನನಗೆ ಸಾಹಿತ್ಯಗೀಹಿತ್ಯಗಳ ಗಂಧವೂ
ಇಲ್ಲಪ್ಪ, ಬೇಕೆನೆ ಅಯೋಡೊಫಾರಂ ಕೊಳ್ಳಿ"
ಎಂಬ ಡಾಕ್ಟರದು. ಸಾಹಿತ್ಯ ಗೀಹಿತ್ಯಗಳ
ಗಂಧವಿಲ್ಲದ ಈ ಮಹಾತ್ಮ ಆಡುವ ಮಾತು
ಸತತವೂ ಸಾಹಿತ್ಯ, ಹಾಸ್ಯ. ಹಾಸ್ಯದ ವಿಷಯ
ವೈದ್ಯಕಿಯಮಾತಿಂದ ಮೊದಲಾಗಿ ಲೋಕದಲಿ
ಯಾವ ಸಂಗತಿಯನೂ ಸ್ಪರ್ಶಿಸದೆ ಬಿಟ್ಟಿಲ್ಲ.
ಜೊತೆಗೆ ಈ ಹಾಸ್ಯವೋ ಆ ಕ್ಷಣದ ಹೊಳಹಿನದು.
ಒಮ್ಮೆ ಮಿತ್ರರು ಒಂದು ಆಂಗ್ಲಕತೆಯನು ಹಿಡಿದು
ಇವರೆದುರು ಬಂದರು. ಅದು The Ex-wife ಎಂಬ

ಕತೆ. ಡಾಕ್ಟರದ ನೋಡಿ, "ಸರಿಯೆ why husband"
ಎಂದು ಹೇಳಿದರು. X Y ವರ್ಣಗಳ ಮೇಲೆ
ಇವರ ಈಶ್ಲೇಷೆ ಆ ಕ್ಷಣವೆ ಹುಟ್ಟಿತು. ಒಮ್ಮೆ
ತರುಣನೊಬ್ಬಾತ ಇವರೆಡೆ ಬಂದು ಯಾವುದೋ
ತನ್ನ ಸಂಗತಿ ಹೇಳಿಕೊಂಡ. ಡಾಕ್ಟರು, "ಸರಿ;
ಇದಕೆ ಔಷಧ ಪ್ಯಾರ ಥೈರಾಯಿಡ್; ಅದ ಕೊಂಡು
ದಿನಕೆ ಎರಡೆರಡು ಮಾತ್ರೆಯ ತಿನ್ನಿ," ಎಂದರು.
ತರುಣ, ಅಪ್ಪಣೆ, ಎಂದು ಹೋದ; ಮರುದಿನ ಬಂದ,
"ಡಾಕ್ಟರೆ, ಪ್ಯಾರ ಥೈರಾಯಿಡ್ ಊರಲಿ ಎಲ್ಲು
ದೊರೆಯದಿದೆ; ಥೈರಾಯಿಡ್ ಎಷ್ಟು ಬೇಕೆಂದರೂ
ಇದೆ, ಅದನು ತಿನ್ನಲೇ" ಎಂದ. ಡಾಕ್ಟರು ಅದಕೆ,
"ಪ್ಯಾರ ಥೈರಾಯಿಡ್ ಊರಲ್ಲಿಲ್ಲ, ಥೈರಾಯಿಡ್
ಇದೆ, ಎಂದು ಅದಬಿಟ್ಟು ಇದನು ತಿನ್ನುವಿರಲ್ಲ?
ಅಣ್ಣ, ಶಾಸ್ತ್ರೀ ಹತ್ತಿರಕೆ ಹೋಗು ಎಂದರೆ
ಅವರಿಲ್ಲ ಸ್ತ್ರೀ ಹತ್ತಿರಕೆ ಹೋಗಲೇ ಎಂದು
ಕೇಳುತಿರುವಿರಿ, ಒಳ್ಳೆ ಬುದ್ಧಿವಂತರು, ಹೋಗಿ
ಪ್ಯಾರ ಥೈರಾಯಿಡ್ ಎಲ್ಲಿದೆ ಕೇಳಿ ತರಿಸಿರಿ"
ಎಂದು ನಕ್ಕರು. ಮಾತಿನಲಿ ಯುಕ್ತಿ, ಔಚಿತ್ಯ;
ಜೊತೆಗೆ ಬುದ್ಧಿಯ ವೇಗ. ಈ ಯುಕ್ತಿಯನು ಇವರು
ಒಮ್ಮೆ ಭಾಷಾಶಾಸ್ತ್ರದಲಿ ಬಳಸಿರುವುದುಂಟು.
ಇಂಗ್ಲಿಷ್ ಚಿಕನ್ ಚಿಕ್ಕ ಹೆನ್ ಎಂಬದೊಂದಿವರ
ನಿರ್ವಚನ. ಕನ್ನಡದ ಮಾತುಗಳ ಮಧ್ಯದಲಿ
ಇಂಗ್ಲೀಷ ಬೆರಸುವುದು ಇವರಗತಿಬೇಸರ.
ಒಂದು ಬಟ್ಟಲು ಹಾಲು ಎಂಬುದನು ಜನ ಒಂದು
ಕಪ್ಪು ಹಾಲು ಎನಲು, ಛೆ ಛೆ ಬಿಳಿದಾಗಿರುವ
ಸರಿಯಾದ ಹಾಲ ಕುಡಿಯಿರಿ ಎನ್ನುವರು ಇವರು.
ಯಾರೊ ಬಂದವರು "ಡಾಕ್ಟರ್ ನಿನ್ನೆ ನೈಟಂದ

ನನ್ನ ಥ್ರೋಟ್ ಬಹಳ ಪೆಯ್ನ್ ಆಗುತ್ತಿದೆ ಸ್ವೈಟೆಲ್ಲ
ಬಹು ಸಫರ್ ಮಾಡಿದೆ" ಎಂದರು. ಡಾಕ್ಟರು
"ಸ್ವೈಟೆಲ್ಲ ಬಹು ಸಫರ್ ಮಾಡಿದಿರ? ರೈಟ್ ಓ
ಈಗ ಚೇರ್‌ಮೇಲೆ ಸಿಟ್ ಮಾಡಿ; ಮೌತ್ ತೆರೆಯಿರಿ.
ನಾನು ಥ್ರೋಟ್ ಸೀ ಮಾಡುತ್ತೇನೆ" ಎಂದರು. ಇವರ
ಇಂಥ ಮಾತಿಗೆ ಲೆಕ್ಕವಿಲ್ಲ. ವೈದ್ಯಕಿಯಲೋ
ಇವರ ವಿಖ್ಯಾತಿ ದೇಶವನೆಲ್ಲ ತುಂಬಿದೆ.
ರೋಗವನು ಗುರುತಿಸುವ ಚತುರೇನು! ರೋಗಕ್ಕೆ
ಔಷಧವನೊರೆವ ನಿಶ್ಚಯವೇನು! ಅಂತೆಯೇ
ಶಸ್ತ್ರವನು ಹಿಡಿದು ಕೈನಡುಗದಂದಗಲಿ ನರ
ಸ್ನಾಯುವನು ಛೇದಿಸುವ ಬಂಧಿಸುವ ಧೀಮಂತ
ಚಳಕ ಲಾಘವವೇನು! ಭರತವರ್ಷದ ಬಹಳ
ಹೆಸರಾಂತ ಶಸ್ತ್ರವೈದ್ಯ ಪ್ರವೀಣರೊಳಿವರು
ಹೆಸರ ಪಡೆದಿಹರು. ಗಾಂಧೀ ಮಹಾತ್ಮರು ನಮ್ಮ
ನಾಡಿನಲಿ ಆರೋಗ್ಯವನು ಪಡೆಯೆ ಬಂದಂದು
ಅವರ ದೇಹಸ್ಥಿತಿಯ ಸಾವಧಾನಿಸಿ ನೋಡಿ
ಪರಿಚರಿಸಿ ದೇಶಸೇವೆಯನು ಗೆಯ್ದರು ಇವರು.
ಎಚ್ಚರದ ಮಾತ ಹೇಳುವುದರಲಿ ಡಾಕ್ಟರು
ಹಾಸ್ಯವನು ಬಳಸುವರು: ಊಟದಲಿ ಮಿತಿಯಿರಲಿ
ಎಂಬದನು ಇವರು ಹೇಳುವ ರೀತಿ ಬಹು ಚೆನ್ನ.
"ಸ್ವಾಮಿ, ಇಕೊ ನೋಡಿ. ಒಬ್ಬೊಬ್ಬನೂ ಲೋಕಕ್ಕೆ
ಹೊರಟು ಬರುವಾಗ ಊಟದ ಚೀಟಿಯೊಂದನು
ಪಡೆದು ಬರುವನು. ಜೀವನಾಂಶವೆಂದೋ ಏನೊ
ಹೇಳುತಾರಲ್ಲ ಅದರಂತೆ. ಆ ಪಟ್ಟಿಯಲಿ
ಬರೆದಿರುವ ಆಹಾರ ಮುಗಿಯಿತೋ ಇಲ್ಲಿಂದ
ಅವನು ಹೊರಡುವುದೆ. ಆತುರಪಟ್ಟು ರುಚಿಗೆಂದು
ಹೆಚ್ಚು ಹೆಚ್ಚಾಗಿ ತಿಂದರೆ ಅವನ ಆಹಾರ

ಬೇಗ ಮುಗಿಯುವುದು, ಬೇಗನೆ ಅವನು ಹೊರಡುವನು.
ಆತುರವ ತಡೆದು ಮಿತವಾಗಿ ಉಂಡರೆ ಚೀಟಿ
ಬಹುದಿವಸ ಬರುವುದು, ಬಹುದಿವಸ ಬಾಳುವನು. ”
ವೈದ್ಯದಲಿ ಮಾತಿನಲಿ ಚತುರೆಂತು ಅಂತೆ ಈ
ನಮ್ಮ ಹಿರಿಯರು ಹತ್ತು ಜನಕೆ ಉಪಕಾರಿಗಳು.
'ಬಾಲ್ಯದಲಿ ಸಾಮಾನ್ಯವಾದ ಬಾಳುವೆ ನಡಸಿ
ಕಷ್ಟವೆಂಬುದ ಕಂಡು, ಬಡವರೆನೆ ಮನಕರಗಿ
ಸಾಹಾಯ್ಯ ಮಾಡುವರು. ಅಭಿಮಾನಿ, ಗುಣಶಾಲಿ,
ಸತ್ಯವಂತರು, ಎಲ್ಲರೀತಿಯಲು ಹಿರಿಯಣ್ಣ
ಗೆಳೆಯ ಎನಲರ್ಹರಾದಂಥ ಸಂಭಾವಿತರು.

ವೆಂಕಪ್ಪ ಮೂರನೆಯ ಹಿರಿಯವರು. ಮೈಸೂರ
ಕನ್ನಡದ ಕೆಲಸಕೆಲ್ಲಕು ಹಿರಿಯರಾಗಿರುತ
ಇವರೆ ಈ ಉತ್ಸವನ ನಡಸಿದರು ಎನಬಹುದು.
ಆದರೂ ತಾವು ಏನಾದರೂ ಮಾಡಿದುದು
ಯಾರಿಗೂ ತೋರದಂಪದಲಿ ನಡಸಿರುವರು.
ಎಲ್ಲರಿಗು ಉಸಿರಾಗಿ ಯಾರಿಗೂ ಇಂತೆಂದು
ತಿಳಿಯದವೊಲಿಹವೊಂದು ಇಂದ್ರಜಾಲವನಿವರು
ಸಾಧಿಸಿರುವರು. ನಮ್ಮ ಉತ್ಸವದ ಯೋಚನೆ
ಮೊದಲು ಇವರದೆ. ಅದನು ಚಿಕ್ಕಪ್ಪ ಬಳಸಿದರು.
ಇದನು ಈ ಸಲ ನಡಸುವುದು ಎನಲು ಒಡನೆಯೇ
ಯಾರು ಯಾರನು ಎಂತು ಜೊತೆಗೂಡಿಸುವುದೆಂದು
ಯಾರಿಂದ ಕತೆ ಹೇಳಿಸುವುದೆಂದು ವಿವರವನು
ವೆಂಕಪ್ಪ ಗುಣಕಾರಹಾಕಿ ನಿಶ್ಚಯಿಸಿದರು.
ತಾವು ಮಾಡುವ ಕೆಲಸ ಏನಿದ್ದರೂ ಸಮ,
ತಿಳಿಸಿದರೆ ಸಾಕು ಅದಮಾಡುವೆನು, ಎಂದರು.
ಇದು ಇವರ ಪದ್ಧತಿ. ತನ್ನ ತನ್ನದ ಬಿಟ್ಟ
ಒಬ್ಬ ತತ್ತ್ವಜ್ಞಾನಿ ಸಾಧಕರು ವೆಂಕಪ್ಪ.

ನಾವು ಬಹುಜನ ಎಂತು ಅಂತೆ ಎಳೆತನದಲಿ
ಬಡತನವ ಕಂಡವರು, ಈ ದಿನಕೆ ತಕ್ಕನಿತು
ಅನುಕೂಲವಂತರಾಗಿದ್ದು ಆ ಮೊದಲಂತೆ
ಸರಳ ಜೀವನವನೇ ನಡಸುವರು. ಯಾರಿಗೂ
ಕಷ್ಟವಾಗುವ ಒಂದು ಮಾತನೂ ಆಡರು.
ಆದರೂ ತಮಗೆ ಸರಿಯೆನಿಸದಿಹ ಸಂಗತಿಗೆ
ಏನೇನೆ ಆದರೂ ಒಪ್ಪರು. ಇದು ಎಂತು
ಎನ್ನುವುದು ಎಲ್ಲರಿಗು ಹಿರಿದೊಂದು ಅಚ್ಚರಿ.
ಒಪ್ಪಿದರೆ ಮೌನದಲಿ ನೆರವಾಗಿ ನಿಲ್ಲುವರು ;
ಒಪ್ಪರೇ ಮೌನದಲಿ ತಮ್ಮಂತೆ ನಡೆಯುವರು.
ಇಂತು ವೆಂಕಪ್ಪ ಬಹು ಜನದ ಮನವನು ಒಲಿಸಿ
ಹಿರಿದಾಗಿ ಬಾಳಿಹರು. ಕಾವ್ಯವನು ಬರೆಯುವುದು
ತನಗೇನಸಾಧ್ಯವಲ್ಲ ; ಆದರೂ ಇವರು
ಬರೆಯುವ ಪ್ರವೃತ್ತಿಯವರಲ್ಲ. ಬರೆದುದ ನೋಡಿ
ಕೇಳಿ ಮೆಚ್ಚಿಗೆಯ ನುಡಿಯಿಂದ ಬರೆದಾತರನು
ಮುಂದೆ ನಡಸುವುದಿವರ ಸಂತೋಷ. ಬಹುವೇಳೆ
ಕೃತಿಯೊಂದ ತಂದವರು ಇವರ ಬಳಿಯಲಿ ಓದಿ
“ ತಮ್ಮಭಿಪ್ರಾಯವೇನು ” ಎಂದು ಕೇಳುವರು.
ವೆಂಕಪ್ಪ, “ ನಮ್ಮಭಿಪ್ರಾಯ ಏನಾದರೂ
ಫಲವೇನು ? ಕೇಳುವವನೊಬ್ಬೊಬ್ಬನದು ಒಂದು
ರುಚಿ. ನನಗೆ ಇಂತಿಹುದು ಎಂದು ನಾ ಹೇಳುವನು.
ಇದರಿಂದ ಕೃತಿಯ ಯೋಗ್ಯತೆಯ ಅಳಿಯುವರುಂಟೆ ?”
ಎನ್ನುವರು. ಮತ್ತೊಂದು ವೇಳೆ, “ ಏಕೋ ಏನೊ
ನನ್ನರುಚಿಯೀ ಒಂದು ದಾರಿಯಲಿ ಹರಿದಿಹುದು.
ಇತರರಿಗೆ ಎಂತೊ, ನನಗೇನೊ ಈ ಕೃತಿಯಿಂದ
ಬಹುತೃಪ್ತಿ, ” ಎನ್ನುವರು. ಮೊದಲ ಮಾತಿನ ಅರ್ಥ
ಕೃತಿ ತನಗೆ ಒಪ್ಪಲಿಲ್ಲೆಂದು. ಎರಡನೆಯದರ

ಭಾವ ಅದು ತನಗೆ ಬಹುವಾಗಿ ಒಪ್ಪಿತು ಎಂದು.
ಆದರೀ ಮಾತುಗಳ ಅವರು ನುಡಿಯುವ ತೆರನು
ಅವರೊಂದು ತೀರ್ಮಾನವನು ತಿಳಿಸುತಿಹುದನೇ
ಮರೆಸುವುದು ; ಕೆಲ ಹೊತ್ತು ಅದರ ದಿಕ್ಕೇನೆಂದು
ತಿಳಿಸದಂತಿಹುದು. ಶಿಷ್ಯರು ತಪ್ಪು ದಾರಿಯಲಿ
ಬಹುಧೈರ್ಯದಲಿ ಹೆಜ್ಜೆಯಿಡುತ ಇವರೊಪ್ಪಿಗೆಯ
ಬಯಸುವುದು ಉಂಟು. ವೆಂಕಪ್ಪ ಅಂತಹ ವೇಳೆ
"ಅಪ್ಪ, ನೀವೇನು ತಿಳಿವಳಿಕೆ ಸಾಲದ ಜನವೆ ?
ನಮಗೆ ಸಂದೇಹಗಳೆ ವಾಡಿಕೆ. ಅವು ಎಷ್ಟು ?
ಸಂದೇಹ ಹೆಚ್ಚಾಗಿ ಲೇಖನಿಯೆ ನಡೆಯದು.
ನೀವು ಬರೆಯುವ ವರವ ಪಡೆದು ಬಂದಿರುವಿರಿ.
ಬರೆಯುತಿರಿ ; ಯೋಚಿಸಿರಿ; ಬರಹ ತಾನೇ ಚನ್ನ
ಆಗುವುದು" ಎನ್ನುವರು. ಇದ ಕೇಳಿದಭಿಮಾನಿ,
ವೆಂಕಪ್ಪ, ತಮ್ಮ ರುಚಿ ಬರೆವ ತನ್ನಯ ರುಚಿಗೆ
ಸಮನಲ್ಲ ಎಂದು ಹೇಳಿದರೆಂದೊ, ಇಲ್ಲವೇ
ಅವರು ಓದುವ ಭಕ್ತ, ಬರೆವಾತ ಭಕ್ತಿಗೆ
ಗುರಿಯಾದ ವರಕವಿ ಮಹಾಲೇಖಕನು ತಾನು
ಎಂದು ಹೇಳಿದರೆಂದೊ, ತಿಳಿಯುವನು. ಏನಿರಲಿ
ಎಚ್ಚರಿಕೆಯುಳ್ಳ ಲೇಖಕ ಕುಲಕೆ ಇವರಿಂದ
ತುಂಬ ಉಪಕಾರವಾಯಿತು.

ರಾಮಕೃಷ್ಣಯ್ಯ

ಇವರ ಅವಳಿಗೆ ಜವಳಿ ಕನ್ನಡದ ಸೇವಕರು.
ವೆಂಕಪ್ಪನವರ ನುಡಿಯಲಿ ಎಷ್ಟು ನಯ ಅಷ್ಟು
ನೇರ ಇರುವುದು ಇವರ ಮಾತಿನಲಿ. ವೆಂಕಪ್ಪ
ವಾದಕಂಜುವ ತೆರದೊಳಿವರು ಅಂಜರು. ಸತ್ಯ
ಇದುವೆ ಎಂದಾರೆ ಏನನು ಹೇಳಿಬರು ಸರಿಯೆ
ರಾಮಕೃಷ್ಣಯ್ಯ, ಅದು ಅನಿತು ಒಮ್ಮುಖವಲ್ಲ,

ನಿಮಗೆ ಸರಿಯೆಂದು ತೋರುವುದು ಬೇರೊಬ್ಬರಿಗೆ
ಸರಿಯಲ್ಲವೆಂದು ತೋರುವುದೆಂದು ತಡೆಯುವರು.
ಇದರಿಂದ ಮಾತು ಬೆಳೆಯುವುದು : ಆದರೆ ಜನಕೆ
ನಿಜ ಯಾವುದೆಂದು ತಿಳಿಯಲು ಸುಕರವಾಗುವುದು.
ಭಾವುಕರು : ಬಾಳಿನಲಿ ಬಂದ ಸುಖಕಷ್ಟಗಳ
ಅಪ್ಪಿ ಹಿಡಿಯುವ ಮನಸಿನವರು. ಇಂತಿರಲಿವರು
ಬಾಳ ಸುಖಕಿಂತ ಮಿಗಿಲಾಗಿ ಕಷ್ಟವ ನೆನೆದು
ಕರಗಿ ಆರಿದ ಕಲ್ಲಿನಂತಿಹರು. ಲೋಕದಲಿ
ಎಲ್ಲಿ ಯಾರೋ ಪಡುವ ಬೇನೆಯನು ತನ್ನದೇ
ಎಂಬಂತೆ ಅನುಭವಿಸಿ ಕಹಿಯಾಗಿ ನೋಯುವರು.
ಒಪ್ಪಿಕೊಂಡವರೊಡನೆ ಇವರ ಕೆಳೆ ಬಹುಗಾಢ ;
ಒಪ್ಪದವರೊಡನೆ ಬೇಸರಕೂಡ ಅಂತೆಯೇ
ಬಹುತೀವ್ರ. ಇವರು ನಮ್ಮನು ಒಪ್ಪಿಕೊಂಡಿಹರೊ
ಇಲ್ಲವೋ ಎಂಬದನು ಬಳಿಗೆ ಸಾರಿದ ಮಂದಿ
ಬೇಗನೆಯೆ ತಿಳಿಯುವರು. ಇವರೀ ಮನೋಧರ್ಮ
ಇವರ ನುಡಿಯಲಿ ಅಂತೆ ಬರಹದಲಿ ಕಾಣುವುದು.
ಚುರುಕಾದ ಬುದ್ಧಿ, ಧೈರ್ಯದ ವಾದ, ಅರ್ಥವನು
ಚೆನ್ನತಿಳಿಸುವ ಮಾತು, ಇವು ಇವರ ಲೇಖನದ
ಭಾಷಣದ ಮೂಲ ಲಕ್ಷಣ. ಎಲ್ಲಿ ವೆಂಕಪ್ಪ,
ಲೋಕ ಈ ಹೊತ್ತು ಏನಾಗಿಹುದು ಅದು ನಮಗೆ
ಒಳಿತು, ಒಳಿತಲ್ಲವೇ ಅನಿವಾರ್ಯ, ಅದ ಕುರಿತು
ನಾವು ಅತಿಯಾಗಿ ಚಿಂತಿಸುವುದರ್ಥವಿಹೀನ
ವ್ಯಾಪಾರ, ಎನ್ನುವ ತಟಸ್ಥರಾಗಿರುವಂತೆ
ಕಾಂಬರೋ ಅಲ್ಲಿ ಈ ನಮ್ಮ ಗೆಳೆಯರು, ಲೋಕ
ಮೊದಲಿಂದ ಕೊನೆಯುವರೆಗೂ ತಪ್ಪಿ ನಡೆಯುತಿದೆ,
ಅದ ನಡಸುತಿಹ ದೈವ ನಮಗೆ ಇದ ಸರಿಮಾಡು
ಎಂದು ಹೇಳುತಿದೆ, ಬಾಳಿರುವಷ್ಟು ದಿನ ನಾವು

ನಮ್ಮ ಸುತ್ತಣ ಜೀವನವನು ಸರಿಪಡಿಸುತ್ತ
ದುಡಿಯುತಿರಬೇಕು, ಎಂಬಂತೆ ಕಾಂಬರು. ಅವರು
ಪೂರ್ವಿಕರು ಯಾವುದ ನಿವೃತ್ತಿ ಎಂದರೊ ಅದನು
ಸತ್ಯಧರ್ಮದಲನುಷ್ಠಿಸಿದಂತೆ ಈ ಗೆಳೆಯ
ಪೂರ್ವಿಕರು ಹೊಗಳಿಹ ಪ್ರವೃತ್ತಿ ಮಾರ್ಗವನಂತು
ಸತ್ಯಧರ್ಮದಲನುಷ್ಠಿಸುತಿಹರು. ಕತೆಗಾರ,
ವಾಗ್ಮಿ, ಸಂಪಾದಕ, ವಿಮರ್ಶಕ, ಉಪಾಧ್ಯಾಯ
ರಸಿಕ, ಪಂಡಿತ, ದೈವಭಕ್ತ, ಅನ್ವೇಷಕ,
ಇಂತಪ್ಪ ಬಹುತೆರನ ಕಾರ್ಯದಲಿ ಮುನ್ನಡೆದು
ರಾಮಕೃಷ್ಣಯ್ಯ ನಾಡಿನ ಸೇವೆಗೆಯ್ದಿಹರು.

ಸುಬ್ಬಯ್ಯ ಬಹುಶಃ ಇದೇ ವಯಸ್ಸಿನ ನಮ್ಮ
ಒಬ್ಬ ಹಿರಿಯರು. ತುಂಬ ಸಾತ್ವಿಕರು. ಕನ್ನಡದ
ಯಾವುದೇ ಕೆಲಸದಲಿ ಎಂದಿಗೂ ಜೊತೆಗಿರುತ
ಕೆಲಸಗಾರರ ಊರೆಗೋಲಾಗಿ ಮೌನದಲಿ
ಸೇವೆಸಲ್ಲಿಹುತಿಹರು. ಈ ಕಾರ್ಯವನು ನಾನು
ಮಾಡುವೆನು, ಬನ್ನಿ, ನೆರವಾಗಿ ನಿಲ್ಲಿರಿ, ಎಂದು
ಒಂದುದಿನ ಒಬ್ಬರನು ತಾವು ಕರೆದವರಲ್ಲ.
ಯಾರೆ ಆಗಲಿ ಸಾರಿ, ಈ ಕಾರ್ಯವನು ನಾನು
ಮಾಡುವೆನು, ನೆರವ ನೀಡಿರಿ, ಎಂದು ಕರೆದರೇ
ಕೆಲಸ ಒಳಿತೆಂದು ತೋರಿದ ಒಡನೆ ಸುಬ್ಬಯ್ಯ
ಸದ್ದುಮಾಡದೆ ಬಂದು ನೆರವಾಗಿ ನಿಲ್ಲುವರು.
ಇಂಥಸೇವೆಯಲಿವರು ಬೇಸರವ ಕಾಣರು.
ಹಿಡಿದೊಂದು ಕೆಲಸವನು ವರುಷವರುಷದ ದಿವಸ
ದಣಿವೆಂಬುದೇನಿಲ್ಲವೆಂಬಂತೆ ಸುಬ್ಬಯ್ಯ
ನಡಸಿರುವ ತೆರನ ಹೊಗಳಲು ನನಗೆ ಅಳವಲ್ಲ.
ಮುಂದೆ ನಿಲುವವರಲ್ಲ, ನಿಲಿಸಲಿಲ್ಲವೆ ಎಂದು
ಚಿಂತಿಸುವರಲ್ಲ. ಇಂತಾಗಿ ಬಹು ವೇಳೆಯಲಿ

ಇವರು ಬೆನ್ನುರಿಯ ದುಡಿದೇ ಕೆಲಸ ನಡೆದರೂ
ಬಹುಮಂದಿಗಿದರ ಅರಿವಿಲ್ಲ, ಜನ ಅರಿಯಲಿ
ಎಂದಿವರು ಬಯಸಿದವರಲ್ಲ. ಕನ್ನಡ ಅಷ್ಟೆ
ಇವರ ಸೇವೆಯ ಕೊಳ್ಳಲಿಲ್ಲ; ಜನ ಜೀವನದ
ಬಹುತೆರನ ಕಾರ್ಯರಂಗದಲಿ ಈ ಹಿರಿಯರು
ಜನಕೆ ಸೇವೆಯ ಸಲ್ಲಿಸಿಹರು. ಎಲ್ಲೆಡೆಯಲೂ
ಮನಸು ನಿರ್ಮಲ, ನಿರಾಡಂಬರದ ನಡೆನುಡಿ,
ಶ್ರದ್ಧೆ, ನಿಶ್ಚಲ ನಿಷ್ಠೆ, ಸತ್ಯವಂತಿಕೆಯಿಂದ
ಲೋಕಸೇವಕರಪ್ಪೆವೆಂಬೆಲ್ಲರಿಗೆ ಒಂದು
ಆದರ್ಶವಪ್ಪಂತೆ ನಡೆದಿಹರು. ಮೇಲಾಗಿ
ಹರೆಯ ಕಳೆದಿದ್ದರೂ ಕಿರಿಯರೆಂಬಂದದಲಿ
ಸರಳರಾಗಿಹರು. ಒತ್ತಾಯದಲಿ ಕೆಳೆಯ ಜನ
ಕತೆ ಹೇಳಿ, ಇತ್ತ ಬನ್ನಿರಿ, ಅಲ್ಲಿ ಹೋಗಿರಿ,
ಎಂದು ಬೇಡಲು ಅದನು ಹಿರಿಯರೆಸಗಿಡ ಬೆಸನು
ಎಂಬಂತೆ ನಡೆಸಿ ಮುಗಿಸುವರು.

ರಘುನಾಥಯ್ಯ

ಇವರ ಜೊತೆಯಲಿ ಹೊಗಳತರನಾದ ಸಹಧರ್ಮಿ.
ಮಾತನಾಡುವುದಿಲ್ಲ: ಯಾವುದೇ ಕೆಲಸವಿರೆ
ಕರೆದೊಡನೆ ಬಂದು ದುಡಿಯುವನು. ಮೈಸೂರಿನಲಿ
ಬೆಳೆದು ಓದಿದನು; ಗಡಿನಾಡಿನಲಿ ಜೀವನವ
ನಡಸುತಿರುವನು. ಸತ್ಯವಂತರಿಗೆ ಲಾಯರಿಕೆ
ಸರಿಹೋಗದೆಂಬರಲ್ಲವೆ ಮಂದಿ? ರಘುನಾಥ
ಇದಕೆ ಅಪವಾದ. ಲಾಯರ್ ಹೌದು; ಕೆಲಸದಲಿ
ಶಕ್ತನೂ ಹೌದು; ಅಂತೇ ಸತ್ಯವಂತನೂ
ಹೌದು. ಏನೇ ಆದರೂ ಬಾಯಬಿಡೆನೆಂಬ
ಮೌನವ್ರತಾಚಾರಿ ಪುಣ್ಯಾತ್ಮ ಇವನೆಂಥ
ಲಾಯರಾದಾನೆಂದು ನನಗೊಂದು ಸೋಜಿಗ.

ಒಂದುಸಲ ನೋಡಿದೆನು: ಎಚ್ಚರದಿ ನುಡಿವನುಡಿ ;
ಎಷ್ಟು ಅನಿವಾರ್ಯ ಅಷ್ಟೇ ; ಯಾವ ಮಾತನೂ
ಬೇಡವೆಂಬಂತಿಲ್ಲ ; ಬಿಟ್ಟು ನಡೆವಂತಿಲ್ಲ ;
ಆವೇಶ ಆಕ್ರೋಶಗಳಿಗೆ ಎಡೆಯೇ ಇಲ್ಲ.
ಯಾರೆಷ್ಟು ಗಜರಿದರು ಒದರಿದರು ಮೆಲ್ಲನೆಯೆ
ಮರು ನುಡಿವ ಹಟ. ಇದೇ ಇವನ ಗೆಲವಿನ ಗುಟ್ಟು.
ಹೊಸತರಲಿ ಕೆಲಕಾಲ ಕಾದುವವರಿಗೆ ಇದರ
ಮರ್ಮ ತಿಳಿಯದೆ ಇತ್ತು. ನ್ಯಾಯಪತಿಗಳು ಈತ
ತಮ್ಮ ಕೆಲಸವನು ಸುಳುಮಾಡುತಿರುವುದ ಕಂಡು
ಉಳಿದ ಲಾಯರಿಗೆ ತೋರದ ಗೌರವವನಿವಗೆ
ತೋರತೊಡಗಿದರು. ತಿಳಿಯಿತು ಮಂದಿ ; ಮುತ್ತಿತು.
ನ್ಯಾಯವನು ಬಿಡದೆ ಅನ್ನವನು ಗಳಿಸುತ ಗೆಳೆಯ
ಗಾಂಧೀ ಮಹಾತ್ಮ ಹೂಡಿದ ಅಸಹಕಾರದಲಿ
ನಾಡಸೇವೆಗೆ ರಾಜಕೀಯದಲಿ ಕೈಯಿಕ್ಕಿ
ನಾಯಕರಜೊತೆಗೆ ನಾಯಕನಾಗಿ ಹೆಣಗಿದನು ;
ಹಲವುಸಲ ಸೆರೆಯ ಹೊಕ್ಕನು ; ಬಾಯಬಿಡದಾತ
ಹಿರಿಲಾಯರಾದಂತೆ ಸಾಮಾನ್ಯಮೂರ್ತಿಯೇ
ಆಂಗ್ಲರಾಡಳಿತ ಅಗಿಯಲು ಬಾರದಂತಿಪ್ಪ
ಕಬ್ಬಿಣದ ಕಡಲೆಯಾದನು. ಹೆಮ್ಮೆ ಇನಿಸಿಲ್ಲ.
ಹುಲ್ಲಮಂತ್ರಿಸಿ ಅಸ್ತ್ರ ಮಾಡಿದ ಮಹಾತ್ಮರನು
ಗುರುವೆಂದ ಬುದ್ಧಿವಂತಗೆ ಹೆಮ್ಮೆ ಬಹುದೆಂತು ?
ವಿದ್ಯಾರ್ಥಿದೆಸೆಯಲಿವನನು ಮಂದಿ ಇದು ಒಂದು
ಮಂಕು ಎಂದದು ಉಂಟು. ಅದೆ ತರುಣ ಈ ದಿವಸ
ಅಂದಿನಾ ಮಿತವಚನ, ಸಾವಧಾನತೆ, ವಿನಯ,
ಅಂದು ಒಳಗಿದ್ದು ಇತ್ತೀಚೆ ಬೆಳಕಿಗೆ ಬಂದ
ನಾಡೊಲುಮೆ ಕೆಚ್ಚಿಂದ, ತನ್ನ ಸುತ್ತಿನ ಹತ್ತು
ಹೆಸರಾಂತ ಹಿರಿಯರಲಿ ತಾನೊಬ್ಬನಾಗಿಹನು.

ಮಂಗೇಶ ನಾಮ ರಘುನಾಥನಿಗೆ ಅರಿವರುಷ
ಕೊರೆವರುಷ ಕಿರಿಯುವರು. ಹೆಸರು ತೋರಿಸುವಂತೆ
ಮಂಗಳೂರಿನ ಕಡಲನಾಡಿಂದ ಬಂದವರೊ,
ಬಂದ ಹಿರಿಯರ ಕುಮಾರರೊ, ಬೆಂಗಳೂರಿನಲಿ
ಬೆಳೆದು ಓದಿದರು. ಎಳೆತನದ ಕಿರಿಸಾಲೆಯಲಿ
ಬಹು ಬುದ್ಧಿ, ಬಹು ತುಂಟು, ಎಂದು ಹೆಸರನು ಗಳಿಸಿ
ಇಂದಿಗೂ ಅದನುಳಿಸಿಕೊಂಡಿಹರು. ಬೀ.ಎ.ಯಲಿ
ಚೆನ್ನ ಶೀರ್ಗಡೆ ಹೊಂದಿ ಸ್ಪರ್ಧೆಯಲಿ ಮೊದಲಾಗಿ
ಆಡಳಿತದಲಿ ಹಿರಿಯ ಪದವಿಯನು ಪಡೆದಿಹರು.
ಬಹು ಸರಸಿ. ಹಿರಿಯರೊಡನಿರುವಂದು ತಾ ಕಿರಿಯ
ಎಂಬಂತೆ, ಕಿರಿಯರೊಡನಿರುವಂದು ತಾನವರ
ಜೊತೆಮಾತ್ರ ಎಂಬಂತೆ, ನುಡಿಯುವುದು ನಡೆಯುವುದು
ಇವರ ವಾಡಿಕೆ. ನಾಡು ನುಡಿ ಎನಲು ಬಹು ಪ್ರೇಮ;
ಆದರದ ಮರೆಸಿಕೊಂಡೇ ನಡೆವುದಿವರ ಚಟ.
ವಿಸ್ತಾರವಾಗಿ ಓದಿರುವಾತ. ಯಾವುದೇ
ಚರ್ಚೆಯಲಿ ಒಮ್ಮೆ ವೇದದ ಒಂದು ವಾಕ್ಯವನು,
ಜೆಂದ್ ಅವೆಸ್ತದ ಒಂದು ವಾಕ್ಯವನು, ಬೈಬಲಿನ
ಒಂದು ವಾಕ್ಯವನು, ಬಹು ಸುಲಭದಲಿ ಹೇಳುವರು.
ಆದರೂ ಕಲಿವ ಹೊರೆಯಾಗಿ ಹೊತ್ತವರಲ್ಲ.
ಗೀತೆಯನು ಭಾಷ್ಯದ ಸಮೇತ ಓದಿಹರಹುದು;
ಆದರದನಪ್ರಕೃತ ಸಮಯದಲಿ ಪ್ರಕಟಿಸರು.
ಸಂಪ್ರದಾಯದಲಿ ತಮಗೊಳಿತೆಂದು ಕಂಡುದನು
ಒಪ್ಪಿಕೊಂಡೂ ಇವರು ಒಳಿತಲ್ಲವೆನಿಸಿದುದ
ಹಿಂಜರಿಯದೊಲು ನಿರಾಕರಿಸಿಹರು. ಇವರಂತೆ
ಚುರುಕಲ್ಲದಿಹ ನನ್ನ ತೆರನ ಬುದ್ಧಿಯ ಜನಕೆ
ಇವರ ನಡೆ ತುಸು ವಿಲಕ್ಷಣವೆಂದೆ ಕಾಣುವುದು.
ಆಡಳಿತದಲಿ ಎಲ್ಲ ತೆರನ ಜನರೊಡನಡೆವ

ತಮ್ಮಂಥವರು ಅಂಥ ಜನರೊಡನೆ ಕುಳಿತಂದು
ಮಾಂಸ ತಿನಬೇಕು ವಿಸ್ಕೀ ಕುಡಿಯಬೇಕೆಂದು
ಇವರ ಮತ : ಇದನಿವರು ನಡಸಿಯೇಬಿಟ್ಟರು.
ಆದರೂ ರುಚಿಗೆಂದು ದಿನದಿನವು ಆಮಿಷವ
ಉಣಲಿಲ್ಲ, ವಿಸ್ಕಿಯನು ಕುಡಿಯರು. ಚರ್ಚೆಯಲಿ
ನೀವು ಹೊಸತೆಂಬಂತೆ ಏನನೇ ಹೇಳಿದಿರಿ :
ತಾವದನು ತಿಳಿದಿದ್ದರೂ ಕಾಣದಂದವೇ
ಅದರ ವಿವರವನು ಕೇಳುವರು ; ನೀವದ ನಿಜಕೆ
ತಿಳಿದಿಹರ ಎಂದು ನೋಡುವರು ; ತಿಳಿದಿದ್ದಿರೋ
ಒಪ್ಪಿಕೊಳ್ಳುವರು ; ತಿಳಿದಿಲ್ಲವೋ ತಿದ್ದುವರು.
ಈ ಕ್ಷಣ ಬಹು ಪ್ರೇಮ ಬಹುಭಕ್ತಿಯನು ನುಡಿದು
ಕ್ಷಣ ಕಳೆದು ಅದು ನಾನು ಸುಮ್ಮನಾಡಿದ ಮಾತು
ಎಂದು ಕಾಡುವರು. ನಿಜವಾಡುವುದು ಸರಿಯೆಂದು
ತಮಗೆ ತೋರಿದ ವೇಳೆ ಅದ ನುಡಿಯಬೇಡೆಂದು
ಯಾವ ಹಿರಿಯಧಿಕಾರಿ ಅಧಿಕಾರಿಮತ್ತಾತ
ಬೆಸಸಿದರೆ ಸಗ್ಗಿ ನಡೆಯುವರಲ್ಲ. ಅದರಿಂದ
ಕಷ್ಟ ಒದಗಿತೆ ಅದನು ನಗುನಗುತ ಕೊಳ್ಳುವರು.
ಮೊತ್ತದಲಿ ಮಂಗೇಶರಾವ ಅಂತಿಂತೆಂದು
ನಾಲ್ಕು ಮಾತಿನಲಿ ಬಣ್ಣಿಸಿ ಮುಗಿಸೆ ತಗುವಂಥ
ಸಾಮಾನ್ಯತರದ ಹಿರಿಯವರಲ್ಲ. ಪಾಶ್ಚಾತ್ಯ
ಪೌರ್ವಾತ್ಯ ವಿದ್ಯೆ ಸಂಸ್ಕೃತಿ ಧರ್ಮಕಲ್ಪನೆ
ಯಾವುದೊ ವಿಚಿತ್ರಲಗ್ನದಲಿ ಸಮ್ಮೇಳವಿಸಿ
ಇವರ ಸಂಸ್ಕೃತಿಯ ಪಡೆದಿವೆ ಎನಲು ಸಲ್ಲುವುದು.

ಇವರನಂತರ ಕೃಷ್ಣಮೂರ್ತಿ. ಒಮ್ಮುಖದಿಂದ
ಹಿರಿಯರಲಿ, ಅಂತೆ ಒಮ್ಮುಖದಿಂದ ಕಿರಿಯರಲಿ,
ಸೇರಿರುವ ಚದುರರು. ಉಪಾಧ್ಯಾಯ ವೃತ್ತಿಯನು

ಕೆಲವು ದಿನ ನಡಸಿದರು; ಆ ಬಳಿಕ ಶಾಲೆಗಳ
ಮೇಲ್ವಿಚಾರಣೆಯ ಅಧಿಕಾರದಲಿ ನಡೆದರು.
ಅದರನಂತರ ಉಪಾಧ್ಯಾಯ ವೃತ್ತಿಗೆ ಜನವ
ಸಿದ್ಧಪಡಿಸುವ ಹಿರಿಯುಪಾಧ್ಯಾಯರಾದರು.
ಬಹುತೆರನ ಈ ಎಲ್ಲ ಕೆಲಸದಲಿ ತನ್ನೆದುರು
ಬಂದ ಮಂದಿಯನು, ಬಾಳಿನ ಎಲ್ಲ ವಿವರವನು,
ಕೃಷ್ಣಮೂರ್ತಿ ಸಹಾನುಭೂತಿ ಕೌತುಕದಿಂದ
ನಿರ್ಮಲಾಂತಃಕರಣದಿಂದ ದೃಷ್ಟಿಸಿ ಜಗದ
ಬದುಕೆನಲು ನಗೆಮರುಕ ಬೆರೆತ ತಮ್ಮದೆ ಆದ
ಒಂದು ನಿಲುವನು ಸಾಧಿಸಿಹರು. ಎಳೆತನದಿಂದ
ಪ್ರಭುದೇವ ಬಸವಣ್ಣ ಮುಂತಪ್ಪ ಶಿವಶರಣ
ಭಕ್ತವೃಂದದ ವಚನ ಸಾಹಿತ್ಯವನು ಕಲಿಸಿ
ಅದರ ಬೋಧೆಯನು ಉಸಿರಲಿ ತುಂಬಿಕೊಂಡಿಹರು.
ಇಂತಾಗಿ ಇವರು ಸಭೆಯೊಂದರೆದುರಲಿನಿಂತು
ಮಾತಾಡತೊಡಗಿರಲು ನುಡಿ ಮುತ್ತುಮುತ್ತಾಗಿ
ಮೆಲುಮೆಲನೆ ಒಂದೊಂದೆ ಬಂದು ಆಡಿದ ವಾಕ್ಯ
ಹಾರವೆಂಬಂತೆ ತೋರುವುದು. ಅನುಭವದಿಂದ
ಮೆಯ್ಗೊಂಡ ಶುದ್ಧಸುಂದರ ಹಾಸ್ಯ ಈ ಮಾತ
ಮುಖ್ಯ ಲಕ್ಷಣ. ವಾಕ್ಯವನು ನುಡಿವ ಹೊತ್ತಿನಲಿ
ಮಧ್ಯೆ ಅರ್ಥವ್ಯಕ್ತಿಗಾಗಿ ಅದ ನಿಲಿಸುವುದು,
ಅರ್ಥ ಸಭಿಕರ ಮನವ ಮುಟ್ಟಿತೆಂಬುದ ತಿಳಿದು
ಅದನು ಮುಂದರಿಸುವುದು, ಇಂತಿವರು ಭಾಷಣವ
ಒಂದು ಕಲೆ ಮಾಡಿಹರು. ವಚನಗಳನಲ್ಲದೆ
ಕನ್ನಡದ ಹಿರಿಯ ಕವಿ ಯಾರನೂ ಬಿಡದೆ ಬಹು
ಚೆನ್ನ ವ್ಯಾಸಂಗ ಮಾಡಿಹರು. ನಾ ಕಲಿತಿಹುದು
ಬಹಳವೇನೂ ಇಲ್ಲ ಎನ್ನುತ್ತ ತಾವು ಬಹು
ಕಲಿತವರು ಎಂದು ತಿಳಿದಿಹರ ನಾಚಿಸುವಂತೆ

ಪಾಂಡಿತ್ಯವನು ಪಡೆದು ಗಂಭೀರವಾಗಿಹರು.

ದತ್ತೋಜಿ ಕನ್ನಡದ ನಮ್ಮ ಹೊಸ ಕಾವ್ಯವನು
ಮುಗಿಲಿಗೇರಿಸಿದೊಬ್ಬವರಕವಿ. ಹೆಸರಿನಲಿ
ಮನೆತನ ಮಹಾರಾಷ್ಟ್ರವೆನ್ನುವುದು ಕಾಣುವುದು.
ಪೇಷ್ವೆಗಳ ಕಾಲದಲಿ ಇಲ್ಲ ಅದಕೂ ಪೂರ್ವ
ಇವರ ಹಿರಿಯರು ಬಂದು ಇಲ್ಲಿ ನೆಲಸಿರಬೇಕು.
ಮನೆಮಾತು ಈಗಲು ಮರಾಟಿ. ಎಳೆತನದಿಂದ
ಕಷ್ಟವನು ಕಂಡವರು. ಜನದ ಕಷ್ಟವ ನೋಡಿ
ಮರುಗಿಹರು. ತಾವು ಕಷ್ಟಕೆ ಅಂಜುವವರಲ್ಲ;
ಅದರಲೇ ದೈವ ಇರುವುದ ಗುರುತಿಸಿರುವರು.
ದೃಷ್ಟಿ ಲೋಕವ ತೀವ್ರ ನೋಡುವುದು, ತಿಳಿಯುವುದು.
ಬುದ್ಧಿ ಹುಟ್ಟು ಸೂಕ್ಷ್ಮ: ಊಹೆ ಅದಕೂ ಸೂಕ್ಷ್ಮ.
ಇಂತಿರುತ ಇವರಿಗೆ ಅದೃಷ್ಟ ದೃಷ್ಟದ ತೆರನೆ
ಎದುರಾಂತು ಕಾಣುವುದು. ಇಂತು ಕಂಡುದನೊರೆವ
ನಯ ಚೆಲುವು ಬಲದ ನುಡಿ: ಓದಿ ಕಲಿತಿರುವಂತೆ
ಕೇಳಿ ಕಲಿತುದು. ನಾಡ ಜನದ ಬಾಳಲಿ ಬೆರೆತು
ಬಾಳಿರುವರಾಗಿ ಮಾತಿನ ಭಂಗಿ ಕನ್ನಡದ
ಕಸ್ತೂರಿ ಕಂಪು ಸೂಸುವುದು. ಸಂಸ್ಕೃತ ಆಂಗ್ಲ
ಕನ್ನಡ ಮರಾಟಿ ಸಾಹಿತ್ಯವನು ಚೆನ್ನಾಗಿ
ಕಲಿತಿರುವ ಇವರು ಕವಿಗಳಲಿ ಅಪರೋಕ್ಷವನು
ಸಾಧಿಸಿದ ಮಂದಿಯನು ಮನತೆತ್ತು ಮೆಚ್ಚಿಹರು.
ಅಂತೆ ಇವರಿಗೆ ತತ್ತ್ವ ಧರ್ಮದಲಿ ಸಲ್ಲಲಿತ
ಸುಲಭ ಒಳಹೊಗಲು. ಉನ್ನತ ತತ್ತ್ವ ಲೋಕದಲಿ
ಬುಡಮೇಲು ತಲೆಕೆಳಗು ಆಡುತಿಹ ಆಟವನು
ನೋಡಿ ನಗುವುದ ಕಲಿತ ಇವರ ಮಾತಲಿ ತಕ್ಕ
ಹಾಸ್ಯ ಮರಮರಳಿ ಮುಖವಿಕ್ಕುವುದು. ಇಂತಪ್ಪ

ಜೀವ, ಅನುಭವ, ರಸವಿಚಾರ, ನುಡಿ ಭಂಗಿಗಳ
ಹೊಸಪಾಕ ನಮ್ಮ ದತ್ತೋಜಿ ಹಾಡುವ ಕವಿತೆ.
ಹಾಡುವುದು ಎಂದಿಹೆನು: ದತ್ತೋಜಿ ಸಭೆಗಳಲಿ
ತಮ್ಮ ಕೃತಿಯನು ತಾವೆ ವಿವರಿಸುತ ಹಾಡುವರು.
ಕಂಠ ಸಾಮಾನ್ಯ; ಆದರೆ ಗಾಯನದ ದೇಸಿ
ಅವರದೇ; ಅದರ ಮಾಯೆಗೆ ಸಿಲುಕದವರಿಲ್ಲ.
ಇಷ್ಟು ಸುಲಭವೆ ಎಂದು ಅಂತೆ ಹಾಡಲು ತೊಡಗಿ
ಗಾಯಕರು ಕೂಡ ಆ ವೈಖರಿಯ ಸಾಧಿಸರು.
ಮೇಲಾಗಿ ಮಾತು; ಮಾತನು ಮೀರಿ ತುಂಬಿರುವ
ಭಾವ; ಅದು ಕಣ್ಣಿನಲಿ ಹೊಳೆಯುತಿರೆ ಸಭೆಯೆದುರು
ತನ್ನ ಶಕ್ತಿಯಬಲ್ಲ ಗಾರುಡಿಯೊ ಮಾಂತ್ರಿಕನೊ
ತನ್ನತಾನೇ ಮರೆತು ನೇಯ ತೊಡಗಿದ ಒಂದು
ಮೋಡಿಯೆನೆ ಸೋರಿ ಹರಿಯುವ ಸುಸ್ವರವಿತಾನ.
ಬರೆವುದೋದುವುದೆಂತು, ಒಲಿದಗೆಳೆಯರ ಜೊತೆಗೆ
ನುಡಿವುದೂ ಅಂತೆ ಇವರಿಗೆ ಕಾವ್ಯರಚನೆಯೆ.
ಮಾತಿನಲಿ ದತ್ತೋಜಿ ಹೊತ್ತುಗೊತ್ತರಿಯರು.
ಆ ಮಾತೊ ಗಂಗಾಪ್ರವಾಹ. ಪ್ರವಾಹವೆನೆ
ಗುರಿಯರಿತು ಗುರಿಯ ಮರೆಯದೆ ತುಂಬು ಹೊಳೆಯಾಗಿ
ವಿಸ್ತಾರವಾಗಿ ಚೇತನವ ಪಾವನಮಾಡಿ
ಗಂಭೀರವಾಗಿ ಹರಿಯುವುದು. ಸಾಹಿತ್ಯದಲಿ
ಮಾತಿನಲಿ ಇಂತು ಧೀಮಂತನಾಗಿರುವ ಕವಿ
ಮುಂಗಟ್ಟು ಅಂಗಡಿಯ ದಿನದಿನದ ಕೊಡುಕೊಳೆಯ
ವ್ಯಾಪಾರದಲಿ ಒಂದು ಹಸುಕೂಸಿಗೆಣೆಯಲ್ಲ.
ಹಸುಕೂಸು ಮನಸು ಮಾಡಿದೊಡೆ ದತ್ತೋಜಿಯನು
ಆಡುತಾಡುತ ಬೆಳ್ಳಿಸುವುದು. ಬೆಳ್ಳಿಸಿಕೊಂಡು
ದತ್ತೋಜಿ ಆ ಕ್ಷಣಕೆ ಕೋಪಿಸಿ ಮರುಕ್ಷಣವೆ
ಇದುವೆ ಜೀವನ ಎಂದು ನಕ್ಕು ಮನ ತಿಳಿಯುವರು.

ಮೌನ ಮಾತಿಗೂ ಮಿಗಿಲು; ಕಲ್ಲಿನಲಿ ಆತ್ಮ ಇದೆ: ಇದನೀವು ಬಲ್ಲಿರಾ? ಇಲ್ಲ? ಬನ್ನಿರಿ ಇಲ್ಲಿ; ಸೀತಣ್ಣನನು ನೋಡಿ: ಈ ಹದನ ಗ್ರಹಿಸುವಿರಿ. ಕವಿ; ಬರೆದ ಬರಹ ತಕ್ಕಷ್ಟಿಹುದು; ಕೆಲವು ಕೃತಿ ಜನಮೆಚ್ಚಿ ನಾಡಿನಲಿ ನಾಣ್ಯವಾಗಿವೆ ಕೆಲವು. ಅಂತೆ ಚೆಲುವಾದ ಬಲತರುವ ಕೃತಿ ಬೇರೆಯುವು ಹಲವಿಹವು: ಮಂದಿ ಇವುಗಳ ಹೆಸರ ಕಾಣರು. ಸೀತಣ್ಣ ಎಂದೆ ಆಗಲಿ ತಮ್ಮ ಕಾವ್ಯವನು ಸಭೆಗಳೆದುರಲಿ ಓದುವವರಲ್ಲ. ಎಂತಿರಲಿ ತಾವಾಗಿ ತಾನು ಇಂತಹ ಪದ್ಯಬರೆದಿಹೆನು ಎಂದು ಹೇಳುವರಲ್ಲ. ಇಂತಾಗಿ ಇವರ ಕೃತಿ ಜನಕೆ ಎಸಗಲು ಬಲ್ಲ ಒಳ್ಳಿತನು ಎಸಗಿಲ್ಲ. ಲೋಕಸಾಹಿತ್ಯದ ಸುಗಾಢ ಪರಿಚಯದಿಂದ ಇವರ ರುಚಿ ತುಂಬ ಹಸನಾಗಿ ಹದವಾಗಿಹುದು. ಬಾಳು ಇವರನು ತೀರ ಕಷ್ಟದಲಿ ನಾದಿಹುದು. ಜನರಾದರೂ ಇವರಿಗನ್ಯಾಯುವಮಾಡಿಹರು. ಏನೆ ಆದರು ಬಾಯತೆರೆಯದಿಹ ಇವರ ಪರಿ ಹಿರಿಯ ತಾಣಗಳ ಜನರಿಗೆ ಹೆಮ್ಮೆಯೆಂಬಂದ ಕಾಣುವುದು. ಸಮಯ ಬಂದಾಗ ಅಂತಪ್ಪ ಜನ ಇವರಿಗೆ ವಿರೋಧವನು ಮಾಡುವರು. ಅವರೇನು? ಹತ್ತಿರದ ಜನ ಕೂಡ ಇಂಥ ಗಾಂಭೀರ್ಯವನು ಗಾಂಭೀರ್ಯವೆಂದು ತಿಳಿಯರು. ನಮ್ಮ ಕಂಡರೆ ಇವರಿಗಕ್ಕರೆಯಿಲ್ಲವೆಂದೆ ನೆಂಟರ ತಿಳಿವು. ಇದಕೆಲ್ಲ ಇವರ ಉತ್ತರ ಮೌನ. ಷೇಕ್ಸ್‌ಪಿಯರ್ ತನ್ನೊಂದು ನಾಟಕದ ನಾಯಕಿಯ ವಿಷಯ She Sat like Patience on a monument smiling at Grief ಎಂದು ಬಣ್ಣಿಸಿರುವನು. ನಮ್ಮ ಸೀತಣ್ಣ

ಆ ನಾಯಕಿಯ ತೆರನ ಒಬ್ಬ ನಾಯಕ. ಬಾಳು
ಕಷ್ಟವನು ತರುವುದೇ, ತರಲಿ, ಆಯಿತು ಏನು?
ಸಹಿಸಿದರೆ ಮುಗಿಯಿತು. ಸಹಿಸುವುದು ಸಾಧ್ಯವೆ?
ನೋಡುವ; ನಮ್ಮಿಂದ ಆದಷ್ಟು ಸಹಿಸುವ.
ಇದು ಇವರ ರೀತಿ. ಎಂದಾದರೂ ಈ ಮಾತ
ನನಗೆ ತಿಳಿಸಿರುವರೆಂದಲ್ಲ. ಈ ತಿಳಿಸುವುದು
ಇವರ ಪದ್ಧತಿಯಲ್ಲ; ನನಗಿಂತು ತೋರಿಹುದು.
ಇವರ ಈ ಜಿನಮನೋಧರ್ಮ ಹೆನ್ಲೀ ಕವಿಯ
ಅಪರಾಜಿತನ ಆತ್ಮಗೀತದಲಿ ಬಹುಚೆನ್ನ
ವರ್ಣನೆಯ ಪಡೆದಿಹುದು. ಇಂಥ ವಜ್ರಕಠೋರ
ದಾರ್ಢ್ಯದಿಂದಿವರು ಜೀವನ ಪಥವ ನಡೆದರೂ
ಕಷ್ಟದಲಿ ಸಿಲುಕಿರುವ ಇತರ ಜೀವವ ಕಂಡು
ಹೂವಂತೆ ಬಾಡುವರು, ಬೆಣ್ಣೆಯೆನೆ ಕರಗುವರು.
ದೇವರನು ಕರೆದು ಯಾವುದೆ ನೋವ ಭಾರವನು
ಅವನ ಹೆಗಲಲಿ ಹೇರುವುದು ಇವರಿಗೊಪ್ಪದು.
ಈ ಮನೋಧರ್ಮ ಈ ಅನುಭವದ ಫಲವಾಗಿ
ಲೋಕ ಇವರಿಗೆ ಸುಖದ ನೆಲೆಯಲ್ಲ, ಚೇತನದ
ಶಿಕ್ಷಣ ಪರೀಕ್ಷಣದ ಗರಡಿಯೆಂಬಂತಿಹುದು.
ಅಂತೆ ಸೀತಣ್ಣ ಜಗದಿತಿಹಾಸದಲಿ ಬಹುಶಃ
ನೋವ ಸಂಗತಿಗಳನೆ ಆಯ್ದೆತ್ತಿ ಹಿಡಿದವರು
ಅಲ್ಲೆಲ್ಲ ನೋವ ಮೂಡಿಸಿದ ಬೇರನು ಬಿಡಿಸಿ
ಅದರ ಪರಿಯೇನೆಂದು ತೋರುವರು. ಮೊತ್ತದಲಿ
ಬುದ್ಧಿ ಅನುಭವ ಯೋಚನೆಗಳ ವಿಸ್ತಾರದಲಿ
ಸೀತಣ್ಣ ನಮ್ಮ ನಾಡಿನ ಇಂದಿನತ್ಯಂತ
ಮೇಲ್ತರದ ಸಾಧಕರ ಪಂಕ್ತಿಯಲಿ ನಿಂತಿಹರು.

ಇವರನಂತರ ನಮ್ಮ ರಂಗಪ್ಪನನು ಬಿಟ್ಟು

ಬೇರೆ ಯಾರನು ಬಣ್ಣಿಸಲಿ?  ಒಂದು ಕಾಯಕದ
ಜೊತೆಯ ಜನ: ಬಹಳ ಹತ್ತಿರದ ಗೆಳೆಯರು ಕೂಡ.
ಎನಲು ರೀತಿಯಲಿ ಒಂದೆಂದಲ್ಲ.  ಸೀತಣ್ಣ
ಹಾಗ ನಗೆ ಮುಪ್ಪಾಗ ಚಿಂತೆಯೆನೆ ರಂಗಪ್ಪ
ಮುಪ್ಪಾಗ ನಗೆ ಹಾಗ ಯೋಚನೆ.  ಇವರು ಸಹ
ಕಷ್ಟವನು ಬಲ್ಲವರೆ; ಆದರೂ ಸೀತಣ್ಣ
ಪಟ್ಟನಿತನಿವರು ಪಟ್ಟಿಲ್ಲ.  ಅಲ್ಲದೆ ಮನವೆ
ಬಾಳಬೆಳಕಿನ ಕಡೆಗೆ ಮುಖವ ಮಾಡಿಹುದಹುದು.
ರಂಗಪ್ಪ ಹರೆಯದಲಿ ಕಟ್ಟುಮಸ್ತಾದಾಳು.
ಮದಲಿಂಗ ಅವನ ಒಲವಿನ ಜಾಣೆಯನು ಕುರಿತ
ಕತೆಯು ಮಲೆನೆಲ ಇವರ ಹೆತ್ತು ಬೆಳಸಿದ ನಾಡು.
ಅವರ ಕತೆ ಸಂತೋಷದಲಿ ಮುಗಿಯಿತೆಂದೊರೆವ
ಶುಭಪಾಠವಿಹುದನಿವರೊಮ್ಮೊಮ್ಮೆ ಹೇಳುವರು.
ಅಂತ ಹೊತ್ತಲಿ ನನಗೆ ಇವರೆ ಆ ಸಂತಸದ
ಮದಲಿಂಗ ಮರಳಿ ಮೆಯ್ವೆತ್ತಂತೆ ಕಾಣುವರು.
ಕೃತಿಗಳನು ರಚಿಸಬಲ್ಲರು: ಆದರೂ ಬಹಳ
ರಚಿಸಿಲ್ಲ. ಬಹಳ ಓದಿಹರು; ಸತ್ಕೃತಿಯಿಂದ
ಬಹಳ ಆನಂದವನು ಪಡೆದಿಹರು; ಆ ಸುಖದ
ಭರದಲಿರಬೇಕು ಕೃತಿರಚಿಸಬೇಕೆಂಬೊಂದು
ಹಂಬಲನು ಕಳೆದುಕೊಂಡಿಹರು.  ಹಿರಿಯರು ಕಾಡಿ
ಒತ್ತಾಯ ಮಾಡಿರಲು ಇನಿತನಿತ ಬರೆದಿಹರು.
ಬರೆದ ಅನಿತಿನಿತು ಮುದ್ದಾಗಿಹುದು.  ಅದರಲೂ
ಗದ್ಯ ಬಹು ಮುದ್ದು. ನುಡಿ ಹವಳ ಮುತ್ತನು ಕೋದ
ಚಂದವೊಂದನು ತೋರುವುದು.  ಕಾವ್ಯಕತೆಗಳನು
ಬರೆಯರಾದರು ಹೆರರು ಬರೆದ ಕತೆಕಾವ್ಯವನು
ಒಲವಿಂದ ನೋಡುವರು, ಚೆನ್ನವೆನೆ ಮೆಚ್ಚುವರು,
ಬಾಯ್ತುಂಬ ಹೊಗಳುವರು.  ಇಂದಿನ ವಿಮರ್ಶೆಯಲಿ

ನಾಲ್ಕು ಸಾಹಿತ್ಯವನು ಚೆನ್ನಬಲ್ಲವರಾಗಿ
ಪೂರ್ವಪಶ್ಚಿಮದ ಸಾಹಿತ್ಯ ಶಾಸ್ತ್ರವನರಿತು
ಕಾವ್ಯರತ್ನಪರೀಕ್ಷೆಯಲಿ ದಕ್ಷರೆನಿಸಿರುವ
ಕೆಲವೆ ಜನರಲಿ ನಮ್ಮ ರಂಗಪ್ಪ ಒಬ್ಬರು.

ದತ್ತೋಜಿಯಂತೆ ಪುಟ್ಟಣ್ಣ ಕನ್ನಡದ ಹೊಸ
ಕವಿತೆಯನು ಮುಗಿಲಿಗೇರಿಸಿದೊಬ್ಬವರಕವಿ.
ಮಲೆನಾಡಿನಲಿ ಹುಟ್ಟಿ ಬೆಳೆದವರು. ಉತ್ತುಂಗ
ಶಿರದ ಗಿರಿಗಳ ಸಾಲು, ನಡುವೆ ಹರಡಿದ ಕಾಡು,
ಪರ್ವತದ ಕೋಡಿಂದ ಬಿಳಿದಾಗಿ ಕೆಳಗಿಳಿದು
ಹಾಡಿ ಹರಿಯುವ ಹೊನಲು, ಎಳೆಯ ಹುಡುಗನ ಮನವ
ಒಲಿಸಿದವು ನಲಿಸಿದವು ತಣಿಸಿದವು; ಮನ ಊಹೆ
ಉಸಿರುಗಳ ತುಂಬಿ ಬೆಳಸಿದವು ; ವಿದ್ಯೆಯನರಸಿ
ತರುಣ ಮೈಸೂರಿಗೈತಂದಂದು ಜೊತೆಗೈದಿ
ಅಲ್ಲಿ ಇವರನು ರಕ್ಷಿಸಿದವು. ಮೈಸೂರಿನಲಿ
ಲೌಕಿಕದ ವಿದ್ಯೆಯನು ಕಲಿವಂದು ಪುಟ್ಟಣ್ಣ
ರಾಮಕೃಷ್ಣಾಶ್ರಮದ ತಂಪು ನೆರಳಲಿ ಬೆಳೆದು
ಪರಮಹಂಸರ ಅಂತೆ ಅವರ ಪಟ್ಟದ ಶಿಷ್ಯ
ಶ್ರೀ ವಿವೇಕಾನಂದಗುರುಗಳ ಅನುಗ್ರಹದ
ಅಮೃತಸೇಚನದಿಂದ ಆಧ್ಯಾತ್ಮ ಜೀವನದ
ತಳಿರ ತಳೆದರು ; ಮುಂದೆ ಗುರುಕೃಪೆಯ ಬಲದಿಂದ
ತಮ್ಮ ಚೇತನದ ದೈವಾಯತ್ತ ಗುಣದಿಂದ
ಕಾವ್ಯವನು ರಚಿಸತೊಡಗಿದರು. ಬಹುತೀವ್ರದಲೆ
ಸಾಹಿತ್ಯಲೋಕದಲಿ ಅತ್ಯಂತ ಉನ್ನತದ
ಸ್ಥಾನವನು ಸಾರುವರೆ ಶಕ್ತಿ ತಮ್ಮೊಳಗಿಹುದ
ಕಂಡುಕೊಂಡರು, ತೋರಿದರು ; ಕಾವ್ಯಗಳರಚಿಸಿ
ತಾವು ನಲಿದರು, ಅಂತೆ ಸಹೃದಯರ ತಣಿಸಿದರು.

ಕಣ್ಣು ಲೋಕವನು ಕೌತುಕದಿಂದ ನೋಡಿರುತ,
ಕಂಡುದನು ಮನ ನಾದಿ ನುರಿನುರಿಸಿ ಸವಿನೋಡಿ,
ಒಗೆದ ಭಾವಕೆ ಊಹೆ. ತಕ್ಕ ಆಕೃತಿಯೊಂದ
ಒದವಿಸಿರೆ, ಪುಟ್ಟಣ್ಣ ನಿರ್ಮಿಸಿದ ಕತೆಕವಿತೆ
ಗುರಿಮುಟ್ಟಿದಂದು ಚೆಲುವೇ ರೂಪುಗೊಂಡಂತೆ
ತೊಳಗಿ ಬೆಳಗುವವು. ಅಂತೆ ವಿಚಾರ ಗಂಭೀರ;
ಆಶಯ ಉದಾತ್ತ; ದೃಷ್ಟಿ ವಿಶಾಲ; ಗತಿ ಧೀರ.
ಸಾಹಿತ್ಯ ಒಂದು ಅಧ್ವರ, ತಾವು ಅಧ್ವರವ
ಕೈಕೊಂಡ ದೀಕ್ಷಿತರು. ಇದು ನಮ್ಮ ಪುಟ್ಟಣ್ಣ.

ಇನ್ನು ರಾಜಣ್ಣ. ಈ ಉಳಿದವರ ರೀತಿಯಲಿ
ಇವರಾದರೂ ಪಂಡಿತರೆ. ಜೊತೆಗೆ ತಮ್ಮದೇ
ಒಂದೆರಡು ಬೇರೆ ಶಕ್ತಿಗಳ ಪಡೆದಿಹರಹುದು.
ಕಷ್ಟಗಳಕಂಡು ಅವುಗಳ ಕಾವಿನಲಿ ಕರಗಿ
ಕಡುಬಡವ ಕಡೆ ಕಡಮೆಯೆಂಬವರ ನೋವುಗಳ
ತಮ್ಮವೇ ಎಂಬಂತೆ ಅನುಭವಿಸಿ ಮರುಗುವರು.
ತಾವು ಕೆಚ್ಚೆದೆಯಿಂದ ಕಷ್ಟಗಳ ಕಡೆಹಾಯ್ದು
ಬಾಳಿದಂದವೆ ಬೇರೆಯುವರು ಬಾಳಲಿ ಎಂಬ
ಆಶೆಯಲಿ ದುಡಿದಿಹರು. ಎಳತನದಿ ಮೈಸೂರ
ನಗರ ಜೀವನವ, ಅದರಲಿ ನಮ್ಮ ಹರಿಜನರ
ಬಾಳುವೆಯ ರೀತಿನೀತಿಯ, ತೆರೆದ ಕಣ್ಣಿಂದ
ನೋಡಿ ಮನಸಿಗೆ ತಂದುಕೊಂಡಿಹರು. ಇದರಿಂದ
ಆ ಜನರೊಳೊಬ್ಬ ಧೀರಾತ್ಮನನು ಬಣ್ಣಿಸುವ
ಕವಿತೆಯನು ರಚಿಸಿಹರು. ಇದರಂತೆ ಇನ್ನಿಲ್ಲ
ಎಂಬೊಂದು ಚಂದ ಮೂಡಿಹುದು ಆ ಕವಿತೆಯಲಿ.
ಎಲ್ಲಿಯೇ ಇರಲಿ ಸಲ್ಲದುದನೊಲ್ಲದೆ ಅದನು
ಹಿಡಿದೆತ್ತಿ ಜಗಕೆ ತೋರುವುದು, ನಗುವುದು, ನಕ್ಕು

ಚುಚ್ಚುವುದು ಕುಕ್ಕುವುದು : ಈ ಮನೋಧರ್ಮದಲಿ
ರಾಜಣ್ಣ ಬರೆದ ಕೃತಿ ಹಲವಿಹವು. ಅಲ್ಲದೆ
ರಾಜಣ್ಣ, ಬುದ್ಧ ಅಂತೆ. ಜೈನ ಧರ್ಮಗಳ
ಶ್ರದ್ಧೆಯಿಂದಭ್ಯಾಸಮಾಡಿಹರು. ತಿಳಿವಂತೆ
ಇವರ ದುಡಿಮೆಯು ಕೂಡ ವಿಪುಲ. ಮೆಯ್ ದೃಢ, ಮನಸು
ದೃಢ, ದುಡಿವೆನೆಂಬ ನಿಶ್ಚಯ ಇವಕೆ ಸಮನಾಗಿ
ದೃಢವಾಗಿರುತ ನಮ್ಮ ರಾಜಣ್ಣ ಬರೆದಿರುವ
ಪುಸ್ತಕ ಅವೆಷ್ಟೊ ! ಅವುಗಳ ಜಾತಿ ಇನ್ನೆಷ್ಟೊ !
ಇದಕು ಮಿಗಿಲಾಗಿ ಸಾಹಿತ್ಯದಲಿ ರಾಜಣ್ಣ
ಗೆಯ್ದಿರುವ ಸೇವೆಯೆನೆ ಜನ ತಾವೆ ಓದದೆಯೊ
ಓದಿಯೂ ಗ್ರಹಿಸದೆಯೊ ಕಡೆಗಣಿಸಬಹುದೆಂಬ
ಇತರ ಕವಿಗಳ ಕೃತಿಗಳನು ಸಭೆಗಳಲಿ ಓದಿ
ಅಭಿರುಚಿಯ ಬೆಳಸಿಹುದು. ಧರ್ಮಮಾಡುವುದೆಂತು
ಅಂತೆ ಅದನನುಪಾಲಿಸುವುದು ಪುಣ್ಯವ ತಹುದು
ಎಂಬರಲೆ ! ಕಾವ್ಯವನು ರಚಿಸುವುದು ಎಂತಂತೆ
ಅದರರಿವ ಹರಡುವುದು ಇದೆ ರೀತಿ ಪುಣ್ಯಕರ.
ರಾಜಣ್ಣ ಈ ಪುಣ್ಯವನು ಪೂರ್ಣಗಳಿಸಿಹರು.

ಈಗ ಕೌಶಿಕರ ಹೊಗಳುವೆನು. ಕೌಶಿಕ ಇವರ
ಗೋತ್ರ. ಜೇರೆಯ ಗೋತ್ರಸಂಸ್ಥಾಪಕರ ಗುಣ
ಅವರ ಕುಲದಲಿ ಹುಟ್ಟಿದವರಲ್ಲಿ ಕಾಣುವವೊ,
ಕಾಣವೋ. ಕೌಶಿಕ ಮಹಾಮುನಿಯ ಮುಖ್ಯಗುಣ
ಎರಡ ಈ ನಮ್ಮ ಸೋದರರು ತೋರುವುದು ನಿಜ :
ಮೊದಲು, ಯಾವುದೆ ಒಂದು ಕೆಲಸವನು ಕೈಕೊಳಲು
ಎಷ್ಟಾದರೂ ದುಡಿದು ಏನೆ ಕಷ್ಟವ ಸಹಿಸಿ
ಅದನು ಕೊನೆ ಮುಟ್ಟಿಸುವುದು ; ಎರಡನೆಯ ಗುಣ
ಮೂಗ ತುದಿಯಲಿ ಕೋಪ, ಮನದಲ್ಲಿ ಬೆಣ್ಣೆಮೆದು.

ಇದರಿಂದ ಗೆಳೆಯರಿವರನು ಭಗೀರಥ ಎಂದು
ಒಮ್ಮೆ, ಮೆಣಸಿನಕಾಯಿ ರಂಗಪ್ಪ ಎಂದೊಮ್ಮೆ,
ನಕ್ಕು ನುಡಿವರು. ಕೌಶಿಕರು ಎರಡು ಹೆಸರನೂ
ಸ್ವೀಕರಿಸಿ ನಕ್ಕು ನಡೆವರು. ಕಾವ್ಯ ಬರೆಯುವುದು
ಇವರಿಗೇನೋ ಆಗಿಬರಲಿಲ್ಲ ; ಅಂತೆಯೇ
ಕತೆಯನಾಗಲಿ ಬರೆಯುವವರಲ್ಲ ಕೌಶಿಕರು.
ಕತೆಗಳನು ಹೇಳಬಲ್ಲರು. ಸಭೆಗಳೆದುರಿನಲಿ
ವಿವರ ವಿವರವನು ಜೋಡಿಸಿ ಒಂದು ಸಂಗತಿಯ
ಬಿತ್ತರಿಸುವುದರೊಳಿವರದೆ ಒಂದು ಹದ, ಚೆದುರು.
ಇದರಿಂದ ಇವರು ಯಾವುದೆ ಒಂದು ಕಾವ್ಯವನು
ಜನಕೆ ತಿಳಿಸುವ ರೀತಿ ಬಹುಚೆನ್ನು. ಕೌಶಿಕರು
ಜೊತೆಯ ಗೆಳೆಯರ ತೆರನೆ ಬಹು ಒಳ್ಳೆಪಂಡಿತರು.
ಗ್ರೀಕ್ ಭಾಷೆಯನು ಕಲಿತು ಈಸ್ಕಲಿಸ್ ಹೋಮರರ
ಕೃತಿಗಳನು ಮೂಲದಲಿ ಅಭ್ಯಾಸ ಮಾಡಿಹುದು
ಇವರೊಳೊಂದು ವಿಶೇಷ. This thing is Greek to me
ಇದು ನನಗೆ ಗ್ರೀಕ್ ಎನಲು ಆಂಗ್ಲೇಯ ಭಾಷೆಯಲಿ
ನನಗಿದರ ಅರ್ಥ ತಿಳಿಯುತಲಿಲ್ಲ ಎಂದರ್ಥ.
ಗ್ರೀಕ್ ಅಷ್ಟು ಅಪರೂಪ ಭಾಷೆ. ಕೌಶಿಕರಿಗೋ
ಗ್ರೀಕ್ ಕೂಡ ಗ್ರೀಕಲ್ಲ ; ಸುಲಭದಲಿ ತಿಳಿಯುವುದು.
ಮನೆಯಲ್ಲಿ ಒಳ್ಳೆ ಪುಳಿಯೋಗರೆಯನಾಗಾಗ
ಅಡಿಸಿ ಗೆಳೆಯರ ಕರೆದು ಹೊಟ್ಟೆಯನು ತುಂಬುವುದು
ಇವರ ಇನ್ನೊಂದು ಇಂತಪ್ಪುದೆ ವಿಶೇಷಗುಣ.
ಉಳಿದೆಲ್ಲ ಗುಣಕೆ ಎಂತಂತೆ ಗೆಳೆಯರು ಇವರ
ಇದಕಾಗಿಯೂ ಬಹಳ ಮೆಚ್ಚಿಹರು.

ಕಸ್ತೂರಿ

ಮಲೆಯಾಳದಲಿ ಹುಟ್ಟಿಬೆಳೆದು ಹರೆಯದ ದಿನಕೆ
ಮೈಸೂರ ಸೇರಿ ಆಮೇಲೆ ಕನ್ನಡನುಡಿಯ

ಕಲಿತು ಅದರಲಿ ಒಳ್ಳೆ ಕೃತಿಯ ರಚಿಸಿದ ವೀರ
ಮಗುವಾಗಿ ಮಲೆಯಾಳದಲಿ ಬೆಳೆದ ದಿನದಲೂ
ಕನ್ನಡದ ಜನದ ಮಧ್ಯದಿ ಬೆಳೆದರೋ ಏನೊ
ಎಂಬಂತೆ ಕನ್ನಡವನಾಡುವರು ಬರೆಯುವರು.
"ಬಾಳನೆಲ, ಬಾಳಿಸುವ ನೆಲ; ಇದರ ನುಡಿ ನನ್ನ
ತಾಯ್ನುಡಿಯೆ ಸರಿ. ಅಲ್ಲವೆಂಬರೇ, ಚಿಕ್ಕಮ್ಮ;
ಕಲಿವೆನೆನೆ ಬರುವುದು, ಬರೆವೆನೆನೆ ಒಲಿಯುವುದು
ದುಡಿವೆನೆಂದೆನೆ ಅನುಗ್ರಹಿಸುವುದು." ಇಂತೆಂದು
ನಮ್ಮ ಈ ಪುಣ್ಯಾತ್ಮ ಕನ್ನಡವ ಕಲಿತರು.
ಕಲಿತ ಕನ್ನಡವೆಂದು ಕಾಣದೊಂದಂದದಲಿ
ಕನ್ನಡವ ಬರೆದರು. ಮನದ ನಿಶ್ಚಯ ಒಂದೆ
ಅಲ್ಲ ಬಿಡಿ ಇದರೊಳಿವರಿಗೆ ಜಯವತಂದುದು.
ಸೋದರದ ನುಡಿಯೊಂದು ಜಾಯಮಾನವರಿವ
ಸೂಕ್ಷ್ಮ, ಜೊತೆಯಲಿ ಯಾವುದೇ ಒಂದು ಸಂಗತಿಯ
ಹದವರಿತು ರುಚಿಮಾಡುವಂತು ಬರೆಯುವ ಶಕ್ತಿ,
ಇವು ಇವರ ಹುಟ್ಟುಗುಣ ಮೇಲೆ ಲೋಕದ ಬಾಳ
ನೋಡಿ ನಗಬಲ್ಲ ಮನ, ಮನದಿ ಮೂಡಿದ ನಗೆಯ
ಹದಕೆಡದ ಒಂದು ಚಂದದಿ ನುಡಿವ ಸರಸೋಕ್ತಿ.
ಇದು ನಮ್ಮ ಕಸ್ತೂರಿ.

ಇನ್ನೀಗ ದೀಕ್ಷಿತರು.

ದೀಕ್ಷಿತರು ಎನಲು ಇದು ಇವರ ಮನೆ ಹೆಸರೆಂದು
ತಿಳಿಯಬಾರದು. ಗೆಳೆಯರಲಿ ಏನೆ ಮಾತಿನಲಿ
ಚರ್ಚೆ ಬೆಳೆಯಲು ಎಷ್ಟು ಹೊತ್ತಾದರೂ ಎಷ್ಟು
ಜನ ಏನು ಹೇಳಿದರು ಸರಿಯೆ ಸೋಲದೆ ಈತ
ಕೊನೆಯ ಮಾತನು ತಾವೆ ಆಡುವರು. ಇದರಿಂದ
ಮಾತಿನಲಿ ಸೋಲುವವನಲ್ಲೆಂದು ಈ ಗೆಳೆಯ
ದೀಕ್ಷೆ ತಳೆದಿಹರೆಂದು ಕೆಳೆ ಇನಿಸು ಕೊಂಕಿನಲಿ

ಅದಕು ಮಿಗಿಲಾಗಿ ಮೆಚ್ಚಿನಲಿ ಎಳೆತನದಲೇ
ಬಿರುದಕೊಟ್ಟಿತು ಒಳ್ಳೆ ಧೀಮಂತ. ಅಂತೆಯೇ
ಧೀರರೂ ಅಹುದು. ಓದಿನಲಿ ಎಂದೂ ಮುಂದು.
ಸಾಹಿತಿಯ ಮನ, ಬುದ್ಧಿ, ಉಳಿದೆಲ್ಲ ಗುಣ ಉಂಟು.
ಬರೆಯಲೂ ಬಲ್ಲಾತ ; ಒರೆದ ಅಲ್ಪಸ್ವಲ್ಪ
ಚೆನ್ನವೂ ಅಹುದು. ಆದರೆ ಮಾತ ಚಟ ಹೆಚ್ಚು ;
ವಾದದಲಿ ಪ್ರೀತಿ. ನೆಪಸಿಕ್ಕಿದರೆ ಸರಿ, ಒಡನೆ
ಸರಸವನು ಸರಸರನೆ ನುಡಿದು ಚಪಲವ ಕಳೆದು
ಸುಮ್ಮನಾಗುವರು. ಇಂತಿವರ ಸಾಹಿತಿ ಶಕ್ತಿ
ನಾಲಗೆಯ ಕೃತಿಯಾಗಿ ಬರಹವಾಗದೆ ಇಹುದು.
ಇವರ ಮಾತಿನ ಚಮತ್ಕಾರವನುದಾಹರಿಸಿ
ಎರಡು ಸಂಗತಿಯ ಹೇಳುವೆನು. ಆಂಗ್ಲರ ಮೆಚ್ಚಿ
ಅವರಿಗೆ ಸಮಾನ ಇಲ್ಲೆಂದು ನಮ್ಮಲಿ ಒಬ್ಬ
ಹಿರಿಯುವರು ವಾದಿಸುವ ವೇಳೆ ದೀಕ್ಷಿತರು, " ಸರಿ,
ಆದರೂ ಆಂಗ್ಲರೇ ಮೆಚ್ಚಿ ಹಿರಿದೆಂದಿರುವ
ಒಂದೆರಡು ವಿವರವಾದರು ನಮ್ಮ ಚರಿತೆಯಲಿ
ಇರುವುವಲ್ಲವೆ ", ಎಂದು ಕೇಳಿದರು. ಹಿರಿಯುವರು,
" ಅದು ಒಂದೆ ದೌರ್ಬಲ್ಯ ಆಂಗ್ಲರಲಿ. ಇರುವಗುಣ
ಬಹು ಅಲ್ಪವಾದರೂ ಅದನೆತ್ತಿ ಹೊಗಳುವರು.
ಎದುರಾಳಿ ನಿಜದಲೇ ತನ್ನಗುಣ ಹಿರಿದೆಂದು
ತಪ್ಪಾಗಿ ತಿಳಿಯುವನು ", ಎಂದು ನುಡಿದರು. ಅದಕೆ
ದೀಕ್ಷಿತರು, " ಆಂಗ್ಲಜನ ಅಡ್ಡಹಾದಿಗೆ ಇಂತು
ಎಳೆದರೂ ತಮ್ಮಂತೆ, ನಾವು ದಡ್ಡರೆ ಹೌದು,
ಎಂಬುದನು ಮರೆಯದಿಹ ಬುದ್ಧಿವಾನ್ ಇಲ್ಲೊಬ್ಬ
ಅಲ್ಲೊಬ್ಬ ಇರುವುದೇ ಈ ಜನಾಂಗದ ಪುಣ್ಯ, "
ಎಂದು ಮಾತನು ಮುಗಿಸಿದರು. ಬೇರೆ ಒಂದು ಸಲ
ಗೆಳೆಯ ಇವರನು " ಸಾಕೊ ಕತ್ತೆ " ಎಂದನು. ಇವರು

"ಹೇಳಿಕೊ: ನಾ ನಿನ್ನ ಕತ್ತೆ ಎಂಬುದಪಾಯ,"
ಎಂದು ಹೇಳಿದರು. "ಆಹಾ ಇಷ್ಟು ತಿಳಿಯಿತೇ
ನಿನಗೆ" ಎಂದನು ಗೆಳೆಯ. "ಅಯ್ಯೋ ನನಗಿದು ತಿಳಿದು
ಬಹಳ ದಿನವಾಯಿತು. ನಾ ನಿನ್ನ ಕತ್ತೆಯೆನೆ
ಕತ್ತೆ ನನ್ನನು ಒದ್ದು ಕೆಡಹುವುದು."

ಪಟ್ಟಾಭಿ

ನಮ್ಮ ಹೊಸ ಕವಿ ಪರಂಪರೆಯಲ್ಲಿ ಹೆಸರಾಂತ
ಬಹುಪುಣ್ಯಶಾಲಿ ಕವಿ. ಸಂಕೋಚ ವ್ಯೈತಾಳಿ
ಎದುರು ನಿಂತಿತೊ ಎಂಬ ರೀತಿಯಲಿ ನಡೆಯುವರು,
ನುಡಿಯುವರು. ಮನಸು ನವಿರಲಿ ನವಿರು. ಬಾಳಿನಲಿ
ತಮ್ಮೆದುರು ನಡೆಯುತಿಹುದೇನು ಅದನೆಲ್ಲವನು
ತೀವ್ರದೃಷ್ಟಿಯಲಿ ನೋಡುವರು; ನೋಡುತಲಿಹುದ
ತೋರಿಸರು. ಇಂತು ಕಂಡುದ ನವಿರು ಮನಸಿನಲಿ
ಮೆಲುಕು ಹಾಕುವರು; ಭಾವಿಸುತ ಅನುಭವಿಸುವರು;
ಊಹೆಯಿಂದದಕೆ ಬಣ್ಣವ ಕಟ್ಟಿ ಚೆಲುವಾದ
ನುಡಿಯೊಳಾ ಅನುಭವಕೆ ಆಕೃತಿಯ ನೀಡುವರು.
ಉಸಿರ ಸಾರಣೆಯ ರಂಧ್ರದಿ ಬಸಿದು ತಿಳಿಯಾದ
ತಮ್ಮ ಅನುಭವ ಮಾತ್ರವನು ನುಡಿವ ಇವರ ಕೃತಿ
ಎಲ್ಲ ಹೊತ್ತಲು ಒಂದುಗೀತದಂತೆಸೆಯುವುದು.
ಜಗದ ಚೆಲುವನು ಕಂಡು ಸಂತಸ, ಜೀವನದ
ಕಷ್ಟಗಳ ಕಂಡು ಸಂಕಟ, ಎಲ್ಲ ಜೀವವನು
ಕುರಿತು ಕನಿಕರ ಮರುಕ, ದೈವವನು ಕುರಿತರಿವು,
ಬಾಳ ತಲೆಕೆಳಗುಗಳ ನೋಡಿ ನಗೆ, ಎಲ್ಲವೂ
ಇವರದೇ ಆದೊಂದು ನವಿರಾದ ರೀತಿಯಲಿ
ಕಾವ್ಯವಾಗಿಹವು. ಭಾವನೆ ಊಹೆ ಎಂತಂತೆ
ಇವರ ನುಡಿಯೂ ನವಿರು. ತುಂಬ ನೊಂದಿಹ ಜೀವ,
ತುಂಬ ಮೆದುವಾಗಿಹುದು. ಆದರೂ ದೈವವನು

ನಂಬಿರುವ ಚಿತ್ತ ತನ್ನಾಳದಲಿ ಹರ್ಷವನೆ
ಕಾಪಾಡಿಕೊಂಡಿಹುದು. ಸಹಜದಲಿ ಕವಿಯಾದ
ಮನುಜ ತನ್ನನುಭವವ ನಿಷ್ಠೆಯಲುಪಾಸಿಸಲು
ಒಂದು ದರ್ಶನ ಸಿದ್ಧಿಸುವುದೆಂಬುದಕೆ ನಮ್ಮ
ಪಟ್ಟಾಭಿ ಸಾಕ್ಷಿ.

ಗೌರಮ್ಮ ಕನ್ನಡ ನಾಡ
ಕತೆಗಾತಿಯರಲಿ ಹೆಸರಾದವರು. ಹುಟ್ಟಿದುದು
ಬೆಳೆದುದೆಲ್ಲವು ಕೊಡಗಿನಲಿ. ಚೆಲುವ ಬೀಡಾದ
ತನ್ನ ಆ ನಾಡ ಚೆಲುವನು ತನ್ನ ರೂಪಿನಲಿ
ನಡತೆಯಲಿ ಮಾತಿನಲಿ ಇನ್ನೆಲ್ಲ ರೀತಿಯಲಿ
ಪ್ರತಿಬಿಂಬಿಸಿದರು ಗೌರಮ್ಮ. ಎತ್ತರ ಎಂದೆ
ಕಾಂಬ ಆಕಾರ; ಆ ಆಕಾರದಂದವೇ
ಎತ್ತರದ ಮನಸು, ಚೇತನ; ಹೆಣ್ಣ ನಯದೊಡನೆ
ನಯದ ಮೇರೆಯ ಮೀರದೊಂದು ರೀತಿಯ ಧೈರ್ಯ.
ಇದು ಸೋದರಿಯ ಹೆಚ್ಚಿನದು ಒಂದು ಲಕ್ಷಣ;
ಅಂತೆ ಮೆಚ್ಚಿನ ಒಂದು ಲಕ್ಷಣ. ಹರೆಯದಲಿ
ಹೆಜ್ಜೆ ಇಡುತಿದ್ದಂತೆಯೇ ಹೆಣ್ಣ ದೃಷ್ಟಿಯಲಿ
ಲೋಕ ಏನೆಂದು ಕಾಣುವುದೆಂದು ಬಣ್ಣಿಸುವ
ಸಣ್ಣಕತೆಗಳನು ಬರೆದರು. ಹರೆಯದಲಿ ಬರೆದ
ಕತೆಗಳಲಿ ಕಂಡ ಅನುಭಾವ ಅನುಭವ ಇವರ
ಚೇತನದ ಸಂಸ್ಕಾರ ಎಷ್ಟು ಉನ್ನತ ಎಂದು
ತೋರುವಂತಿಹವು. ಸಾಹಿತ್ಯದಲಿ ದುಡಿವಾಕೆ
ಮನೆಯೊಂದರಲಿ ಅಂತೆ ದುಡಿದು ಪತಿ ಸುತ ಜನವ
ಸಾಕಿ ಸೇವೆಯ ಸಲ್ಲಿಸಿದರು. ಲೇಖಕವೃಂದ
ನೆರೆಯಬೇಕಾಗಿಹುದು, ದತ್ತೋಜಿ ಬರಲಿಹರು,
ಎಂದು ರಾಮಣ್ಣ ತಿಳಿಸಲು ಒಡನೆ, ಮೈಸೂರು
ಏನು ದೂರವೆ, ಎಂದು ಪತಿದೈವ ಮಗು ಅಣ್ಣ

ಅತ್ತಿಗೆಯ ಜೊತೆಗೆ ಬಂದವರು ನಂಟರಲಿಳಿದು
ಉತ್ಸವವನೋಡಿ ಗೋಷ್ಠಿಯ ಕಾರ್‍ಯದಲಿ ಸೇರಿ
ಕನ್ನಡಿತಿಯೆಂಬ ಕುಲ ಎಂಥ ಗೌರವದ ಕುಲ
ಎಂಬುದನು ಸೋದರಿಕೆ ಅರಿವತೆರ ನಡೆದರು.

ಶರ್ಮ ವಯಸಿನಲಿ ವೆಂಕಪ್ಪನವರಿಗೆ ತುಸವೆ
ಕಿರಿಯ. ಇವನನು ವರ್ಣಿಸುವ ಮಾತು ಮೊದಲಲೇ
ಬರಬೇಕು. ಉತ್ಸವದ ವಿವರವನು ನಿಶ್ಚಯಿಸಿ
ಎಲ್ಲ ಗೆಳೆಯರಿಗೆ ತಿಳಿಸಿದ ದಿವಸವೇ ಇವನು,
ಎಂಥೆಂಥ ದೊಡ್ಡವರ ಜೊತೆಗೆ ನನ್ನನು ಹಾಕಿ
ಬಣ್ಣಿಸುವೆನೆನೆ ನಾನು ಕತೆ ಹೇಳುವನೆ ಅಲ್ಲ,
ಬಣ್ಣಿಸದೆ ಬಿಡಬೇಕು, ಬಿಡಲಾಗದೋ ನಿನ್ನ
ಬುದ್ಧಿವಂತರು ದೊಡ್ಡವರ ಮಾತುಗಳ ಮುಗಿಸಿ
ನಾಲ್ಕುಮಾತನು ಮಾತ್ರ ಹೇಳು, ಇದು ಸಮ್ಮತವೆ,
ಎಂದು ಕೇಳಿದನು. ಸಮ್ಮತ ಅಲ್ಲ, ಗೆಳೆಯರಲಿ
ಇಂಥ ಸಂಕೋಚ ಒಳಿತಲ್ಲ, ಎಂಬುದ ಹೇಳಿ
ಫಲವೇನು? ಇವನ ಸಂಕೋಚ ಇದ್ದೇ ಇಹುದು.
ಆಗಲಿ, ಒಳಿತು, ಎಂದೆವು. ಓದಿನಲಿ ಎನಸೊ
ಹಿಂದಾಗಿ ಶರ್ಮ ಕಿರಿದೊಂದು ಅಧಿಕಾರದಲಿ
ನಿಂತುಕೊಂಡನು. ತನ್ನ ಅಧಿಕಾರ ಕಿರಿದೆಂದು
ಗೆಳೆಯರೆಣಿಸಿಹರೆಂದು ತಾನೆ ಮನದಲಿ ಗುಣಿಸಿ
ಇಂತಕಾರಣ ತನ್ನ ತಾನೆ ನೋಯಿಸಿಕೊಂಡು
ನಮ್ಮನೂ ನೋಯಿಸುವನು. ಮಾತು ಬೆಳೆಯದೆ
ನಿಂತಿತೇ ಒಳಿತು: ಬೆಳೆಯಿತೊ ತನಗೆ ಉತ್ಸವದ
ಗೊಡವೆಯೇ ಬೇಡ ಎಂದರು ಎಂದ. ಇದು ಇವನ
ಒಂದು ಗುಣ. ಉಳಿದಂತೆ ಬುದ್ಧಿಯಲಿ, ಜೀವನದ
ತಿಳಿವಿನಲಿ, ಇವನ ಮಿಾರಿಸಬಲ್ಲವರು ಎಲ್ಲಿ ?

ನಾಯಿನರಿ ಕೋಳಿ ಕತ್ತೆಯು ಬಾಳುವೆಯು ಕೂಡ
ಕನಿಕರಿಸಿ ನೋಡುವುದು ಇವನ ಹಿರಿದೊಂದುಗುಣ.
ಮೇಲಾಗಿ ಶರ್ಮ ಮಾತಿನ ಮಧ್ಯದಲಿ ತನ್ನ
ಸ್ವಂತರೀತಿಯ ಒಂದು ಹಾಸ್ಯವನು ತರುವನು.
ಗೆಳೆಯರೊಬ್ಬರು ಒಮ್ಮೆ ತಮಗ ಅದು ಏತರದೊ
ಆಯಿತು ಎಂದು ಹೇಳಿದರು. ಆಗಿದ್ದ ಅದು
ಅಂಥದೇನೂ ಅಲ್ಲ. ಶರ್ಮ, "ಈ ಬೆಳಗಾಗ
ನನ್ನ ಹಸ್ತವ ನೋಡಿಕೊಂಡೆ; ಕೊನೆ ಹರುಕಾಗಿ
ಐದು ಬೆರಳಾಗಿದೆ," ಎಂದು ಬಹುಗಂಭೀರ
ವಾಣಿಯಲಿ ಹೇಳಿದನು. ಎಲ್ಲರೂ ನಕ್ಕೆವು.
ಇವನ ಕುರಿತಿನ್ನೆರಡು ಮಾತ ಹೇಳುವೆನೆನಲು
ಸುಲಭ; ಆದರೆ ಇವನ ಮತ್ತೆ ನಾ ಕಂಡಂದು
ಇವನು ಎಂಪರಲಾಡಿಸುವುದ – ಇದು ಇವನದೇ
ಪದ–ಅನುಭವಿಸುವುದನು ನಾನು ಸದ್ಯಕೆ ಒಲ್ಲೆ.

ನಾಗರಾಜನದೂ ಸ್ವಭಾವ ಇದೆ. "ನೀ ನನ್ನ
ಬಣ್ಣಿಸುವುದೇತರದು? ಯಾರಿಗೆ ಸ್ವಯಂವರ?
ಇಷ್ಟಕ್ಕೆ ನಾನು ಸಾಹಿತಿ ಅಲ್ಲ," ಇತ್ಯಾದಿ
ಇತ್ಯಾದಿ ಇವನ ಅಡ್ಡಿಯ ಮಾತೆ ಮಾತು. "ಎಲ
ಕತೆ ಹೇಳುವವರು ಯಾರೆಂದು ತಿಳಿಸುವುದಷ್ಟೆ
ನನಗೊಪ್ಪಿಸಿದ ಕೆಲಸ, ಅದ ನಾನು ಮಾಡುವೆನು,
ನಿನಗಿದರ ಗೊಡವೆಯೇತಕೆ," ಎಂದು ಹಠಮಾಡಿ
ಈ ಎರಡು ನುಡಿಯ ಬರೆದಿಹೆನು. ಗಾಂಧೀಜಿಯನು
ಸತ್ಯಾಗ್ರಹದ ಮೊದಲ ದಿನಗಳಿಂದಲೆ ನಮ್ಮ
ಈ ಗೆಳೆಯ ತನ್ನ ನಾಯಕರೆಂದು ವರಿಸಿದನು.
ಅವರು ನಿಯಮಿಸಿದ ಕಾರ್ಯಕ್ರಮಗಳನು ಒಂದೆ
ಸಮನಾಗಿ ತನ್ನಿಂದ ಆದಂತೆ ನಡಸಿಹನು.

ತಂದೆ ತಾತದಿರದೆಂಬುದು ಆಸ್ತಿ ಇನಿತುಂಟು.
ಆದರಿಂದ ಬಂದನಿತರಿಂದ ಬಾಳನು ನಡಸಿ
ತೃಪ್ತನಾಗಿಹನು. ಆ ಮೊದಲಿಂದಲೂ ಚರಕ.
ಊರಿನಲಿ ಕೈಮಗ್ಗದಲಿ ತನ್ನ ನೂಲಿಂದ
ತನ್ನ ವಸ್ತ್ರವನೆ ನೇಯಿಸಿ ಅದನೆ ಉಡುವುದು,
ತನ್ನ ಊರಿನ ಸುತ್ತ ಖಾದಿಯನು ನೇಯಿಸಿ
ವಸ್ತ್ರಾಲಯಕೆ ಕಳುಹಿಕೊಡುವುದು, ಇದು ಇವನ
ಕಾರ್ಯವಿನ್ಯಾಸ. ಬೆಳಗಾವಿನಲಿ ರಾಷ್ಟ್ರಸಭೆ
ನೆರೆದಾಗ ಮೊದಲು ಅದಸೇರಿ ಅಲ್ಲಿಂದೀಚೆ
ಬಿಡದೆ ಒಂದೊಂದು ಅಧಿವೇಶನಕು ಹೋಗಿಹನು.
ಒಮ್ಮೊಮ್ಮೆಯೂ ಊಳಿಗದ ಕೆಲಸ ಮಾಡಿಹನು;
ಹೆಮ್ಮೆಯಿಲ್ಲದೆ ನಮ್ಮ ಗಾಂಧೀಜಿ ಆಗಿಹನು.

ಇನ್ನು ಬೇರೆಯ ನಮ್ಮ ಹಿರಿಯರನು ಗೆಳೆಯರನು
ಬಣ್ಣಿಸಲು ನನಗೆ ಮನ ಉಂಟು. ಸಭೆ ನೆರೆದ ದಿನ
ಒಂದು ದಿನ ಕೂಡ ತಪ್ಪದೆ ಬಂದು, ಕೊನೆತನಕ
ನಗುನಗುತ ಕುಳಿತು ಕತೆ ಟೀಕೆ ಎಲ್ಲವ ಕೇಳಿ,
ತಾವು ಎಂಥದೆ ನಾಲ್ಕು ಮಾತ ಅಪ್ಪಣೆ ಕೊಡಿಸಿ
ಎಂದು ನಾವೆಲ್ಲ ಬೇಡಲು, 'ನನಗೆ gift of the
gab ಇಲ್ಲವಪ್ಪ, ಇತರರು ಹೇಳಿದರೆ ಕೇಳಿ
ಸಂತೋಷ ಪಡುವುದಷ್ಟೇ ನನ್ನ ಯೋಗ್ಯತೆ,'
ಎಂದ ಅಂಬಳೆ ಹಿರಿಯವರು ; ಎಷ್ಟು ಕತೆ ಬೇಕು
ಎಂಥ ಕತೆ ಬೇಕು ಎಂದರೆ ಅಷ್ಟು ಕತೆ ಅಂಥ
ಕತೆಗಳನು ಹೇಳಿ ಜನ ನಗುವಂತೆ ಅಳುವಂತೆ
ಆಡಿಸಲು ಬಲ್ಲವರು, ಈ ಸಲ ಅದಾವುದೋ
ಕಾರ್ಯದಲಿ ತೊಡಕಿದ್ದು ಒಂದೆರಡು ದಿನ ಮಾತ್ರ
ಸ್ವಲ್ಪವೇ ಹೊತ್ತು ಸಭೆಗೈತಂದು ಕೆಲಸದಲಿ

ತರುಣರನು ಪ್ರೋತ್ಸಾಹಿಸಿದ ನಮ್ಮ ರಾಯರು ;
ಯಜಮಾನರೊಲೆ ಒಂದು ದಿನ ಬಿಡದೆ ಸಭೆಗೈದಿ
ಹಿರಿಯ ಕಿರಿಯರ ಜೊತೆಗೆ ಸಂತೋಷದಲಿ ಬೆರೆತ
ಚಿಕಬುದ್ಧಿ, ದೊಡಬುದ್ಧಿ, ಸಾಹೇಬ, ರೇವಪ್ಪ ;
ರಾಯರಂದವೆ ಒಂದು ಸರಕಾರಿ ಕಾರ್ಯದಲಿ
ಸಿಲುಕಿ, ಸಭೆಯಲಿ ಭಾಗವಹಿಸಲಾಗದೆ ಒಮ್ಮೆ
ಒಂದರ್ಧಗಂಟೆ ಇನ್ನೊಮ್ಮೆ ಒಂದರೆಗಳಿಗೆ
ಬಂದ ಕನ್ನಡದ ಶ್ರದ್ಧಾಳು ಸೇವಕರಾದ
ವೀಕೇಸಿ ; ಕನ್ನಡದ ಕೆಲಸ ಯಾವುದೆ ಇರಲಿ
ಬೀಳಬಿಡದಂದ ಅದ ಹಿಡಿದೆತ್ತಿರಲು ಒಂದು
ಕಂಬ ನಾನೆಂಬ ಶಾಸ್ತ್ರಿ ; ತಾಯಿನಾಡು ನುಡಿ
ಎನೆಸಾಕು, ನವಿರೇರಿ ನಲವಾಂತು ಜೊತೆಗೂಡಿ
ದುಡಿಯೆ ಎಂದೂ ಸಿದ್ಧ ಎಂಬಂಥ ಇನ್ನಿತರ
ಕಿರಿಯ ಹಿರಿಯರು ಹಲವು ಜನ, ತಮ್ಮ ಅನುಕೂಲ
ಎಂತಂತೆ ಒಂದಲ್ಲ ಒಂದು ದಿನ ಸಭೆಗೈದಿ
ಕೂಟದಲಿ ಸೇರಿದ್ದು ಸಂತೋಷವನು ನೀಡಿ
ತಾವಿತ್ತ ಸಂತಸದ ಸೆಲೆಯಿಂದ ತಣಿದವರು ;
ಉತ್ಸವಕೆ ಕರೆದು ವೆಂಕಪ್ಪ ಪತ್ರವ ಬರೆಯೆ,
'ಸಭೆಗೆ ಬರುವುದು ಸಾಧ್ಯವಲ್ಲ, ನವರಾತ್ರಿಯಲಿ
ಆಳುವ ಮಹಾಪ್ರಭುಗಳವರ ದರಬಾರ್‌ಗಳನು
ಪೋಷಾಕು ಹಾಜರಿಗಳಿಂದಲಂಕರಿಸುವುದು
ನನ್ನ ಪಾಲಿಗೆ ಬಂದುದಲ್ಲ, ಗೆಳೆಯರು ನೀವು
ಎಲ್ಲರೂ ಸೇರಿ ಸಂತೋಷ ಪಡುತಿರುವುದನು
ಊಹಿಸುತ ಇಲ್ಲಿಯೇ ನಲಿಯುವೆನು, ಉತ್ಸವ
ನಡೆಯಲಿ, ಚೆನ್ನವಾಗಲಿ,' ಎಂದು ಹಾರಯಿಸಿ
ಉತ್ತರವನಿತ್ತ ಗುಂಡಣ್ಣ : ಈ ಎಲ್ಲರನು
ಬಣ್ಣಿಸದೆ ಬಿಡುವನೇ ನಾನು ? ಆದರೆ ಅಂದು

ಪಾಡ್ಯಮಿಯ ಉದಯದಲಿ ಉತ್ಸವದ ಕಾರ್ಯವನು
ಏರ್ಪಡಿಸಿಕೊಂಡ ಹೊತ್ತಲಿ ಗೋಷ್ಠಿಯಲಿ ಯಾರು
ಕತೆ ಹೇಳುಕೇಳುವುದು ಎಂದು ನಿಶ್ಚಯಮಾಡಿ,
ಯಾರು ಕತೆ ಹೇಳುವರು ಅವರ ಕುರಿತೆರಡೆರಡು
ಮಾತು, ಕತೆಗಳ ಕುರಿತು ಟೀಕೆ ನುಡಿವರ ವಿಷಯ
ಎರಡೆರಡು ಮಾತು, ಜೊತೆಯಲಿ ಕತೆ, ಅವಕುರಿತ
ಟೀಕೆ, ಇನಿತನು ಮಾತ್ರ ಬರೆಯುವುದು ಸರಿ, ಇನ್ನು
ಉಳಿದವರು ಕೆಲವರನು ಬಿಟ್ಟು ಕೆಲವರ ಹೆಸರ
ಹೇಳುವುದು ಚೆನ್ನಲ್ಲ, ಎಂದು ನಿರ್ಣಯಿಸಿದರು.
ಇಂತು ನಿರ್ಣಯಿಸಿದುದು ಸರಿಯೊ ಸರಿಯಲ್ಲವೊ
ನಾನು ಹೇಳುವನಲ್ಲ. ಕತೆ ಟೀಕೆ ಇನ್ನುಳಿದ
ಈ ಸಂಗತಿಯನೆಲ್ಲ ಬರೆವ ಕೆಲಸವ ನನಗೆ
ಹಿರಿಯಣ್ಣ ವೆಂಕಪ್ಪ ಮುಂತಾಗಿ ಹಿರಿಯರು
ಅಂದೆ ಒಪ್ಪಿಸಿ ಕೊಟ್ಟರು. ಒಪ್ಪಿಕೊಂಡವನು
ಅವರ ನಿರ್ಣಯವ ಮೀರುವುದು ಸಲ್ಲದು ಎಂದು
ಇನಿತರಲಿ ನಿಲಿಸಿಹೆನು.

ಪಾಡ್ಯಮಿಯ ಕತೆಯನು
ಹಿರಿಯಣ್ಣ ಹೇಳಿ ಈ ನವರಾತ್ರಿಯುತ್ಸವದ
ಅಂಕುರಾರ್ಪಣ ಮಾಡಬೇಕೆಂದು ವೆಂಕಪ್ಪ
ರಾಮಕೃಷ್ಣಯ್ಯ ಇನ್ನುಳಿದೆಲ್ಲ ಗೆಳೆಯರು
ಅವರ ಬೇಡಿದರು. ಹಿರಿಯಣ್ಣ ಒಲ್ಲೆ ಎಂದು
ಕೆಲಸವನು ಬೇರೆ ಮಂದಿಗೆ ಬಿಡಲು ನೋಡಿದರು.
ಸಂಜೆ ಸಭೆ ನೆರೆದಾಗ ಈ ನುಡಿಗೆ ಡಾಕ್ಟರು,
"ಬನ್ನಿ, ಹಿರಿಯಣ್ಣ, ಇಷ್ಟೇನು ಪಂಚಾಯಿತಿ ?
ನೀವು ಹಿರಿಯರು ; ನೀವು ಮೊದಲ ಕತೆಯನು ಹೇಳಿ.
ನಿಮಗಿಂತ ತುಸ ಕಿರಿಯ ನಾನು ನಾಳೆಯ ಕತೆಯ

ಹೇಳುವೆನು. ಆಮೇಲೆ ರಾಮಣ್ಣ ದಿನ ದಿನ
ಅನುಕೂಲ ನೋಡಿ ಒಪ್ಪಿದ ಜನರ ನೇಮಿಸಲಿ.
ಆಗಲೆನ್ನಿರಿ," ಎಂದು ಒತ್ತಾಯ ಮಾಡಿದರು.
ಡಾಕ್ಟರಾಡಿದ ಮಾತು ಸರಿ ಎಂದು ಎಲ್ಲರೂ
ಚಪ್ಪಾಳೆ ಕುಟ್ಟಿ, ಒಪ್ಪಲೆಬೇಕು, ಎಂದೆವು.
ಇಂತೆಲ್ಲ ಗೆಳೆಯರೂ ಬಯಸಿರಲು ಹಿರಿಯಣ್ಣ,
"ಎಲ್ಲ ಗೆಳೆಯರು ನೀವು ಆಜ್ಞೆ ಮಾಡುತಲಿರಲು
ಒಲ್ಲೆನೆನ್ನುವುದು ನನ್ನಲಿ ದೋಷವಾದೀತು,
ಆಣತಿಯ ನನ್ನಿಂದ ಆದಂತೆ ನಡಸುವೆನು,"
ಎಂದು ವಿನಯವ ನುಡಿದು ಒಂದರೆಕ್ಷಣ ಬಿಟ್ಟು,
"ವಿಜಯ ಪಾಡ್ಯಮಿಯ ಹಬ್ಬದಲಿ ಮೈಸೂರಿನಲಿ
ಮೈಸೂರ ರಾಜಮನೆತನದ ಮೊದಲಿಗರಾದ
ಯದುಕೃಷ್ಣ ಸೋದರರ ಕತೆಯನೊರೆವುದು ತುಂಬ
ಉಚಿತವೆಂದೆನಗೆ ತೋರುತಿದೆ. ನೀವೂ ಅಂತೆ
ಎಣಿಸುವಿರಿ ಎಂಬ ತಿಳಿವಿನಲಿ ನಾ ಆ ಕತೆಯ
ನನ್ನ ಮನ ಕಲ್ಪಿಸಿಹ ರೀತಿಯಲಿ ಹೇಳುವೆನು,"
ಎಂದು ಕತೆಯನು ಒರೆಯ ತೊಡಗಿದರು. ಆ ಕತೆಯ
'ಯದುವಿಜಯ' ಎಂಬ ಹೆಸರಲಿ ಮುಂದೆ ಬರೆದಿದೆ.

---

# ಮುನ್ನುಡಿ

" ನವರಾತ್ರಿ" ಗ್ರಂಥ ಪದ್ಯಕಥೆಗಳ ಒಂದು ಗುಚ್ಛ. ಸುಮಾರು ಎಂಟು ವರ್ಷದ ಹಿಂದೆ ಕೆಲವರು ಸ್ನೇಹಿತರು ದಸರೆಯ ಹಬ್ಬಕ್ಕಾಗಿ ಮೈಸೂರಲ್ಲಿ ಸೇರಿದರೆಂದೂ ಒಂದೊಂದು ಸಂಜೆ ಒಬ್ಬಿಬ್ಬರು ಕತೆ ಹೇಳುವುದೆಂದು ಒಪ್ಪಂದ ಮಾಡಿಕೊಂಡು ಕತೆಗಳನ್ನು ಹೇಳಿದರೆಂದೂ ಅದನ್ನೆಲ್ಲ ಇಲ್ಲಿ ಕೂಡಿಸಿದೆಯೆಂದೂ ಇದರ ಕಲ್ಪನೆ. ಈ ವಿಷಯವನ್ನು ವಿವರಿಸುವ ಪ್ರಸ್ತಾವನೆ ಒಂದು ಪುಸ್ತಕ, ಕತೆಗಳೆಲ್ಲ ನಾಲ್ಕು ಅಥವಾ ಐದು ಪುಸ್ತಕ, ಆಗಬೇಕು. ಮೊದಲ ನಾಲ್ಕು ದಿನಗಳ ಕತೆ ಈ ಪುಸ್ತಕ ದಲ್ಲಿವೆ. ಬಾಳದೈವ ನಡೆಸಿದರೆ ಉಳಿದ ಪುಸ್ತಕ ಇನ್ನು ಮೇಲೆ ಬರಬೇಕು.

ನನ್ನ ಕೃತಿಗಳನ್ನು ಕುರಿತು ಈಚೆಗೆ ಕೆಲವರು ತರುಣಮಿತ್ರರು ಅಸಂತುಷ್ಟಿಯನ್ನು ಸೂಚಿಸುತ್ತಿದಾರೆ. ಇದು ಹಲವು ವೇಳೆ ಕೃತಿಗಿಂತ ಹೆಚ್ಚಾಗಿ ನನ್ನನ್ನು ಕುರಿತ ಅಸಂತುಷ್ಟಿ ಎಂದು ಕಾಣುತ್ತದೆ. ನಾನು ಲೇಖನ ಮೊದಲು ಮಾಡಿದಾಗ ಇಂಥ ಮಾತು ಒಂದು ರೀತಿಯ ಜನ ರಿಂದ ಕೇಳಿಬರುತ್ತಿತ್ತು; ಈಗ ಹೀಗೆ ಆಡುವವರು ಬೇರೆಯರೀತಿ ಯವರು. ಅಂದಿನ ಮಾತಿಗೆ ನನ್ನ ಮೊದಲ ಪುಸ್ತಕದ ಮುನ್ನುಡಿಯಲ್ಲಿ ಸಮಾಧಾನ ಹೇಳಿದೆನು. ಇಂದೂ ಅದೇ ಉತ್ತರ ಅನ್ವಯಿಸುತ್ತದೆ. ಅಂದು ಯಾವ ಭಾವನೆಯಿಂದ ಕೆಲಸದಲ್ಲಿ ಮುಂದರಿದೆನೋ ಅದೇ ಭಾವನೆಯಿಂದ ಇಂದೂ ಮುಂದರಿಯುತ್ತಿದೇನೆ.

ಈ ಪುಸ್ತಕವನ್ನು ಓದತೊಡಗುವವರು "ನವರಾತ್ರಿ: ಪ್ರಸ್ತಾವನೆ"ಯ ಕೊನೆಯಲ್ಲಿ, "ಯದು ವಿಜಯ"ದ ಕತೆಯ ಮುನ್ನುಡಿಯಾಗಿ ಈ ಪಂಕ್ತಿಗಳಿವೆಯೆಂದು ತಿಳಿದು ಓದಬೇಕು:

ಇಂತೆಲ್ಲ ಗೆಳೆಯರೂ ಬಯಸಿರಲು, ಹಿರಿಯಣ್ಣ,
"ವಿಜಯ ಪಾಡ್ಯಮಿಯ ಹಬ್ಬದಲಿ, ಮೈಸೂರಿನಲಿ,
ಮೈಸೂರ ರಾಜಮನೆತನದ ಮೊದಲಿಗರಾದ
ಯದುಕೃಷ್ಣಸೋದರರ ಕತೆಯನೊರೆವುದು ತುಂಬ
ಉಚಿತವೆಂದೆನಗೆ ತೋರುತಿದೆ. ನೀವೂ ಅಂತೆ
ಎಣಿಸುವಿರಿ ಎಂಬ ತಿಳಿವಿನಲಿ ನಾ ಆ ಕತೆಯ
ನನ್ನ ಮನ ಕಲ್ಪಿಸಿಹ ರೀತಿಯಲಿ ಹೇಳುವೆನು."
ಎಂದು ಕತೆಯನು ಒರೆಯತೊಡಗಿದರು. ಅದ ಇಲ್ಲಿ
"ಯದು ವಿಜಯ" ಎಂಬ ಹೆಸರಲಿ ಮುಂದೆ ಬರೆದಿದೆ.

ತಾರಣ ಸಂ. ಆಶ್ವೀಜ ಶುದ್ಧ
ಪಾಡ್ಯಮಿ 18 9 1944
ಗವೀಪುರದ ವಿಸ್ತರಣ, ಬೆಂಗಳೂರು

ಶ್ರೀನಿವಾಸ

# ವಿಷಯ ಸೂಚಿ

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾನ್ತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna

---

ಈ ಪುಸ್ತಕಗಳು ದೊರೆಯುವ ಸ್ಥಳಗಳು:—

ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
43–44, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಮನೋಹರ ಗ್ರಂಥ ಭಾಂಡಾರ, ಧಾರವಾಡ

# ಯದುವಿಜಯ

ಶ್ರೀಮನ್ಮಹೀಶೂರ ಪುರಜನಪದಾಧೀಶ
ನಮ್ಮಾಳ್ವ ಕರ್ಣಾಟ ಸಾರ್ವಭೌಮರ ವಂಶ
ಯದುರಾಜ ಕೃಷ್ಣರಾಜಾಹ್ವಯದ ಸೋದರರು
ಈರ್ವರಲಿ ಮೊದಲಾಯಿತೆಂಬುದಲೆ ಇತಿಹಾಸ.
ಈ ಸೋದರರು ಭಗವದವತಾರನೆಂದೆನಿಸಿ
ಲೋಕವನು ಹೊರೆದ ಶ್ರೀ ಕೃಷ್ಣನನ್ವಯದವರು.
ಭಾರತದ ಯುದ್ಧದಲಿ ಪಾಂಡವ ಯುಧಿಷ್ಠಿರನೆ
ಗೆಲುವಂತೆ ಕಾರ್ಯ ಸೂತ್ರವ ನಡೆಸಿ ಧರ್ಮವನು
ಸಿಂಹ ಪೀಠಕೆ ಏರಿಸಿದ ಬಳಿಕ ಶ್ರೀ ಕೃಷ್ಣ
ತನ್ನ ಕರ್ತವ್ಯ ಮುಗಿಯಿತು ಎಂದು ಆ ತನ್ನ
ಇಹಲೋಕ ಚರಿತವನು ಮುಗಿಸಿದನು. ಕಲಿಕಾಲ
ಬಂದು ಯವನವ್ರಾತ ಭೂಮಿಯನು ಮೇಲ್ವರಿದು
ದ್ವಾರಕೆಯನಾಕ್ರಮಿಸಿ ಮಸಗಿ ನಿಂದುದು ಆಗ.
ಅಂತೆಯೇ ಪಾಂಡುಪುತ್ರರು ಮಹಾಪ್ರಸ್ಥಾನ
ಗೆಯ್ದಿರಲು ಹಿರಿಯರೆಲ್ಲರು ಗತಿಸಿ ಹಸುಳೆಗಳೆ
ಉಳಿದಿದ್ದ ಯದುವಂಶ ತನ್ನ ಕಾಯಲು ಬಲ್ಲ
ನಂಟೆಂಬುದೂ ಇಲ್ಲದಿರೆ ಎತ್ತೆತ್ತಲೋ
ಚೆದರಿ ಕಿರಿಕಿರಿದಾಗಿ ಬಾಳಿ ಐದು ಸಹಸ್ರ
ವತ್ಸರದ ಈ ಕಾಲ ನಡೆಯ ತೊಡಗಿದ ದಿನಕೆ
ಒಂದು ಮನೆ ದೇವಗಿರಿಯಲಿ, ಒಂದು ಕನ್ನಡದ
ಹೊಯ್ಸಳರ ನಾಡಿನಲಿ, ನೆಲಸಿದವು. ಬಲ್ಲಾಳ
ವಿಷ್ಣುವರ್ಧನರಾಯನೀವಂಶದಲೆ ಜನಿಸಿ
ಹೆಸರಾಂತ ಹಿರಿಯರಸು, ಯದುಕೃಷ್ಣ ಸೋದರರು
ಈ ರಾಜವಂಶದಲಿ ಜನಿಸಿದರಸರು, ಎಂದು
ನನ್ನರಿವು.

ಈ ಸೋದರರು ಇತ್ತ ಬಿಜಗೆಯ್ದ
ಸಮಯದಲಿ ಈ ನಾಡು ಲೋಕಪಾಲೋಪಮಂ
ನಾಥಂ ಅಕಾಮಯತ ಮೇದಿನೀ ಎಂಬಂತೆ
ಧರ್ಮದಲಿ ತನ್ನನಾಳುವ ರಾಜನೊಬ್ಬನನು
ಬಯಸಿ ಕಾದಿತ್ತು. ಹದಿನಾಡಿನರಸನ ಕುವರಿ,
ಮೈಸೂರ ದೊರೆಯು ಸೋದರದ ಸೊಸೆ, ತಂದೆಯನು
ಮಾವನನು ಅದೆ ವರುಷ ಕಳೆದುಕೊಂಡಿಹರಹುದು.
ಎರಡು ವಂಶದಲು ಸುತರಿಲ್ಲದಿರೆ ದೇವಾಂಬೆ
ಎರಡು ನಾಡಿಗು ತಾನೆ ಅಧಿಕಾರಿ. ಇಂತಿರ್ಪ
ಅರಗುವರಿಯನು ಮದುವೆಯಾಗಿ ಎರಡೂ ನಾಡ
ತನ್ನ ನಾಡಿಗೆ ಸೇರಿಸುವೆನೆಂಬ ಆಸೆಯಲಿ
ಕಾರುಗಳ್ಳಿಯ ಮಾರನೆಂಬ ಪಾಳೆಯಗಾರ
ತನಗೆ ಅವಳನು ಮದುವೆಮಾಡಿ ಕೊಡುವುದು ಎಂದು
ಹದಿನಾಡಿನೊಡತಿ ಮೈಸೂರ ರಾಜರ ತಂಗಿ
ದೊಡ್ಡ ದೇವಾಂಬೆಯನು ಕೇಳಿಹನು. ಅರಸಿತಿಗೆ
ಕುಲದಿಂದ ಕೊರೆಯಾದ ಇವನ ಸಂಬಂಧದಲಿ
ಮನಸಿಲ್ಲ. ಕುವರಿ ಇವನನು ಒಲ್ಲೆನೆಂದಿಹರು.
ಕುಲದಿಂದ ಸಮನಾದ ಮನೆಗಳಲಿ ತಕ್ಕಂಥ
ವರ ಇಲ್ಲ. ಇದ್ದವರು ಕಾರುಗಳ್ಳಿಯ ಧೂರ್ತ
ಮಾರನಾಯಕನಿಗಂಜುವರು. ಪಾಳೆಯಗಾರ
ಒತ್ತಾಯ ಪಡಿಸುತಿರೆ ಏನಮಾಡುವುದೆಂದೆ
ತೋರದಲೆ ದೊಡ್ಡದೇವಾಂಬೆ ಆ ನವರಾತ್ರಿ
ಮಗಳೊಡನೆ ಮೈಸೂರಿಗೈತಂದು, ಕಷ್ಟದಲಿ
ದಾರಿ ತೋರೆಂದು ದೇವರಿಗೆ ಹರಕೆಯ ಹೊತ್ತು
ಕಾದಿಹರು. ಆಗ ಯದುರಾಜರಿಗೆ ಸ್ವಪ್ನದಲಿ,
ಕಪಿಲೆ ಕಾವೇರಿ ಕೂಡುವ ನಾಡಿನಲಿ ನಿನಗೆ
ಕೆಲಸವಿದೆ, ನಡೆ, ಎಂದು ದೇವರಾಣತಿ ಮಾಡೆ

ತಮ್ಮನೊಡಸಿತ್ತ ಬಂದರು ಅವರು. ಪಾಡ್ಯಮಿ
ಮೈಸೂರ ಬಳಿ ಬಂದು ಇದುವೆ ದೇವರು ತನಗೆ
ತೋರಿಸಿದ ತಾಣವೆಂದರಿತು ಕೋಟೆಯ ಹೊರಗು
ಭೈರವನ ದೇವಗೃಹವನು ನೋಡಿ ಈ ಸ್ಥಲದಿ
ನಿಲುವೆವೆಂದೆಣಿಸಿ ಒಳ ಹೊಕ್ಕು ದೇಗುಲದೊಳಿಹ
ಒಬ್ಬ ಜಂಗಮ ಒಡೆಯರಿಂದ ಮೈಸೂರ ಕತೆ
ಎಲ್ಲವನು ಕೇಳಿದರು. ಆ ಉದಯ ಅರಗುವರಿ
ತನ್ನ ಕಿರಿತಾಯ ಮಗಳಾದ ತನ್ನಯ ತಂಗಿ
ಕೆಂಪಾಜಿಯಮ್ಮಣ್ಣಿ ಅಂತೆ ಗೆಳತಿಯರೊಡನೆ
ಭೈರವನ ಮಂದಿರಕೆ ಪೂಜೆಗೆಂದೈತಂದು
ಅನಿರೀಕ್ಷಿತದಲಿ ಈ ರಾಜಲಕ್ಷಣಯುಕ್ತ
ಸೋದರರ ನೋಡಿ ಅರಮನೆಗೆ ಮರಳಿದರಹುದು.
ಭೈರವನ ದೇಗುಲದ ಜಂಗಮ ಮಹಾಶಯನ
ನೆರವಿಂದ ಯದುನೃಪತಿ ಅರಸಿತಿಕುಮಾರ್ತಿಯರ
ಕಂಡು ದೇವರ ಅನುಗ್ರಹವಿರಲು ಕೇಡಾಳಿ
ಮಾರನಾಯಕನ ತೊಂದರೆಯ ನೀಗುವೆವೆಂದು
ಧೈರ್ಯ ವಚನವ ನೀಡಿ ಕೊನೆಗೆ ಮಾರನ ಕೊಂದು
ರಾಜಪುತ್ರಿಯನು ಹಸೆನಿಂದು ಅವಳೊಡನೆಯೇ
ರಾಜ್ಯವನು ಪಡೆದರಪ್ಪುದು. ಇಂತು ವಿಸ್ತರದ
ಎಲ್ಲ ಕತೆಯನು ಹೇಳುವರೆ ಈಗ ಹೊತ್ತಿಲ್ಲ.
ಅವರು ಹಗೆಯನು ಕೊಂದು ವಿಜಯಿಸಿದ ದಶಮಿಯಲಿ
ನಡೆದಷ್ಟ ಒರೆಯುವೆನು.

ಯದುನೃಪತಿ ಅರಸಿತಿಗೆ
ಅಭಯವನು ನೀಡಿ ಮೈಸೂರು ಹದಿನಾಡುಗಳ
ಬಲವೆನಿಸಿತು ಎಂತೆಂದು ತಿಳಿದು ಕಾವಲ ಹಿರಿಯ
ಸುಗ್ಗಯ್ಯಜಟ್ಟಿ ನವರಾತ್ರಿಯಲಿ ಎಂದಿನೊಲು
ಸಂಜೆಯಲಿ ಅರಮನೆಯ ಮುಂದೆ ನಡೆಯುತಲಿರುವ

ಮಲ್ಲಯುದ್ಧಕೆ ನಾಡಿನೆಲ್ಲ ಗರಡಿಗಳಿಂದ
ಜಟ್ಟಿಗಳ ಕರೆಸಲೆಂದೂ, ಅವರ ಓಜರನು
ಬರಮಾಡಿ ರಾಣಿಯರು ಎಲ್ಲರೂ ಹಿರಿಜಟ್ಟಿ
ಸುಗ್ಗಯ್ಯನಂತೆ ನಡೆಯಿರಿ ಎಂದು ಆಣತಿಯ
ನೀಡಲೆಂದೂ, ಮರಳಿ ಮಾರನಾಯಕ ಬರಲು
ಇಂದು ಸವಿಯಾಗಿ, ನಾಳೆಯ ದಿವಸ ಮೆದುವಾಗಿ,
ಮೂರನೆಯ ದಿವಸ ಕಟುವಾಗಿ, ನೀವಿಲ್ಲಿಹುದು
ನಿಮಗೆ ಲೇಸಲ್ಲವೆಂದುಚ್ಚಾಟನೆಯ ನುಡಿಯ
ನುಡಿವುದೆಂದೂ, ಅದರ ಮುಂದೆ ನಡೆಯುವುದೆಂತು
ಅದನು ಸಂದರ್ಭ ಬೆಳೆದಂತೆ ನೋಡುವ ಎಂದೂ
ನಿಶ್ಚಯಿಸಿದರು. ನಾಡ ಜಟ್ಟಿಗಳು ಹತ್ತಾರು
ತಂಡ ತಂಡದಲಿ ಬಂದಿಹರು. ಸುಗ್ಗಾ ಜಟ್ಟಿ
ಎಲ್ಲ ಗರಡಿಗಳ ಓಜರನು ಕಿವಿಮಾತಿನಲಿ
ಸರಿಪಡಿಸಿಕೊಂಡು ಸಂಕೇತವನು ತಿಳಿಸಿದನು.
ಹದನೇನು ಎಂಬುದನು ಯಾವೊಬ್ಬನೂ ಕಾಣ.
ಏನೊ ಇದೆ, ಅದು ನಮ್ಮ ಅರಗುವರಿಯೊಳ್ಳಿದಕೆ,
ಎಂಬನಿತ ಎಲ್ಲ ಅರಿತಿಹರು. ಸುಗ್ಗನ ಹುಬ್ಬು
ಏನ ಬೆಸಸುವುದೊ ಅದ ಮಾಡಿ ಮಡಿವೆವು ಎಂದು
ಹರೆಯ ಮುದಿ ಕಾದು ನಿಂದಿದೆ ಉಂಗುಟದ ಮೇಲೆ.

ದುರ್ಗಾಷ್ಟಮಿಯ ಉದಯ ಅರಗುವರಿ ಬೆಟ್ಟವನು
ಪಾದಚಾರದೊಳೇರಿ ಚಾಮುಂಡಿಕಾಂಬಿಕೆಯ
ಪೂಜೆಯಲಿ ದಿನವೆಲ್ಲ ನಿಂತು ಸಂಜೆಗೆ ಮರಳಿ
ಮೈಸೂರ ಸಾರಿದರು. ಪೂಜೆಗೊಪ್ಪಿದ ದೈವ
ಪೂಜಿಸಿದ ಕುವರಿಯಲಿ ತಾನೆ ಬೆರೆತುದೊ ಎಂತು
ಎಂಬಂತೆ ಚಿಕ್ಕದೇವಾಂಬೆ ನೋಡುವ ಜನಕೆ
ಸಿಂಹವಾಹಿನಿಯೆ ತಾನಾಗಿ ಕಾಣುತಲಿಹಳು.

ಮಾನವಮಿಯಂದು ನಾಯಕ ಬಿಡಾರದಿ ತನ್ನ
ಪೂಜೆಗಳ ಮುಗಿಸಿ ಭೋಜನ ಮಾಡಿ ಸಂಜೆಯಲಿ
ತಾ ಬರುವೆನೆಂದು ರಾಣಿಗೆ ಬೇಹನಟ್ಟಿದನು.
ಬಂದವನ ಕಂಡು ರಾಣಿಯರು ಮರ್ಯಾದೆಯಲಿ
ನೀವು ಬೇಡುವುದ ನೀಡುವುದೆಮಗೆ ಸರಿಯಲ್ಲ,
ನಿಷ್ಠೂರ ಬೇಡ, ಸುಮ್ಮನೆ•ಕಾರುಗಳ್ಳಿಯನು
ಕುರಿತು ನೀವೈದುವುದು ಒಳಿತೆಂದು ತಿಳಿಸಿದರು.
ಮಾರನಾಯಕ, "ನಾವು ಕಾರುಗಳ್ಳಿಯ ಬಿಟ್ಟು
ಮೈಸೂರಿಗೈತಂದ ದಿನ ಮನಸು ಮಾಡಿದೆವು,
ಮೈಸೂರು ನಮತೆಂದು. ಹದಿನಾಡಿನರಗುವರಿ
ನಮ್ಮ ಕೈ ಹಿಡಿದರೇ ಹದಿನಾಡು ಮೈಸೂರು
ಕಾರುಗಳ್ಳಿಯ ರಾಣಿ ಆಗುವರು; ಹಿಡಿಯರೇ
ಹದಿನಾಡು ಅವರದಿರಬಹುದು; ಆ ಮಾತನೂ
ನಾವು ಯೋಚಿಸಿ ತಿಳಿಸುವೆವು; ಅದೆಂತೇ ಇರಲಿ
ಮೈಸೂರು ಅವರದಾಗದು. ಬಲ್ಲಿದಗೆ ಭೂಮಿ:
ನಮಗೆ ಮೈಸೂರು. ಮೈಸೂರು ನಮ್ಮದು ಎಂಬ
ಹವಣು ಈ ನಾಡ ಮಂದಿಯಮನಕೆ ತಿಳಿವಂತೆ
ನಾವು ನಾಳೆಯೆ ವಿಜಯ ಯಾತ್ರೆಯನು ನಡೆಸುವೆವು.
ನಾಳೆ ಉದಯದಲಿ ನಡೆಯುವ ಪೂಜೆಯನು ನಾವು
ಮೈಸೂರಿನರಸಾಗಿ ಸ್ವತಃ ಸಲ್ಲಿಸುತಿಹೆವು"
ಎಂದು ಹೇಳಿದನು. ರಾಣಿಯರು ಮೆಲ್ಲನೆ ಏನೊ
ನುಡಿವ ಮುನ್ನವೆ ಅವರ ಕುವರಿ "ಅಳಿಯುವ ಜನಕೆ
ಹಳಸುವುದು ಮತಿ ಎಂಬ ಸಾಮತಿಯ ನಾಯಕರು
ನಡಸುತಿರುವಿರಿ. ಮಹಾನವಮಿ ದಿನ ಮೈಸೂರು
ನಮ್ಮದಾಗಿದೆ. ವಿಜಯ ದಶಮಿ ಉದಯಕೆ ಎಂತು
ನಿಮ್ಮದಾಗುವುದು? ಇದನಿನ್ನೊಮ್ಮೆ ನುಡಿಯದಿರಿ.
ಜನದ ಮನ ರೋಸಿ ಮೈಸೂರ ವೀರರು ನಿಮಗೆ

ಶಿಕ್ಷೆಗೆಯ್ವಾರು" ಎಂದರು. ಮಾರನಾಯಕನ
ಮುಖ ಕೋಪದಿಂದ ಬೆವತಿತು. ಕಣ್ಣ ಕಿಡಿಕಾರಿ
ಅವನು ರಾಣಿಗೆ "ನಮ್ಮ ತಾವು ನುಡಿಸುವ ರೀತಿ
ಒಂದು ತೆರನಿರೆ ಕುಮಾರಿತಿ ತಮ್ಮತೇ ಒಂದು
ಸೊಕ್ಕು ರೀತಿಯ ನುಡಿಯ ನುಡಿಯುವರು. ಮೈಸೂರ
ವೀರರೆನ್ನುವರಾರು ನಮಗೆ•ಮಲೆತೇಳುವರು ?
ಕಾರುಗಳ್ಳಿಯ ಪಡೆಗೆ ಎದುರು ನಿಲ್ಲುವ ಪಡೆಯು
ಹದಿನಾಡು ಮೈಸೂರು ಪಡೆದಿಹವೆ ? ನಿಮ್ಮರಸು
ಮೈಸೂರ ಒಡೆಯ ಜೀವಂತರಾಗಿದ್ದಂದು
ನಮ್ಮನೂ ತಮ್ಮಂತೆ, ಇಲ್ಲ ತಮಗೂ ಮಿಕ್ಕ
ನಾಡರಸ ಎಂಬಂತೆ ಒಪ್ಪಿದುದ ಅರಿಯಿರೇ ?
ಒಳಿತು. ಬಹುಮಾತಿಂದ ಬಹುದೇನು ? ಬೆಳಗಾಗ
ಇಲ್ಲಿ ಅರಮನೆಯಲ್ಲಿ ರಾಜಕರ್ತವ್ಯವನು
ನಾವು ಮಾಡುವರು. ಊಳಿಗದವರು ಜೋಯಿಸರು
ಎಲ್ಲವನು ಸಿದ್ಧಮಾಡಿರಲೆಂದು ರಾಣಿಯರು
ಆಜ್ಞೆಮಾಡಿರಬೇಕು" ಎಂದುದೆ ಬಿಡಾರವನು
ಕುರಿತು ಹೊರಟನು.

ರಾಣಿ ದೀಪ ಬೆಳಗಿದ ಒಡನೆ
ಯದುರಾಜರಿಗೆ ಹೇಳಿ ಕಳುಹಿದರು. ಯದುನೃಪತಿ
ಮೊದಲಿಂದ ಮಾನವಮಿ ಈ ಯೊಂದು ಸಂಜೆವರ
ಸುಗ್ಗಿ ಜಟ್ಟಿಯ ಒಬ್ಬ ಹೊಸಶಿಷ್ಯನಂದದಲಿ
ವರ್ತಿಸುತ ಎಲ್ಲೆಡೆಯು ಸಾರಿ ಗರಡಿಯ ಜನರ
ಒಲವನಾಗಳೆ ಗಳಿಸಿಹರು. ರಾಣಿ ಬರಹೇಳೆ
ಒಡನೆ ಬಂದೆಲ್ಲವನು ಕೇಳಿ, ಮಾರನೆ ಉದಯ
ಕಾಳಗಕೆ ಎಲ್ಲವನು ಸಜ್ಜುಮಾಡುವುದೆಂಬ
ವ್ಯಾಜದಲಿ ಪೂಜೆ ನಡೆಯುವ ತಾಣ, ನಾಯಕನು
ಬಂದು ಕೂಡುವ ತಾಣ, ವ್ರತಗಾರ ಜಟ್ಟಿಗಳು

ಕದನ ಮಾಡುವ ತಾಣ, ಎಲ್ಲವನು ನೋಡಿದರು ;
ಅರಸಿತಿ ಕುಮಾರಿತಿಯರಿಗೆ "ನಿಮ್ಮ ಕುಲದೈವ
ಎಲ್ಲವನು ನಿಮಗೆ ಅನುಕೂಲವಾಗುವ ತೆರನೆ
ತಿರುಹುತಿದೆ. ನಾಳೆಯುದಯಕೆ ನಮ್ಮ ನಾಯಕರು
ಇಲ್ಲಿ ಬರಬಾರದೆಂದಿನ್ನೊಮ್ಮೆ ಬೇಡಿಕೆಯ
ಹೇಳಿ ಕಳುಹಿರಿ. ನಿಮ್ಮ ಮಾತನುಲ್ಲಂಘಿಸಿಯೆ
ಬಂದರೆನೆ ಕಾಳಗದ ಜಟ್ಟಿಗಳೊಳೊಬ್ಬನನು
ನೇಮಿಸುತಲಿಹೆವು. ಆತನು ತನ್ನ ಗಾಯವನು
ತೋರಲೆಂದವರ ಬಳಿ ಸಾರಿ ಸಮಯವ ನೋಡಿ
ಅವರ ಕೊಲ್ಲುವನು. ಅರಮನೆಯ ಊಳಿಗವೆಲ್ಲ
ಸುಗ್ಗ ಜಟ್ಟಿಯ ಮಾತಿನಂತೆ ನಡೆಯಲಿ" ಎಂದು
ತಿಳಿಸಿದರು. ರಾಣಿ "ಇದು ಘೋರಪಾತಕ ಕರ್ಮ ;
ಕೊಲಲುಳ್ಳ ಜಟ್ಟಿಯಾದವನು ತಮ್ಮಯ ಮಾತ
ಗುಪ್ತದಲಿ ನಿಲಿಸಿಕೊಂಡನೆ ಒಳಿತು ; ಗಳಹಿದನೆ
ಮಾರನಾಯಕ ನಮ್ಮ ಮನೆ ಮನೆಯನೇ ಸುಡಲು
ಹೇಸುವವನಲ್ಲ" ಎಂದರು. ಅದಕೆ ಯದುರಾಜ
"ಜಟ್ಟಿ ಇದನಾರಿಗೂ ಹೇಳುವವನಲ್ಲ; ಇದ
ನಾವು ಬಲ್ಲೆವು; ಭೀತಿ ಬೇಡ" ಎಂದರು. ಕುವರಿ
ಅದನು ನಾನೂ ಬಲ್ಲೆ ಎಂದು ನುಡಿಯಲು, ತಾಯಿ
ಇವಳೆಂತು ಬಲ್ಲಳಿದನೆಂಬಂತೆ ಅವಳ ಕಡೆ,
ಅಂತೆ ಯದುನೃಪನ ಕಡೆ, ನೋಡಿದರು. ಯದುರಾಜ
ಕುವರಿ ತನ್ನರ್ಥವನು ತಿಳಿದಿರುವಳೆಂದರಿತು
"ಇನ್ನು ವಿಶ್ರಾಂತಿಗೈದಿರಿ ; ನಾಳೆ ಉದಯದಲಿ
ದೈವಕೃಪೆಯಿಂದೆಲ್ಲ ಚೆನ್ನವಪ್ಪುದು," ಎಂದು
ಭೈರವನ ಮಂದಿರಕೆ ಬಂದು ಸುಗ್ಗಾ ಜಟ್ಟಿ
ಇನ್ನೊಬ್ಬ ಆಪ್ತ ಓಜರ ಜೊತೆಗೆ ಕುಳ್ಳಿರ್ದು
ಉದಯದಲಿ ಎಂತು ನಡೆವುದು ಎಂಬುದನು ಕಲಿಸಿ

ಅವರ ಬೀಳ್ಕೊಟ್ಟು ದೇವರ ಪಾದದಲಿ ನಮಿಸಿ
ನಿದ್ರೆಗೊಪ್ಪಿದರಹುದು.
ವಿಜಯ ದಶಮಿಯ ಸೂರ್ಯ
ಉದಯಶೈಲದ ಕೋಡಸಾಲ ಸೋಕುವ ಮುನ್ನ
ಅರಮನೆಯ ಊಳಿಗದ ಮಂದಿ ವಹಿಲದೊಳಿದ್ದು
ವಿಜಯಯಾತ್ರೆಗೆ ಎಂದಿನಂತೆಲ್ಲ ಅಣಿಮಾಡಿ
ಭಟ್ಟ ಜೋಯಿಸ ಸುಮಂಗಲಿ ವಂದಿಮಾಗಧರು
ಎಲ್ಲರೂ ಸಿದ್ಧರಾದರು. ಆಗ ಅರಗುವರಿ
ಮಂಗಳಸ್ನಾನವನು ಮುಗಿಸಿ ಕೌಶೇಯವಸು
ಧರಿಸಿ ದೇವಿಗೆ ಪೂಜೆ ಮಾಡಿ ನಾಯಕರೆಡೆಗೆ
"ವಿಜಯ ಯಾತ್ರೆಯ ಪೂಜೆ ಅರಮನೆಗೆ ಸೇರಿದುದು,
ಹೊರಗಿನವರಿದ ಮಾಡಸಲ್ಲ; ಇಂದಿನ ಪೂಜೆ
ನನ್ನಿಂದ, ಅಲ್ಲದಿರೆ ನನ್ನ ಕೈಯನು ಹಿಡಿದ
ಗಂಡಿಂದ ನಡೆಯುವುದು ಸರಿ; ಕೈಯ ಹಿಡಿಯದಿಹ
ಗಂಡಾವನೋ ಬಂದು ಅರಮನೆಯ ಕರ್ಮವನು
ನಡಸುವುದು ಅಕೃತ; ನೀವಿದ ಮಾಡುವುದು ಬೇಡ"
ಎಂಬ ಅರ್ಥದಲಿ ವಿನಯದ ಬೇಹನಟ್ಟಿದಳು.
ಇಂತು ಅರಗುವರಿ ಕಳುಹಿದ ಮಾತ ಕೇಳ್ದವನು
ಮಾರನಾಯಕ ಬೇಹಿನವರಿಂದಲೇ, ತಾನು
ಬಹುದೆ ನಿಶ್ಚಯವೆಂದು ಉತ್ತರವ ಕಳುಹಿದನು.
ಅಂತೆ ಚಾರರು ನಾಯಕನ ಕಾವಲಿನ ಮಂದಿ
ಹೇಳುತಿದ್ದಿನ್ನೊಂದು ಮಾತಲ್ಲು ಸುರಿದರು.
ನಾಯಕರು ಅರಮನೆಯ ಹೊಗುವಂದು ಮಾಗಧರು
ಮೈಸೂರ ದೊರೆ ಮಾರನಾಯಕಗೆ ಜಯ ಎಂದು
ಕರೆವಂತೆ ನಾಯಕರ ಆಜ್ಞೆಯಾಗಿತ್ತಂತೆ.
ಈ ಎಲ್ಲ ಸಂಗತಿಯ ಕೇಳಿ ಹಿರಿ ರಾಣಿಯರು
ಇನ್ನೇನು ಗತಿ ಎಂದು ಭೀತಿಯಲಿ ಮುಳುಗಿದರು.

ಅರಗುವರಿಯರು "ಬೇಡಿ, ಅಮ್ಮಾಜಿ ; ಭಯ ಬೇಡಿ ;
ಇಂದು ದೇವರು ಇವನ ಕೋಟಲೆಯ ಮುಗಿಸುವರು ;
ಗೆಲಿದೆವೇ ಭಯವಿಲ್ಲ ; ಸೋತೆವೇ, ಆಗಳೂ
ಭಯವಿಲ್ಲ; ಬಿಡಿ," ಎಂದು ತಾಯ ಸಂತೈಸಿದರು.
ಅಂತೆ ದೇವಾಂಬೆ ತಂಗಿಯ ಜೊತೆಗೆ ಮಾತಾಡಿ
ಊಳಿಗದ ಹೆಂಗಳನು ಕರೆದು, "ಪೂಜೆಯ ಹೊತ್ತು
ನಾವೆಲ್ಲಿ ನಿಲ್ಲುವೆವು, ಅಲ್ಲೆ ನೀವೂ ನಿಲ್ಲಿ.
ನಾಯಕನು ಏನೇನ ಮಾಡುವನೊ, ಮನೆತನದ
ಮರ್ಯಾದೆಯನು ನಿಲಿಸುವುದಕೆ ನಾವೇನೇನ
ಮಾಡುವೆವೊ, ನಾವೆ ಅರಿಯೆವು ; ಎಂತೆ ಆಗಲಿ,
ಬನ್ನಿರೇ ಎಂದು ಅಮ್ಮಣ್ಣಿ ಕರೆದೊಡನೆಯೇ
ಎಲ್ಲ ಜೊತೆಯಲಿ ಬನ್ನಿ ; ನಾವು ಆಯುಧ ಧರಿಸೆ
ಎಲ್ಲರೂ ಅಂತೆ ಒಂದೊಂದು ಕೈದನು ಕೊಳಿರಿ ;
ಮುಂದೆ ಚಾಮುಂಡಾಂಬೆ ಎಂತು ನಡೆ ಎಂಬಳೋ
ಅಂತು ನಡೆಯುವೆವು ; ನೀವೂ ಅಂತೆ ನಡೆಯಿರಿ"
ಎಂದು ಆಣತಿ ಮಾಡಿದರು. ಊಳಿಗದ ಮಂದಿ
ಏನು ಸಂಗತಿಯೆಂದು ತಿಳಿಯದೆಯೆ ತಮ್ಮೊಡತಿ
ಬೆಸಸಿದಂತೆಸಗುವುದು ಎಂದೊಪ್ಪನಿಂದಿಹರು.

ಅರಗುವರಿ ಮತ್ತಾಗ ಯದುನೃಪತಿಯನು ಕರೆಸಿ
ಧೂರ್ತನಾಯಕ ನಡೆಸಲೆಳಸಿದ್ದ ಕೃತ್ಯವನು
ತಿಳಿಸಿ "ನಾಯಕನು ನಾಯಕನಾಗಿ ಬಂದನೇ,
ಪೂಜೆಯಹ ತಾಣದಲಿ ಕುಳ್ಳಿರಲಿ ; ಬೇಡೆನೆವು ;
ಆಗ ತಾವೀ ಮೊದಲು ಯೋಚಿಸಿದ ತೆರ ನಡೆಯೆ
ನಮ್ಮಡ್ಡಿ ಇಲ್ಲ. ಬರುವಂತೆ ಮೈಸೂರರಸು
ಎಂದು ಹೊಗಳಿಸಿಕೊಂಡು ಬಂದನೇ, ನಾವದನು
ಆಗಲೇ ತಡೆಯಬೇಕೆನ್ನುವೆವು. ತಾವಿದಕೆ

ಎಂತು ಬೆಸಸುವಿರಿ ” ಎಂದರು. ನೃಪತಿ, ದೇವಿಯರು
ಎಂತು ಬೆಸಸುವರು ನಾವಂತು ಎಸಗುವರೆಂದು
ಧೈರ್ಯವನು ನೀಡೆ, ಅರಗುವರಿ ಸಂತಸ ನುಡಿದು
“ಮಾರನಾಯಕ ಧೂರ್ತನಾದರೂ ಇಂತಪ್ಪ
ಉನ್ಮಾದವನು ಮಾಡಲಾರನೆಂದೆಣಿಸುವೆವು ;
ಮಾಡಿದನೆ ಆ ವೇಳೆ ಎಂತು ತೋರುವುದಂತು
ನಡೆಯುವೆವು ; ಆರ್ತರಕ್ಷಣಧುರಂಧರರಾಗಿ
ಇಲ್ಲಿ ಬಿಜಗೈದಿರುವ ನೃಪರು ಅದೆವೇಳೆಯಲಿ
ಎಂತು ನಡೆವುದು ಉಚಿತ ಅಂತೆನಡೆವಿರಿ; ಅಂತು
ನಡೆದು ನಮ್ಮನು ಕಾಯುವಿರಿ,” ಎಂದು ನುಡಿದಿಹರು.

ಬೆಳಕು ಮುಂಬರಿದಿರಲು ಮಾರನಾಯಕ ತನ್ನ
ಮಜ್ಜನವ ಮುಗಿಸಿ ಬೆಡಗಿನ ವಸ್ತ್ರಗಳ ಧರಿಸಿ
ಹೊಗಳಭಟರನು ಮುಂದೆ ಬಿಟ್ಟು ಕಾವಲಭಟರು
ಜೊತೆಸಾರೆ ಒಂದು ಚಂದದ ಅಂದಣವನೇರಿ
ಅರಮನೆಯ ಮುಂದೆ ಸೇರಿದನು. ಮಾಗಧರಾಗ
“ ಮೈಸೂರಿನರಸ ಜಯ ; ಜಯಮಾರನಾಯಕ,”
ಎಂದು ಜಯಘೋಷವನು ಹಾಕಿದರು. ಅರಮನೆಯ
ಬಾಗಿಲಲಿ ಕಂಡುದದರುತ್ತರಕ್ಷಣದಲೇ
ಸ್ತ್ರೀಮೂರ್ತಿ ಒಂದು. ಪಟ್ಟೆಯಮಡಿಯ ವಸ್ತ್ರವನು
ಗಂಡು ಕಚ್ಚೆಯಲಿ ಉಟ್ಟಿಹುದು. ಕೈಯಲಿ ಒಂದು
ಕತ್ತಿ ಒರೆಯಿಂದುಗಿದು ತೊಳಗುತಿದೆ. ಫಾಲವನು
ತೆಳ್ಳನೆಯ ವಸ್ತ್ರ ಮರೆಸಿದೆ. ಬುಲಾಕಿನ ರತ್ನ
ಮೇಲ್ತುಟಿಯ ಮಧ್ಯದಲಿ ಮಿನುಗುತಿದೆ. ಕೋಪದಲಿ
ಅಧರ ನಡುಗುತಿದೆ. ಕಲಿಯಂತೆ ಈ ಪರಿ ನಿಂತ
ಮೂರ್ತಿಯನು ಕಾವದೇವತೆಯಂತೆ ಹಿಂಬದಿಗೆ
ಕೆಂಪಾಜಿಯಮ್ಮಣ್ಣಿ ಇಹರು. ಈ ಇಬ್ಬರನು

ಮೂರೊಂದು ಕಡೆ ಬಳಸಿ ಅರಮನೆಯ ಊಳಿಗದ
ಮೂವತ್ತು ಹೆಣ್ಣು ಕಾಣುತಿವೆ. ಚಾಮುಂಡಾಂಬೆ
ತನ್ನ ಭಕ್ತರ ಪೊರೆಯೆ ಪರಿವಾರವನು ಕರೆದು
ತಾನೆ ಬಾಂದಳದಿಂದ ದುಮ್ಮಿಕ್ಕಿದಳೊ ಎನಲು
ನೆನೆಯದಿರ್ದೆಡೆ ಇಂತು ಕಂಡ ಹೆಣ್ಣಿನಪಡೆಯ
ನೋಡಿ ಮಾಗಧರು ಬೆದರಿದರು. ನಾಯಕನ ಎದೆ
ಯಾವುದೋ ಉತ್ಪಾತ ಕಂಡಂತೆ ತಣ್ಣಿಟ್ಟು
ಒಳಗೆ ಅಳುಕಿತು. ಮುಂದೆ ಹೊಗಲಿಲ್ಲದಿರೆ ಇವನ
ಮಂದಿ ನಿಂತಲ್ಲೆ ನಿಂತಿತು. ಪಾಳೆಯಗಾರ
ಹೊಗಳುಭಟ ಒಬ್ಬನನು ಕರೆದು " ಸಂಗತಿ ಏನು
ಕೇಳಿ ತಿಳಿಯೋ, ಯಾವ ಮರ್‍ಯಾದೆಯೋ ಏನೊ,
ಕೇಳು," ಎಂದನು. ಅವನು ಮುಂದರಿಯೆ, ಕೆಂಪಾಜಿ
ಸೇವಕರ ಕರೆದು, "ಅರಮನೆಯ ಮುಂಗಡೆ ಇಂತು
ಅಂದಣದೊಳೈತಹುದು ನಾಯಕಗೆ ಸರಿಯಲ್ಲ,
ಮೊದಲು ಅಂದಣವ ಬಿಟ್ಟಿಳಿಯ ಬೇಕೆಂಬುದನು
ತಿಳಿಸು ಆತನಿಗೆ" ಎಂದರು. ಮಾರನಾಯಕಗೆ
ಇನ್ನು ನಾಲ್ಕಾರು ಹೆಜ್ಜೆಯಲಿ ಇಳಿವುದೆ ಇತ್ತು.
ಹೆಣ್ಣ ಪಡೆಯನು ನೋಡಿ ಹೆದರಿದನು ಎಂಬೊಂದು
ಹಳಿವ ಭಯವಿಲ್ಲದಿರೆ ಆಗಳೇ ಇಳಿವುದಕು
ಅವನು ಒಪ್ಪುವನೆ. ಹಳಿವಿಗೆ ಅಂಜಿ ಅಂದಣವ
ಇಳಿಯದೆಯೆ, ಮೊದಲು ಸಂಗತಿಯೇನು ತಿಳಿ, ಎಂದು
ಬೆಸಸಿದನು. ಕೆಂಪಾಜಿ, ಅಂದಣವನಿಳಿಯದಿರೆ
ನಾಯಕರು ನಮ್ಮಿಂದ ಒಂದು ಪಿಸುನುಡಿಯನೂ
ಕೇಳರೆಂದರು. ಮೊದಲೆ ಜಗಳ ಬಂದಿತೆ ಎಂದು
ನಾಯಕಗೆ ಚಿಂತೆ. ವಾದ ವಿವಾದಬಹುದು ದಿಟ,
ಅರಗುವರಿ ಸುಮ್ಮನಿರುವವಳಲ್ಲ, ಎಂದವನು
ಬಲ್ಲನಪ್ಪುದು. ಆದರೀರೀತಿ ಬೀದಿಯಲಿ

ಹೆಣ್ಣುಮಕ್ಕಳ ಜೊತೆಗೆ ವಾದ ನಡೆವುದು ಎಂದು
ಅವನು ನೆನೆದಿರಲಿಲ್ಲ. ಏನು ಮಾಡುವುದೆಂದು
ಒಡನೆ ತೋರದೆ ಮಾರನಾಯಕನು ಕೋಪದಲಿ
ಮುಂದೆ ನಡೆಯಿರೊ, ಏನು ಮಾಡುವರೊ ನೋಡುವಣ
ಎಂದು ಗದರಿದನು. ಇವರೊಂದೆ ಅಡಿ ಮುಂದಿರಿಸೆ
ಅರಗುವರಿ, ಕೆಂಪಾಜಿ ಊಳಿಗದ ಪಡೆಯೊಡನೆ,
ಎರಡು ಅಡಿ ಮುಂದರಿದು ಕತ್ತಿಯನು ಮೇಲೆತ್ತಿ
"ನಿಲ್ಲಲ್ಲೆ ; ಮುಂದರಿದೆ ತಲೆದಂಡ ; ನಿಲ್" ಎಂದು
ದನಿಯೆತ್ತಿ ಸಾರಿದರು. ನಾಯಕಗೆ ಇದು ಎಲ್ಲ
ಬಹು ಚಿತ್ರವೆಂದು ತೋರಿತು. ಯಾವ ಧೈರ್ಯದಲಿ
ಇವರಿನಿತು ಗಡುಚಾದರೆಂದವನು ಮನಸಿನಲಿ
ಆಳೋಚಿಸುತ, ವೃಥಾ ವ್ಯಥೆಗೆ ಗುರಿಯಾಗದಿರಿ,
ಮಾರನಾಯಕ ಹೆಣ್ಣು ಮಕ್ಕಳಿಗೆ ಹೆದರುವನೆ,
ಎಂದು ತಿಳಿಸಿದನು. "ಕಾರುಗಹಳ್ಳಿನಾಯಕರು
ಹೆಣ್ಣಿಷ್ಟಕಂಜದಿಹ ವೀರರೆಂಬುದು ನಮಗೆ
ಅವರ ಈ ಮೊದಲ ನಡೆಯಿಂದಲೇ ತಿಳಿದಿಹುದು ;
ಆದರೂ ಈಗ ಅರಮನೆಯ ಮರ್ಯಾದೆಯನು
ಕೆಡಿಸ ಬಂದಿಹರಾಗಿ ನಾವೆ ಮುಂಬರಿದಿಹೆವು ;
ಇಂತಪ್ಪ ಸಮಯದಲಿ ಈ ರೀತಿ ನಡೆವುದನು
ಮಹಿಷಾಸುರನ ಸದೆದ ಮನೆದೈವ ಚಾಮುಂಡಿ
ನಮಗೆ ಕಲಿಸಿಹಳು" ಎಂದರಗುವರಿ ನುಡಿಸಿದರು.
ನಾಯಕಗೆ ಮಿತಿಮೀರಿ ಕೋಪ. "ಯಾರೋ ಅಲ್ಲಿ ?
ಏನು ನೋಡುತಲಿಹಿರಿ ? ಅರಿಯದಿಹ ಹೆಣ್ಣೆಂದು
ನಾ ಸುಮ್ಮನಿರೆ ನೀವು ಸುಮ್ಮನೆಯೆ ನಿಲ್ಲುವಿರ ?
ಈ ಹರಟೆಸಾಕು ; ಹೊಡೆದೊಳಗಟ್ಟಿ ; ಆ ಮೇಲೆ
ಇವರೊಡನೆ ಮಾತನಾಡುವ" ಎಂದು ಒದರಿದನು.

ಇವನ ಸೇವಕರು ಮುಂಬರಿವ ಮುನ್ನವೆ ಅಲ್ಲಿ
ಅರಗುವರಿಯನು ಮರೆಸಿ ಒಂದು ವೀರಾಕಾರ
ಮುಂದೆ ಬಂದಿತು; ಅವಳ ಕೈಯಕತ್ತಿಯ ಬೇಡಿ
ಕೈಯ ನೀಡಿತು ; ಅವಳು ಕತ್ತಿಯನು ಕೊಡೆ ಅದನು
ಕೊಂಡು ನಾಯಕನ ಅಂದಣದ ಕಡೆ ಸಾರಿತು.
ಎಣಿಸದಿದ್ದ ಇದೇನೊ ನಡೆಯುತಿರೆ ಸುತ್ತು ಜನ
ಚಿತ್ರದಲಿ ಬರೆದ ಗೊಂಬೆಗಳಂತೆ ನಿಂದಿಹರು.
ಕತ್ತಿಯನು ಹಿಡಿದ ವೀರಾಕಾರ ನಾಯಕನ
ಅಂದಣದ ಬಳಿಗೈದಿ "ಅರಗುವರಿ ನಿಂತಿಹರು ;
ನೀವು ಅಂದಣದಿ ಕುಳ್ಳಿರಬಹುದೆ? ಇಳಿಯಿರಿ"
ಎಂದು ಹೇಳಿತು. ಮಾರನಾಯಕಗೆ ರೋಷದಲಿ
ಪ್ರಜ್ಞೆ ತಪ್ಪಿತು. "ಇದನು ಕೇಳುವನು ನೀ ಯಾರು?
ನಡೆ ಆಚೆ" ಎಂದನಾತನು. "ನಾವು ಯಾರೆಂದು
ಇನಿತರಲೆ ತಿಳಿಯುವುದು. ನೀವು ಅಂದಣದಿಂದ
ಇಳಿದು ಕೇಳಿರಿ" ಎಂದು ನುಡಿದ ಎದುರಿನ ವೀರ.
ಮಾರನಾಯಕ ತನ್ನ ಕತ್ತಿಯನು ಒರೆಯಿಂದ
ಸೆಳೆದು ಅಂದಣದಿಂದ ಇಳಿದು ಕಾವಲ ಕರೆದು,
ಇವನ ಬಡಿಯಿರೊ, ಎಂದು ಕೂಗಿದನು. ಈ ಮೊದಲೆ
ಇತ್ತ ಯದುನೃಪರ ಎಡಗಡೆಗೆ ಸುಗ್ಗಾ ಜಟ್ಟಿ
ಬಲಗಡೆಗೆ ಕೃಷ್ಣರಾಜರು, ಇವರ ಹಿಂಗಡೆಗೆ
ನೂರು ಜನ ಜಟ್ಟಿಗಳು, ನಿಂದಿಹರು. ಯದುನೃಪನ
ನೋಡು ನೋಡುತ ಮಾರನಾಯಕನ ಮನಸಿನಲಿ,
ಅರಗುವರಿ ಇವನ ವರಿಸುವಳು, ಇವನೆದುರಿನಲಿ
ತನ್ನ ವಿಕ್ರಮ ನಡೆಯದೆಂದು ತೋರಿತು. ಜೊತೆಗೆ
ಇವನು ಯಾರೆಂದು ತಿಳಿವೊಂದು ಕೌತುಕ. "ಎಲಾ
ನೀ ಯಾರು" ಎಂದು ಕೇಳಿದನು. ಹಿಂದಣ ಒಂದು
ದನಿ, ಹೆಣ್ಣಿನದು, "ನಿನ್ನ ಕೊಂದು ದೇವಾಂಬೆಯನು

ಮದುವೆ ನಿಲಲುಳ್ಳ ಯದುರಾಜ" ಎಂದಿತು. ಇಂತು
ಬಾನದನಿಯೆಂಬಂತೆ ತೋರಿದೀ ನುಡಿಯಿಂದ
ಮೈಸೂರ ಮಂದಿಯುಬ್ಬಿತು. ಮಾರನಾಯಕನ
ಧೃತಿ ನಡುಗಿ ಇಳಿದುಹೋಯಿತು. "ಯದುರಾಜನೆ?
ಇಕೊ, ರಾಜಸಿಗೆ" ಎಂದು ಅವನು ಕತ್ತಿಯನೆತ್ತಿ
ಬೀಸಿ ಹೊಡೆದನು. ಮಿಂಚಿನಂತಿಳಿವ ಕತ್ತಿಯನು
ತಡೆದು ಸುಗ್ಗಾಜಟ್ಟಿ ಸುರಗಿಯನು ಚಾಚಿದನು.
ನಾಯಕನ ಕಾವಲಿನ ಮುಂದಾಳು ಎಡದಿಂದ
ಯದುನೃಪನಸಿರಿಯ ನೋಡಲು ಕೃಷ್ಣಭೂಪಾಲ
ಅವನ ರಟ್ಟೆಗೆ ಪೆಟ್ಟನಿಟ್ಟು ಆ ಘಾತವನು
ತಡೆದು ನಿಲಿಸಿದರು. ಯದುಭೂಪಾಲ, ಸುಗ್ಗನಿಗೆ
ಇನಿಸು ತಡೆ ಎಂದೊರೆದು, ನಾಯಕನ ಕುರಿತುದೇ
"ಮೈಸೂರು ನಿಮ್ಮದಲ್ಲೆಂದು ಸಾಧಿಸುವುದಕೆ
ನಿಮ್ಮೊಡನೆ ಮಲ್ಲಯುದ್ಧವಗೆಯ್ಯುವರೆ ನಾವು
ಸಿದ್ಧರಾಗಿಹೆವು" ಎಂದರು. ಕೃಷ್ಣಭೂಪಾಲ
"ಅಂತಿರಲು, ಅಣ್ಣಾಜಿ, ನಿಮಗಾಗಿ ಇವರೊಡನೆ
ನಾನು ಕಾದುವೆನು" ಎಂದರು. ನಾಯಕನು ಅದಕೆ
"ಜಾತಿ ಕುಲ ಗೋತ್ರದಲಿ ಸಮನಾದ ಜನದೊಡನೆ
ಮಲ್ಲ ಕಾಳಗ ಕೂಡುವುದು. ನಿಮ್ಮ ಜಾತಿ ಕುಲ
ಗೋತ್ರವನು ನಾವು ಕಾಣೆವು" ಎಂದು ಜರುವಿದನು.
ಜಟ್ಟಿ ಸುಗ್ಗಣ್ಣ "ಕುಲಗೋತ್ರದಲಿ ನಿಮಗಿವರು
ಸಮನಲ್ಲ; ನಿಮಗೆ ಸಮ ನಾನು ಒಬ್ಬನೆ ಇಲ್ಲಿ;
ನನ್ನೊಡನೆ ಸೆಣಸಿ" ಎಂದನು. ಯದುನೃಪಾಲಕರು
ತುಸ ನಕ್ಕು ನಾಯಕನ ಕುರಿತು " ಹಸ ನಿಲುವುದಕೆ
ಕುಲ ನೋಡಲಾಗದೆನ್ನುವ ನೀವು ಕಾಳಗಕೆ
ಕುಲ ಅರಸುವಿರ? ಇರಲಿ. ನಾವು ಪಾಂಡವ ಬಂಧು
ಕೃಷ್ಣರಾಯನ ವಂಶಿಕರು. ಮಲ್ಲಯುದ್ಧದಲಿ

ನಿಮ್ಮ ತೋಳಿಗೆ ನಮ್ಮ ತೋಳು ಸೋಕಲು ನಿಮಗೆ
ಕಲೆ ಇಲ್ಲ. ಆದರೂ ಮೈಯ್ಗೆ ಮೆಯ್ ಸೋಕುವುದು
ಬೇಡೆನಲು ತೋಮರ ಕಠಾರಿ ಭಲ್ಲೆಯ ಕತ್ತಿ,
ಯಾವ ಆಯುಧ ನಿಮಗೆ ಒಪ್ಪುಗೆಯೊ, ಅದ ಹಿಡಿದು
ಇಬ್ಬರೇ ಯುದ್ಧಮಾಡುವ. ವಿಜಯದಶಮಿಯನು
ನೆರವೇರಿಸಲು ಇನಿತು ಚೆನ್ನಾದ ಬೇರೊಂದು
ವಿಧಿಯಿಲ್ಲ" ಎಂದು ಒರೆದರು. ಹಿಂದೆ ಮೈಸೂರ
ಜಟ್ಟಿ ಕಂದಾಚಾರಮಂದಿ ಸುಗ್ಗನಹುಬ್ಬ
ಸನ್ನೆಯಲಿ ಅರಮನೆಯ ಬಾಗಿಲನು ಕಾಯುತ್ತ
ಯದುನೃಪತಿಗೊತ್ತಾಸೆಯಾಗಿ ನಡೆವಾಸೆಯಲಿ
ದಟ್ಟಯಿಸಿ ನಿಂತಿಹುದು. ಇತ್ತ ನಾಯಕನ ಜನ
ಕಾಳಗವನೆಳಸಿ ಬಂದಿರಲಿಲ್ಲ. ನಾಯಕನೆ
ಇದುವರೆಗೆ ಇಲ್ಲದೊಂದುತ್ಪಾತ ಈ ದಿವಸ
ಒದಗುವುದು ಎಂದು ಎಣಿಸಿರಲಿಲ್ಲ. ಪಡೆ ಪಡೆಯು
ತಾಗಲೆಂಬನೆ ತನ್ನ ಮಂದಿ ಸಾಲದು. ಇನ್ನು
ಉಳಿದುದೆರಡೇ ದಾರಿ. ಎದುರು ನಿಂತವನೊಡನೆ
ಸೆಣಸುವುದು ; ಇಲ್ಲವೇ ಹಾಲ ಕುಡಿಯುವೆನೆಂದು
ಬಂದ ಬಾವುಗ ಮನೆಯ ಸೊಣಗ ಎದುರಿಗೆ ಬರಲು
ಈಗ ಬಾಯಿಗೆ ಹಾಲು ಸೇರದೆನ್ನುತ ತಿರುಗಿ
ಓಟಕೀಳುವ ರೀತಿ ಓಡುವುದು. ಓಡಿದನೆ
ಅವಮಾನ. ಮೈಸೂರ ಅರಸು ಎಂದುಗ್ಗಡಿಸಿ
ಕರೆಸಿಕೊಂಡವನು, ಗಾಳಿಯಲಿ ಆ ಉಗ್ಗಡಿಕೆ
ಇನ್ನಾದರೂ ಕೇಳುತಿರುವಂದೆ ಮೈಸೂರು
ನನತಲ್ಲವೆಂದು ತಿರುಗಿದೊಡೆ, ಮೈಸೂರೇಕೆ
ಕಾರುಗಳ್ಳಿಯ ಪಾಳೆಯವನಾದರೂ ತಾನು
ಬಿಡಲೆ ಬೇಕಾಗುವುದು. ಇಂತೆಲ್ಲ ಯೋಚನೆಯು
ತಲೆಯೊಳಾಕ್ಷಣದಿ ಹರಿದಿರೆ ಮಲ್ಲಕಾಳಗವೆ

ಸರಿಯೆಂದು ನಾಯಕನು ಗ್ರಹಿಸಿದನು. ಇವನೇನು
ಸಾಮಾನ್ಯ ಹೇಡಿ ಮಾನವನಲ್ಲ. ದುರ್ಬಲರು
ಎದುರೊಳಿರೆ ಬೆದರಿಸುವ ಹೇಡಿತನದೊಂದು ಎಳೆ
ಇವನ ಬಾಳಲಿ ಬೆರೆತಿಹುದು ಅಷ್ಟೆ. ಇಂತಹರು
ರಾವಣನ ಕುಲದವರು. ಹೆಣ್ಣಾಸೆ ಮಣ್ಣಾಸೆ
ಹೆಸರಾಸೆಯಿಂದ ಈ ಜನ ಸಮಯವನು ಹೊಂಚಿ
ನಿರ್ಬಲರ ಭಯಪಡಿಸಿ ಹಿರಿದಪ್ಪೆವೆನ್ನುವರು.
ಕಾದಲೇಬೇಕೆನಲು ಕಾದುವರು; ಧೃತಿ ಉಂಟು ;
ಕಾದದೆಯೆ ಸುಲಭದಲಿ ಆಸೆ ಕೈಸೇರಿರೊಡೆ
ಬೇಡೆನರು. ಮಾರನಾಯಕ ಕತ್ತಿಯಾಟದಲಿ
ಬಲಿತಕ್ಕೆ. ಬೇರಾವ ದಾರಿಯೂ ಕಾಣದಿರೆ
ಎದುರಿನಲಿ ನಿಂತು ಮಾರ್ನುಡಿಗೆಂದು ಕಾದಿರುವ
ಯದುನೃಪರ ಕುರಿತು, "ಮೈಸೂರು ನಮ್ಮತು ಎಂದು
ನಮ್ಮ ಸಾಧನೆ. ಅಲ್ಲವೆಂಬವರ ಕಾದುವುದು
ನಮಗೆ ಸಮ್ಮತ. ಕುಮಾರ್ತಿಯರು ನಿಮ್ಮನು ಇಂತು
ನಮ್ಮೆದುರು ನಿಲಿಸಿರುವರಾಗಿ ನಿಮ್ಮನು ಗೆಲಿದೆ
ತೊಟ್ಟ ಪಣವನು ನಾವು ನಿಲಿಸಿಕೊಂಬರು" ಎಂದು
ಸುಗ್ಗಜಟ್ಟಿಯ ಕುರಿತು "ಎಲ ಅಣ್ಣ ಜಟ್ಟಿಮಗ
ನಿಮ್ಮ ಮುಂದಿಯ ಹೆಜ್ಜೆ ಹಿಂದರಿಸು. ಎಡೆಮಾಡು.
ಕಣವ ನೀನೇ ಕಾಯ್ದುಕೊಳು" ಎಂದು ನುಡಿದವನು
"ನಮ್ಮವರು ಹೆಜ್ಜೆ ಹಿಂದರಿಯಿರೋ, ಎಡೆಮಾಡಿ"
ಎಂದು ಆಣತಿಮಾಡಿ ಯದುನೃಪಾಲರ ಕುರಿತು,
"ಬನ್ನಿ ಕತ್ತಿಯಲಿ ಕಾದುವ" ಎಂದು ಮೊಳಗಿದನು.
ಜಟ್ಟಿ ಸುಗ್ಗಣ್ಣ ಯದುನೃಪರೆದುರು ಕೈಮುಗಿದು
ಕೈಚಾಚಿ ನಾಲ್ಕು ಪಕ್ಕದ ಜನರ ಅಸಿತನಿತು
ಹಿಂಗಡೆಗೆ ಸರಿಸಿ ಮಧ್ಯದಿ ಕಣವ ಮಾಡಿದನು.
ಇಂತು ಗೆಯ್ಯುವ ಅವಸರದಲಿ ಯದು ನೃಪತಿಯನು

ಮಾರನಾಯಕ ಮೋಸದಲಿ ತಾಗಿಯಾನೆಂದು
ಅವನು ಕಣ್ಣಿಡಮರೆದನಿಲ್ಲ. ಅಂತೆಯೆ ಅನುಜ
ಕೃಷ್ಣರಾಯರು ಅಗ್ರಜನ ಕಾಯ್ದು ನಿಂತಿಹರು.
ಕಣ ತೆರದುದೇ ಸುಗ್ಗ ಮರಳಿ ಯದುನರಪತಿಗೆ
ಕೈಮುಗಿದು ಬದಿಗೆ ನಿಂತನು. ಅವರು ಮುಲೆಯಕಡೆ
ಕಣ್ಣೆಸೆದು ದೇವಿಯನು ನೆನೆದು ಹಗೆಯನು ಕುರಿತು,
ನಾವು ಸಿದ್ಧರು ನೀವು ಸಿದ್ಧರಾಗಿರೆ ಅಡಿಯ
ಮುಂದಿಕ್ಕಿ, ಎಂದು ನುಡಿದರು

ನಾಯಕನ ಜೀವ
ಇನರ ಪರಿಯನು ನೋಡಿ ಎಂತ ದೊರೆಯಹನೀತ
ಎಂದು ಒಳಗೊಳಗೆ ಮೆಚ್ಚಿತು. ಮೆಚ್ಚಿ ಫಲವೇನು?
ಆಳದಿಂದಾಳಕ್ಕೆ ಬೆಳೆವ ಇರುಳಿನ ಕಪ್ಪು
ಕಾಲದಲಿ ಮುಂಬರಿವ ಬೆಳಕ ಮೆಚ್ಚಿದ ಮಾತ್ರ
ಅದರೊಡನೆ ಸಖ್ಯವನು ತಳೆದು ಬಾಳಲುಬಹುದೆ?
ಕಹಿಯನೊಟ್ಟುವ ಬೇವು ಯಾವುದೋ ಕ್ಷಣದಲ್ಲಿ
ನೀಯಪ್ಪೆನೆನೆ ಪೂರ್ವಚರಿತ ಅದ ಬಿಡುವುದೇ?
ಗಗನ ಚುಕ್ಕಿಯ ತಲೆಯ ತೊರೆದು ಪಾತಾಳವನು
ಕುರಿತು ದುಮುಕಿದ ನೀರು ಅರ್ಧ ದಾರಿಯನಿಳಿದು
ನಿಲುವನೆಂದರೆ ಸಾಧ್ಯವೇ? ಕರ್ಮಬಲದಂತೆ
ಬೇರೊಂದು ಬಲವಿಲ್ಲ. ಮಾರನಾಯಕ ತನ್ನ
ದೈವವನು ನೆನೆದು ಕತ್ತಿಯನೆತ್ತಿ ಹೆಜ್ಜೆಯನು
ಮುಂದಿಕ್ಕಿದನು. ಯದುನೃಪಾಲರಂತೆಯೆ ತಮ್ಮ
ಕತ್ತಿಯನು ಮೇಲೆತ್ತಿ ಮುಂದರಿದು ಹಗೆಯೊಡನೆ
ಆಡತೊಡಗಿದರು. ನಾಯಕ ಕತ್ತಿಯಾಟದಲಿ
ಬಲ್ಲಾಳೆ ಸರಿ. ಆದರಿವರ ಎದುರಲಿ ನಿಂತು
ಯಾರು ಎಂದೂ ಕಾಣದಾವುದೋ ಹೊಸ ಚಳಕ
ಹೊಸತು ಚಾತುರಿಯ ನೋಡಿದನು. ಒಮ್ಮೆಗೆ ಅತ್ತ,

ಇತ್ತ ಒಮ್ಮೆಗೆ, ಹಾಯುವಂತೆ ತೋರಿಸಿ ರಾಯ
ನಾಯಕರು ಇಬ್ಬರೂ ಒಬ್ಬರೊಬ್ಬರ ತಾಕಿ
ಗಾಯಪಡಿಸಲು ನೋಡಿದರು ; ಅನುವು ದೊರೆಯದಲೆ
ಇನಿಸಿನಿಸು ದೂರ ಸರಿದರು; ಮತ್ತೆ ಮುಂಬರಿದು
ಬೇರೊಂದು ಪಾಂಗಿನಲಿ ಒರ್ವರೊರ್ವರ ಸೋಕಿ
ಇರಿವ ಎಣಿಕೆಯಲಿ ತೊಡಗಿದರು. ಯದುನೃಪರಿಂತು
ನಾಯಕನ ಕೈಯ ಕಾಪಿನಲಿ ರಂಧ್ರವ ಹೊಂಚಿ
ಕಾದು ಎಂತೋ ನೋಡುವಂತೆ ಇರೆ, ನಾಯಕನು
ತನಗೇನೊ ಸಮಯ ದೊರಕಿಹುದೆಂಬ ಭ್ರಾಂತಿಯಲಿ
ಅವರ ವಕ್ಷಸ್ಥಲದ ಎಡದೆಸೆಗೆ ಗುರಿ ಇಟ್ಟು
ತಿವಿದು ಕತ್ತಿಯ ಚಾಚಿ ಮೇಲ್ವಾಯ್ದು ನುಗ್ಗಿದನು.
ಯದು ನೃಪತಿ ಬಲಕೆಬಾಗಿದರು. ತಿವಿದೈತಂದ
ನಾಯಕನ ಕತ್ತಿ ಅವರೆಡ ತೋಳ ಏನೆನಸೊ
ಗಾಯಪಡಿಸಿತು. ನಾಯಕನಿಗೆ ತಾಬಯಸಿದ್ದ
ತಡೆ ದೊರೆಯದಿರೆ ಆಯತಪ್ಪಿ ಮುನ್ನೊಡಲಾಗಿ
ಅವನು ಕುಕ್ಕುರಿಸಿದನು. ತನ್ನನಿರಿಯಲು ಬಂದ
ನಾಯಕನ ತಪ್ಪಿಸಲು ಬಾಗಿದ್ದ ಯದುನೃಪತಿ
ಅವನ ಕಡಿವರೆ ಕತ್ತಿ ಎತ್ತಿದವರಂತೆಯೇ
ಆದಬೀಸಿ ಇಳಿತರಿಸೆ ನಾಯಕನ ಕೊರಳನೇ
ಕಡಿದು ಆ ಬಡಪಾಪಿ ತಲೆಯ ಚಂಡಾಡಿತದು.
ಹಾ ಎಂದು ಜಟ್ಟಿ ಸುಗ್ಗಣ್ಣ ರಾಯರ ಸಾರಿ
ತೋಳಗಾಯಕೆ ಒಂದು ವಸ್ತ್ರವನು ಸುತ್ತಿದನು.
ಸುತ್ತನಿಂತಿಹ ಮಂದಿ ಭೋರ್ಗರೆದು ಮೊರೆಯುತಿರೆ
ಕೃಷ್ಣರಾಯರು ನಾಯಕನ ಕೈಯ ಕತ್ತಿಯನು
ಹಿಡಿದೆಳೆದು ಕಡಿದ ತಲೆಯನು ಅದರ ಮೊನೆಯಿಂದ
ಚುಚ್ಚಿ ಮೇಲೆತ್ತಿದರು. ಅರಮನೆಯ ಮಾಡದಲಿ
ಹೆಣ್ಣು ಮಕ್ಕಳು ಉಘೆ ಉಘೇ ಎಂದು ಕರೆಯುವುದು

ಕೇಳಿಸಿತು. ಉತ್ತರಕ್ಷಣವೆ "ಜಯ ಯದು ನೃಪತಿ;
ಜಯ ನಮ್ಮ ನಾಡರಸ; ಜಯತು ಮೈಸೂರ ದೊರೆ;"
ಎಂದು ಅಲ್ಲಿಂದಲೇ ಜಯಘೋಷ ಹೊರವಂಟು
ಅರಮನೆಯ ಮುಂಗಡೆಯ ಜನವೆಲ್ಲ ಆ ದನಿಗೆ
ದನಿಯ ಜೋಡಿಸಿ ಎಲ್ಲ ಕೊರಲು ಯದುನರಪತಿಯ
ಮೈಸೂರು ಹದಿನಾಡು ಕಾರುಗಹಳ್ಳಿಯ ರಾಜ
ಎಂದು ಅಬ್ಬರಿಸಿ ಸಾರಿತು.

ಇನ್ನು ಉಳಿದಿಹುದ
ಯಾರಾದರೂ ಊಹಿಸಲು ಬಹುದು. ನಾಯಕನ
ಮೆಯ್ಗಾವಲವರು ಪಡೆವಳರು, ಪಾಳೆಯಗಾರ
ತೀರಿದುದ ಕಂಡು, "ಕಾರುಗಹಳ್ಳಿ ಏಸಿಹುದು
ಅದು ನಮ್ಮ ನಾಯಕರ ಗೆಲಿದವರ ಸೊತ್ತಹುದು,"
ಎಂದು ಯದು ನರಪತಿಗೆ ಕೈಮುಗಿದು ಬಾಗಿದರು.
ಅರಗುವರಿ ತಾಯಿ ರಾಣಿಗೆ, ಯದು ನೃಪಾಲರನು
ಒಳಗೆ ಕರೆಯಿಸಿ ನೋಡಿ, ಎಂದು ಬಿನ್ನಯಿಸಿದರು.
ಆದ ಗಾಯಕೆ ಹತ್ತು ಪಡಿ ಚಿಕಿತ್ಸೆಯನೆಸಗಿ
ಅರಮನೆಯ ವೈದ್ಯ ಪರಿಚರ ಊಳಿಗದ ಹೆಣ್ಣು
ಎಲ್ಲರೂ ರಾಜ ವಿಕ್ರಮನನೋಲೈಸಿದರು.
ಯದುರಾಜರಿಗೆ ಗಾಯದಿಂದಾದ ಆಯಸಕು
ಇವರ ಸೇವೆಯ ಭರದ ಆಯಸವೆ ಹೆಚ್ಚಾಯ್ತು.
ಇಂತೆಲ್ಲ ಮಂದಿ ಒಂದಲ್ಲೊಂದು ನೆಪದಿಂದ
ನರಪತಿಯ ಬಳಿ ಸಾರಿ ನಿಂತು ನೋಡಿದ ಮೇಲೆ
ದೊಡ್ಡ ದೇವಾಂಬೆ, ಪೂಜೆಯ ಮಂಟಪಕೆ ಇನ್ನು
ಎಲ್ಲ ನಡೆಯಿರಿ, ಎಂದು ಜನಕೆ ಆಣತಿಗೆಯ್ದು
ಬಳಿಯ ಊಳಿಗದ ಮಂದಿಯ ಕರೆದು ರಾಜರಿಗೆ
ಅಂದಿನಾ ವಸ್ತ್ರಗಳ ತಂದು ಒಪ್ಪಿಸಿ ಎಂದು
ಆಜ್ಞೆಯನು ನೀಡಿ ಮರ್ಯಾದೆಯಲಿ ತಲೆಬಾಗಿ,

ಅರಗುವರಿ ಕೆಂಪಾಜಿ ಇವರ ಜೊತೆಯಲಿ ಅತ್ತ
ಒಂದು ಕಡೆ ನಿಲಲು, ಯದುರಾಜರಿಗೆ "ಈ ದಿನದ
ಸುಮುಹೂರ್ತದಲೆ ಮದಿವೆ ಎರಡನೂ ಬೆಳೆಸುವರೆ
ಬಳಗವೆಲ್ಲವು ಬಯಸುತಿದೆ" ಎಂದು ಉಸಿರಿದರು.
ಯದುನೃಪತಿ "ಹಗೆಯ ಕೊಂದಷ್ಟು ಮಾತ್ರಕೆ ನಾವು
ಮೈಸೂರ ರಾಜಪುತ್ರಿಯರ ಪಾಣಿಗ್ರಹಣ
ನಮ್ಮ ಪಾಲೆಂದು ಎಣಿಸುವರಲ್ಲ. ಅವರಿಚ್ಛೆ
ಎಂತೊ ಅಂತೇ ನಡೆಯುವವರು. ಈ ಹದನರಿತು
ಹಿರಿಯರಾಗಿಹ ನೀವು ಏನನೆ ನಿರೂಪಿಸಲು
ಅದನು ಸಂತಸದಿಂದ ಎಸಗುವೆವು" ಎಂದಿಹರು.
ಸಂತೋಷ ಎಂದು ಆರಸಿತಿ ಜೋಯಿಸರ ಕರೆದು
ಎರಡು ಮದುವೆಯನು ಇಂದೇ ನಡೆಸುವೆವು, ಇದನು
ಊರೊಳೆಲ್ಲರಿಗು ಸಾರಲಿ ಎಂದು ಬೆಸಸಿದರು.

ಹಗೆಯಳಿದ ಸಂತಸದಿ ವಿಜಯದಶಮಿಯ ಪೂಜೆ
ಅನ್ವರ್ಥವಾಗಿ ನಡೆಯಿತು. ಇದ್ದ ನೆಂಟರೇ
ಒಟ್ಟುಗೂಡಿರೆ ಅಂದೆ ಕಲ್ಯಾಣಮಂಟಪದಿ,
ಯದುನೃಪತಿ ಚಿಕ್ಕದೇವಾಂಬೆಯನು, ಅವರನುಜ
ಕೆಂಪಾಜಿಯನು, ದೇವಿ ಚಾಮುಂಡಿಕಾಂಬಿಕೆಯ
ಸಮ್ಮುಖದಿ ಶಾಸ್ತ್ರೋಕ್ತರೀತಿಯಲಿ ಕೈ ಹಿಡಿದು
ಮದಿವೆಯಾದರು. ರಾಜಶಾರ್ದೂಲ ಯದುನೃಪತಿ
ಅಂದೆ ಮೈಸೂರ ಗದ್ದಿಗೆಯೇರಿ ಮೈಸೂರು
ಹದಿನಾಡು ಕಾರುಗಳ್ಳಿಯ ರಾಜಪಟ್ಟವನು
ಕಟ್ಟಿಕೊಂಡರು. ಮುಂದೆ ಕೃಷ್ಣರಾಜರ ಕುರಿತು
ಯದುನೃಪತಿ, ಕೆಂಪಾಜಿಯನು ಕುರಿತು ದೇವಾಂಬೆ,
ರಾಜ್ಯದಲಿ ಅರ್ಧವನು ನೀವು ಕೊಳ್ಳಿರಿ, ಅಲ್ಲಿ
ಹದಿನಾಡಿನಲಿ ನಿಂತು ರಾಜ್ಯವಾಳಿರಿ, ಎಂದು

ಬೇಡಿದರು. ಕೆಂಪಾಜಿ ಕೃಷ್ಣರಾಯರು ಕೂಡಿ
"ಹಿರಿಯ ನೀವಿರುವಂದು ಕಿರಿಯರಿಗೆ ರಾಜ್ಯವೇ?
ನಾವು ಒಲ್ಲೆವು. ನಿಮ್ಮ ಬಳಿ ಇರುತ ನಿಮ್ಮಂತೆ
ನಡೆದು ಕೊಂಬುದೆ ನಮಗೆ ಸೌಖ್ಯ" ಎಂದರು. ಅಂತೆ
ಸೌಹಾರ್ದದಲಿ ಬೆಳೆದುದೀ ಅಣ್ಣ ತಮ್ಮದಿರು
ಅಕ್ಕತಂಗಿಯರ ಬಾಳುವೆ. ದೈವಭಕ್ತಿಯೇ
ಹಿರಿದೆಂದು ಬದುಕ ನಡೆಸಿದ ಯದುನರೇಂದ್ರರಿಗೆ
ಚಿಕ್ಕದೇವಾಂಬೆಯಲಿ ಒಬ್ಬ ಕುವರನು ಜನಿಸಿ
ಬಾಲ್ಯದಲೆ ತೀರಿಕೊಂಡನು. ಕೃಷ್ಣರಾಜರಿಗೆ
ಕೆಂಪಾಜಿಯಲಿ, ಹೆಣ್ಣು ಮೂರು ಗಂಡೊಂದಾಗಿ,
ಎಲ್ಲವೂ ಬಾಳಿದವು. ಯದುನೃಪರ ಸಂತತಿಯ
ಮುಂದೆ ಈ ಗಂಡೆ ನಡೆಸಿತು. ಇದೇ ಕಾರಣವೆ
ನಮ್ಮ ನಾಡಿನ ಸಂಪ್ರದಾಯದಿತಿಹಾಸದಲಿ
ರಾಜವಂಶದ ಮೂಲ ಪುರುಷರನು ಯದುರಾಜ
ಕೃಷ್ಣರಾಜರು ಎಂಬ ಸೋದರರು ಎಂದಿಹುದು.

*　　　*　　　*

ಹಿರಿಯಣ್ಣ ತಾ ಹೇಳಲಿದ್ದ ಕತೆಯನು ಇಂತು
ಹೇಳಿಮುಗಿಸಿರಲು ವೆಂಕಪ್ಪ ಕೆಳೆಯರ ಕುರಿತು
ನುಡಿದರೀತೆರ: "ಕನ್ನಡದ ರಾಜ್ಯಲಕ್ಷ್ಮಿಯನು
ಪೂಜಿಸುವ ನವರಾತ್ರಿ ಹಬ್ಬದಲಿ ಪಾಡ್ಯಮಿಯ
ಈ ದಿವಸ ಹಿರಿಯಣ್ಣ ಈ ಕತೆಯ ಹೇಳಿಹುದು
ಬಹು ಉಚಿತ, ತುಂಬ ಸಂತೋಷ. ಕರ್ಣಾಟಕದ
ರಾಜಮನೆತನಗಳಲಿ ನಮಗೀಗ ಉಳಿದಿಹುದು
ಮೈಸೂರ ರಾಜಮನೆತನ ಒಂದೆ. ಕನ್ನಡದ
ಭಾಗ್ಯದಧಿದೈವ ಎಂದೂ ಇದನು ರಕ್ಷಿಸಲಿ.

ಮನೆತನದ ಮೂಲಪುರುಷರು ಎಂದು ಹೆಸರಾಂತ
ಯದುಕೃಷ್ಣ ಸೋದರರ ಕತೆ ಸಂಪ್ರದಾಯದಲಿ
ಬೇರೆತೆರ ಬೆಳೆಯುವುದು. ನಾಯಕನ ಅರಮನೆಗೆ
ಔತಣಕೆ ಕರೆದರೆಂದೂ, ಅವನು ಎಡೆಯೆದುರು
ಕುಳಿತಿದ್ದ ವೇಳೆಯಲಿ ಮೈಸೂರಜನ ' ಬೆಂಕಿ '
' ಬೆಂಕಿ ' ಎಂದೊದರಿಗದ್ದಲಮಾಡಿದರು ಎಂದೂ,
ಎಡೆಗೆ ಕುಳಿತವರು ಎದ್ದೋಡುತಿರೆ ನಮ್ಮವರು
ದೀಪಗಳ ಕೆಡಿಸಿ ಕತ್ತಲುಮಾಡಿ ಬಾಗಿಲಲಿ
ಮಾರನಾಯಕನನೂ ಪರಿವಾರದವರನೂ
ಕಡಿದರೆಂದೂ ಹಿಂದಣಿಂದ ಬಂದಿಹಮಾತು.
ಇದ ಕೇಳುವಂದೆಲ್ಲ ನನ್ನ ಮನಸಿಗೆ ಏನೊ
ಸಂಕೋಚ. ನಿಜವಾಗಿ ಆ ರಾಜಸೋದರರು
ಇಂತು ಹಗೆಯನು ಕೊಂದರೆಂಬುದನು ನಾ ನಂಬೆ.
ವಿಕ್ರಮದ ಇತಿಹಾಸ ಬೇರೆ ಯಾವುದೊ ಇದೆ
ಅದನು ಜನ ಕೆಡಿಸಿ ಈ ರೀತಿ ಹೇಳುತಲಿದೆ
ಎಂದೆ ಮನ ಹಠಗೆಯ್ಯುವುದು. ನಡೆದ ಸಂಗತಿ
ಏನು ಎಂಬುದನು ಕಾಣದು, ರಚಿಸಲಾರದು ;
ಆದರು ಪ್ರತೀತಿಯನು ಸರಿಯೆಂದು ಒಪ್ಪದು.
ಇಂತಿರಲು ಇಂದು ಹಿರಿಯಣ್ಣ ಈ ಕತೆ ಹೇಳಿ
ನನ್ನ ಮನಸಿನ ಒಂದು ಕೊರತೆಯನು ನೀಗಿದರು.
ನನ್ನಂತೆ ಬಹುಬಂದಿ ಇರಬೇಕು ; ಅವರಿಗೂ
ಇದರಿಂದ ತೃಪ್ತಿಯಪ್ಪುದು. ರಾಜರನ್ವಯದ
ಮೂಲಪುರುಷರು ಇಂತ ವೀರರಾಗಿರಬೇಕು;
ತಾಯದಿರು ಇಂತ ದೃಢಮನ ದೈವಭಕ್ತಿ ಧೃತಿ
ಸತ್ಯಚರಿತವ ಮೆರೆಯಬೇಕು. ಇದೆ ನಮ್ಮಾಸೆ.
ಈ ಕತೆಯ ವಿವರ ಈ ಬಯಕೆಯನು ಸಲಿಸುವವು "
ಇಂತು ವೆಂಕಪ್ಪ ಟಿಪ್ಪಣಿಯ ಮಾತನು ನಿಲಿಸೆ

ರಾಮು ಸಭೆಯನು ಮುಗಿಸಿ ನಾಳೆ ಕತೆಹೇಳುವುದು
ನೀವು ಡಾಕ್ಟರೆ, ಎಂದು ಅವರನೆಚ್ಚರಿಸಿದನು.
ಅವರು ಬಿದಿಗೆಯ ದಿವಸ ಒರೆದಕತೆ ಮುಂದೆ ಇದೆ.
ಅದ " ಸಮಾಧಿಯ ಸತ್ವ " ಎಂದಿಲ್ಲಿ ಕರೆದಿದೆ.

# ಸಮಾಧಿಯ ಸತ್ವ

ಅಮೆರಿಕದ ಹಿರಿಯ ಉಪದೇಶಿ ಇಂಗರಸಾಲ
ಮತವಳರ ಆಟಗಳ ಬಣ್ಣಿಸುತ ಒಮ್ಮೆ ಈ
ಕತೆಹೇಳಿದರು.

ಜಪಾನಿನಲಿ ಟೋಕಿಯೊ ಎಂಬ
ಹಿರಿದೊಂದು ನಗರವಿಹುದಲ್ತೆ. ಅಲ್ಲಿಂದೆರಡೊ
ಮೂರೊ ಯೋಜನಗಳಲಿ ರಾಜಮಾರ್ಗದ ಬಳಿಯೆ
ಒಂದುಕಡೆ ಒಂದು ಮಂಟಪವುಂಟು. ಅದರಲ್ಲಿ
ಒಂದು ವೃಂದಾವನದ ತೆರದ ಕಟ್ಟಡವುಂಟು.
ಅಲ್ಲಿ ಅರ್ಚಕನೊಬ್ಬನಿಹನು. ಅವನಾಶ್ರಯದಿ
ಐದಾರು ಮಂದಿ ಶಿಷ್ಯರು. ಅಲ್ಲಿ ದಿನ ದಿನವು
ನೂರಾರು ಜನ ಬಂದು ವೃಂದಾವನಕೆ ತಮ್ಮ
ಹರಕೆಗಳನೊಪ್ಪಿಸುತ ಪೂಜೆಗಳ ಮಾಡುತ್ತ
ಕಾಣಿಕೆಯನಿತ್ತು ಹೋಗುವರು. ಕಿರಿ ಅರ್ಚಕರು
ಇಂತು ಸೇರಿದ ಕಾಸು ಕಾಳುಗಳ ಶೇಖರಿಸಿ
ನೈವೇದ್ಯಗಳ ಮಾಡಿ ವೃಂದಾವನದ ಮುಂದೆ
ಇರಿಸಿ ಪೂಜೆಗಳ ಮಾಡುವರು ; ಭಕ್ತರ ಗಡಣ
ದೈವಪ್ರಸಾದವನು ಪಡೆಯೆ ಕಾದಿರೆ ಅವರು
ಅರ್ಪಿಸಿದ ನೈವೇದ್ಯದಲಿ ಕೊಂಚವನು ಹಂಚಿ
ಉಳಿದ ಸಾಕನಿತ ನಿಲ್ಲಿಸಿಕೊಂಡು ತಮ್ಮೊಡೆಯ
ಹಿರಿಯರ್ಚಕಗೆ ಎಷ್ಟು ಬೇಕೊ ಅಷ್ಟನು ಬಡಿಸಿ
ಉಳಿದುದನು ತಾವು ಭುಜಿಸುವರು. ಜೊತೆಯಲಿ, ದಿನದ
ಅನ್ನ ಸಾರಿನ ಊಟಕೇನು ಇದ್ದೇ ಇಹುದು.
ರಾಜಮಾರ್ಗದಲಿ ಹೋಗುವರು ಬರುವವರೆಲ್ಲ
ಹರಕೆಗಳ ಸಲಿಸುತ್ತ ಮಹಿಮೆಗಳ ಹೊಗಳುತ್ತ
ವೃಂದಾವನದ ಹೆಸರು ಬಹಳ ಹಿರಿದಾಗಿಹುದು.

ಹೋಗಿ ಬರುವರ ಸಂಖ್ಯೆ ಬೆಳೆದಂತೆ ಆದಾಯ
ವೆಚ್ಚಗಳು ಹೆಚ್ಚಿದುವು. ಎಂತ ಮಹಿಮೆಯ ವಸ್ತು
ಈ ಸಮಾಧಿಯಲಿ ಅಡಗಿದ ಕತದಿ ಈಸು ಜನ
ನಡೆದು ಕೊಳುತಿಹರಿದಕೆ ಎಂದು ನುಡಿವರು ಜನರು.
ಮಕ್ಕಳಿಲ್ಲದ ಜನಕೆ ಮಕ್ಕಳಾದರು ಎಂದು,
ಮದುವೆಗೊದವಿದ್ದ ಹೆಣ್ಮಕ್ಕಳಿಗೆ ಇಚ್ಛಿಸಿದ
ವರರು ಸಿಲುಕಿದರೆಂದು, ಕೆಲಸಕಟ್ಟಲೆಗಳಲಿ
ಈ ಸ್ಥಳದಿ ಹರಕೆ ಮಾಡಿದವರಿಗೆ ಇಷ್ಟಾರ್ಥ
ಕೈಗೂಡಿತೆಂದು ವೈದ್ಯರು ಸೋತು ಕೈ ಬಿಟ್ಟ
ಪರಿಣಾಮಶೂಲೆ ಮೊದಲಾದ ಹಲರೋಗಗಳು
ವಾಸಿಯಾದುವು ಎಂದು, ಜನರೆಲ್ಲ ಹೇಳುವರು.
ಶಿಷ್ಯರಲಿ ಒಬ್ಬ ಏನೋ ರೋಗದಲಿ ನವೆದು
ಕಡ್ಡಿಯಂತಿದ್ದವನು ಇಲ್ಲಿ ಸೇರಿದಮೇಲೆ
ಸೇವೆಗಳ ಮಾಡುತೆ ಪ್ರಸಾದಗಳ ಸ್ವೀಕರಿಸೆ
ದುಂಡಾಗಿ ತುಂಬಿಕೊಂಡನು. ಭಕ್ತರಿದನೋಡಿ,
ಏನು ಮಹಿಮೆಯೊ ನೋಡು, ಎಂಥ ಸೆಣಕಲ ಇವನು
ವಾಯುಮೈ ಎಂಬಂತೆ ತುಂಬಿಕೊಂಡಿಹನೀಗ
ಎನ್ನುವರು. ಕೆಲರು—ಎಲ್ಲೊ ಇಂಥ ಜನ ಉಂಟು--
ಹೊಟ್ಟೆಗಿಲ್ಲದೆ ಮರುವ ಒಣಗಿ ತೆಳುವಾಗಿದ್ದ,
ಕವಳ ದೊರಕಿತು ಊದಿದಾನೆ ಎಂಬರು ಆವಕೆ.
ಇದಕೆ ಭಕ್ತರು, ಅಯ್ಯೊ ಅಯ್ಯೊ ಇಂತಾಡುವುದು
ಬಹುಪಾಪ, ಪಾಷಂಡತನ, ಸಮಾಧಿಯ ದೈವ
ಕೋಪಗೊಳೆ ಕಣ್ಣಿಂಗಿ ಹೋಗುವುದು, ಎನ್ನುವರು.
ಯಾರಾದರೂ ಇವರಕುರಿತು, ಈ ಕ್ಷೇತ್ರದಲಿ
ಇಷ್ಟು ಮಹಿಮೆಯ ಮೆರೆಯುತಿಹ ಸತ್ವಯಾವುದು,
ಎಂದು ಕೇಳಲು ಭಕ್ತರಾರಿಗೂ ಈ ಹದನು
ತಿಳಿಯದಿರುವುದು. ಇದನು ಶಿಷ್ಯರೂ ಕಾಣರು.

ಭಕ್ತಮಂಡಲಿಯಲ್ಲಿ ಬಹು ವೃದ್ಧರಾದವರು
ಹಲವು ವರ್ಷದ ಹಿಂದೆ ಇಲ್ಲಿ ಹಿರಿಯರ್ಚಕನ
ಕಂಡುದನು, ಬದಿಯಲಿ ಸಮಾಧಿ ಒಂದಿದ್ದುದನು,
ಹತ್ತಿರದಲೊಂದು ಮರಿಕತ್ತೆ ಮಲಗಿದ್ದುದನು,
ಮಾತ್ರಬಲ್ಲರು. ಬೇರೆ ವಿವರವನು ಕಾಣರು.
ಸಾಧು ಓರ್ವನು ಸಮಾಧಿಯ ಬದಿಗೆ ಕುಳಿತಿರಲು
ಊರಹಿರಿಯರು ಅವನಬಳಿಗೈದಿ ಉಚಿತದಲಿ
ನಡೆದುಕೊಂಡರು. ಅಂತೆ ಮೊದಲಾಯಿತಾಮಹಿಮೆ.

ಇಂತು ಹಲವರುಷ ನಡೆದಿದೆ. ಆಗ ದೇಶದಲಿ
ಮಳೆ ಬಹಳ ಛಲಮಾಡಿ ನಿಂತುಹೋಯಿತು. ನೆಲದ
ಬೆಳೆ ಸುಟ್ಟು, ಹುಟ್ಟು ಹಾಕಿದ ಬಿತ್ತನೆಯ ಕಾಳು
ಕೈಹತ್ತದಂತೆ ಹೋಯಿತು. ದೇವ ಮಂದಿರಕೆ,
ಗುರುಮನೆಗೆ, ತಿರಿಮನೆಗೆ, ಇಂತಮಹಿಮಾವಂತ
ಸುಕ್ಷೇತ್ರ ಸುಸಮಾಧಿಗಳಿಗೆ ನಡಸಿದ ಹರಕೆ
ಬರಿದೆ ಹೋಯಿತು. ಮನೆಗಳಲಿ ಕೊಡಲು ಕಾಳುಕಡಿ
ಕಡಮೆಯಾಯಿತು. ಸಮಾಧಿಯ ಬಳಿಯ ಸೇವೆಗಳು
ಕಡಮೆಯಾದುವು. ಜನರ ಹೃದಯದಲಿ ಭಕ್ತಿರಸ
ಇಂಗಿಹೋದಂತೆ ಕಾಣಿಕೆ ಇಲ್ಲದಾದುವು.
ಇದನೋಡಿ ಶಿಷ್ಯರಲಿ ಒಬ್ಬರಿಬ್ಬರು ಗುರುವ
ಅಪ್ಪಣೆಯ ಬೇಡಿ ಎಲ್ಲೆಲ್ಲಿಗೋ ನಡೆದರು.
ಇನ್ನು ಕೆಲದಿನ ಇಂತೆ ಇರೆ ಬೇರೆ ಇನ್ನಿಬ್ಬರು
ಗುರುವಿನಪ್ಪಣೆ ಪಡೆದು ಹೊರವಂಟರಲ್ಲಿಂದ.
ಕಡೆಗೆ ಗುರುವಿನ ಜೊತೆಗೆ ಸೇವೆಯಲಿ ನಿಂತಿಹನು
ಮೊದಲು ಅವರೆಡೆ ಬಂದ ಒಬ್ಬ ಶಿಷ್ಯನು ಮಾತ್ರ.
ಮಾರನೆಯ ವರುಷವೂ ಕ್ಷಾಮ ಅಂತೇ ಇರಲು
ನಾಡು ಹಾಹಾಕಾರದಲಿ ದೈವವನು ಮರೆಯೆ
ಇವರ ವರಮಾನ ಮತ್ತಿಷ್ಟು ಬತ್ತಿತು. ಲೋಕ

ಇಂತಾದುದನು ಕಂಡು ಗುರು ತನ್ನ ಬಳಿ ಇದ್ದ
ಆ ಒಬ್ಬ ಶಿಷ್ಯನನು ಕರೆದು, "ತಮ್ಮಾ ಇಲ್ಲಿ
ಕಾಲ ಚೆನ್ನಾಗಿಲ್ಲ; ನೀನು ನನ್ನೊಡನೆ ಇರೆ,
ಇಬ್ಬರಿಗೆ ಜೀವನವ ನಡೆಸದಿಲ್ಲಿಯು ಮಂದಿ;
ಉಳಿದ ಶಿಷ್ಯರು ಬೇರೆ ಎಡೆಗಳಿಗೆ ನಡೆದಂತೆ
ನೀಕೂಡ ನಡೆಯುವುದು ಲೇಸು" ಎಂದರು. ಶಿಷ್ಯ
ತಮ್ಮಪ್ಪಣೆಯ ಮೀರುವವನಲ್ಲ, ಹೊರಡುವೆನು,
ಎಂದೆನಲು ಗುರು ಅದಕೆ ಮೆಚ್ಚಿ ಸಂತಸಗೊಂಡು
"ಹೋಗಿಬಾ, ಒಳಿತು, ಎಲ್ಲಾದರೂ ಸುಖವಾಗಿ
ಬಾಳು" ಎನ್ನುತ ಹರಸಿ, ಮೊದಲಿಂದ ತನ್ನ ಬಳಿ
ಬೆಳೆದು ಹಿರಿದಾಗಿದ್ದ ಕತ್ತೆಯನು ಈತನಿಗೆ
ಹಿಡಿದಿತ್ತು, "ಇಷ್ಟುದಿನ ಇಲ್ಲಿದ್ದ ಗುರುತಾಗಿ
ಇದ ಕೊಂಡು ಹೋಗು, ತಮ್ಮಾ, ಒಳ್ಳಿತಾಗಲಿ"
ಎಂದವನ ಬೀಳುಕೊಟ್ಟರು.

ಶಿಷ್ಯ ಕತ್ತೆಯನು
ಗುರುವಿನಾಶೀರ್ವಚನದೊಡನೆ ಕೈಕೊಳ್ಳುತ್ತ
ಅವರಡಿಯ ಮುಟ್ಟಿ ವಂದಿಸಿ ಹೋಗಿಬಹೆನೆಂದು
ಕಣ್ಣೀರಹಾಕಿ ಹೊರಟನು. ಸ್ವಲ್ಪದೂರ ಅದ
ಏರಿ ದಾರಿಯ ಕಳೆದು ಇನ್ನಷ್ಟು ದಾರಿಯನು
ಸುಮ್ಮನೆಯೆ ನಡೆಯಿಸುತ ಆರೇಳು ದಿನ ಕಳೆಯೆ
ಬೆಂಗಾಡ ದೇಶವನು ಬಿಟ್ಟು ನಸು ಹಸುರಾದ
ನಾಡ ಸೇರಿದನು. ದಾರಿಯಲಿ ಹುಲ್ಲೋ ನೀರೊ
ಕಡಮೆಯಾಗಿಯೊ ಇಲ್ಲ ದಾರಿನಡೆದಾಯಾಸವ
ತಡೆಯಲಾರದೆಯೊ ಆ ಸ್ಥಳದೊಳಾಮರಿಕತ್ತೆ—
ಮರಿಕತ್ತೆಯೆನಲೇಕೆ? ಬಹುವರುಷ ಕಳೆದಿರಲು
ಮರಿಯೆಂಬ ಮರಿಯಾದೆ ಉಳಿಯುವುದೆ?—ಆ ಕತ್ತೆ
ಸತ್ತು ಬಿದ್ದಿತು. ತನ್ನ ಗುರು ಹರಸಿಕೊಟ್ಟ ಧನ

ಇಂತಾಯಿತೇ ಎಂದು ಶಿಷ್ಯ ಚಿಂತೆಯೊಳಾಳ್ದು,
ಗುರು ತನಗೆ ಹರಸಿತ್ತ ಕತ್ತೆಯಾದುದರಿಂದ,
ರಾಜಮಾರ್ಗದ ಪಕ್ಕದಲೆ ಒಂದು ಹಳ್ಳವನು
ಅಗೆದು ಕತ್ತೆಯ ಬೀಳನದರೊಳಗೆ ಹುಗಿದಿಟ್ಟು
ಗೋರಿಯನು ಮಾಡಿದನು. ಬಳಿಯ ಊರಿಗೆ ಹೋಗಿ
ಭಿಕ್ಷೆ ಬೇಡುವುದು ಎಂದೆಣಿಸುತ್ತ, ಮತ್ತೊಮ್ಮೆ
ಗುರುಕೊಟ್ಟ ಕತ್ತೆಯನು ಬಿಟ್ಟುಹೋದರೆ ಎಂತೊ
ಎಂದು ಚಿಂತಿಸುತ, ತುಸಹೊತ್ತು ಅಲ್ಲಿಯೆ ಕುಳಿತು
ಕೈ ಸುಮ್ಮನಿರದೆ ಗೋರಿಯ ಎರಡು ಪಕ್ಕದಲಿ
ಜಗತಿಯನು ಹಸನು ಮಾಡಿದನು. ಅಂತೆಯೆ ಅದನು
ನೋಡುತಿರೆ ಅವನ ಮನಸಿಗೆ, "ಎಲಾ ಈ ಗೋರಿ
ನಮ್ಮ ಗುರು ಅಲ್ಲಿ ಪೂಜಿಸುವ ಗೋರಿಯ ತೆರನೆ
ಕಾಣುತಿದೆ ; ನಮ್ಮ ಹಿರಿ ಗುರುಗಳ ಸಮಾಧಿ ಇದು
ಎಂದು ನಾ ಕುಳಿತು ಪೂಜಿಸುತಿರಲು ಜನ ಬಂದು
ಇದಕುರಿತು ನಡೆದುಕೊಳ್ಳರೆ ? ಇಲ್ಲಿ ಹೂತಿಹುದು
ಬರಿದೊಂದು ಕತ್ತೆ ಎಂಬುದ ಒಬ್ಬ ನಾನರಿವೆ;
ಬೇರೆಯಾರೂ ಕಾಣರಲ್ಲ ! " ಎನಿಸಿತು. ಅಂತೆ
ಯೋಚಿಸುತ ಅವನು ಗೋರಿಯ ಸುತ್ತ ಭೂಮಿಯನು
ಅಂದಗೆಯ್ದನು. ಸುತ್ತನೋಡಿ ಒಳ್ಳೆಯದೊಂದು
ಹೊಂಗೆ ಮರವನು ಕಂಡು ನಾಲ್ಕು ಕೊಂಬನು ಮುರಿದು
ಆ ಸಮಾಧಿಯ ನಾಲ್ಕು ಮೂಲೆಯಲಿ ನಿಲ್ಲಿಸುತ
ಸಣ್ಣ ಚಪ್ಪರ ಒಂದ ಮಾಡಿದನು.

ಅಷ್ಟರಲಿ
ಬಳಿಯ ಹಳ್ಳಿಯ ಒಬ್ಬ ಹಿರಿಯ ಆ ದಾರಿಯಲಿ
ನಡೆದುಬಂದವನು, ಆ ಗೋರಿ, ಗೋರಿಯ ಮೇಲೆ
ನಿಂತ ಹಂದರ, ಅದರ ಬಳಿ ಕುಳಿತ ಸಾಧು, ಇದ
ನೋಡಿ ಕೈಮುಗಿದು ನಿಂತನು. ಸಾಧು ಹರಸಿದನು.

ಆತನಂತೆಯೆ ಬಳಿಗೆ ಸಾರಿ, ಏನೀಮಹಿಮೆ,
ಎಂದು ಕೇಳಿದನು. "ಮರೆಯನು ಅರಿಯೆ ತರವಹುದು.
ನುಡಿಯೆ ತರವೆ? ಬಲ್ಲ ತಮಗೆ ಇದು ತಿಳಿದೆ ಇದೆ"
ಎಂದು ನುಡಿದನು ಸಮಾಧಿಯಸಾಧು. ಊರಾತ
"ತಪ್ಪಾಯ್ತು, ಸಾಧುಗಳು ನನ್ನ ಮನ್ನಿಸಬೇಕು"
ಎಂದು ಬೇಡಿದನು. ಸಾಧುಗಳು "ತಪ್ಪೇತರದು?
ಕೇಳುವುದು ಸಹಜ. ಕೇಳಿದ ಜನಕೆ ಇಂತಪ್ಪ
ಪೂರ್ವದಾಚಾರಗಳ ನೆನಸುವುದು, ಕಲಿಸುವುದು,
ನಮ್ಮ ಕರ್ತವ್ಯ" ಎಂದರು. ಊರ ಹಿರಿಯಾತ
"ಪೂರ್ವದ ಪರಂಪರೆಯ ನೀತಿ ರೀತಿಯ ಹಳಿದು
ಕಳೆವ ಈ ಕಾಲದಲಿ ತಮ್ಮಂಥ ಸಾಧುಗಳು
ಈ ಪರಿ ಅನುಗ್ರಹಿಸದಿರೆ ಇನ್ನು ಗತಿಯೇನು?
ಕ್ಷೇತ್ರಮೂಲವ ಕೇಳುವರು ಮಾತ್ರ ಮೂಲವನು
ಕೇಳದುಳಿವರೆ? ಮಹಿಮೆ ಅರಿಯಬಪ್ಪುದು ಹೊರತು
ನುಡಿಯಬಪ್ಪುದೆ? ಎಂತ ಮಾತ ತಿಳಿಹೇಳಿದಿರಿ!
ಗುರುವಿಗೆ ನಮೋ? ಎಂದು ಸಾಧುಗಳ ಪಾದವನು
ಮುಟ್ಟಿ ಕಣ್ಣಿಗೆ ಒತ್ತಿಕೊಂಡನು. "ಮಹಾಸತ್ವ
ಇವರಿಗೆ ಪ್ರಸನ್ನನಾಗಿರು" ಎಂದು ಸಾಧುಗಳು
ಹರಸಿ ಪ್ರಾರ್ಥನೆಯ ಗೆಯ್ದರು. ಊರಹಿರಿಯಾತ
ಕ್ಷಣಬಿಟ್ಟು "ಗುರುಗಳೇ, ಇಲ್ಲಿ ಆರಾಧನೆಗೆ
ಏನು ಹವಣಿಕೆ" ಎಂದು ಕೇಳಿದನು. ಸಾಧುಗಳು
"ಎಲ್ಲವನು ನಡೆಸುತಿಹ ದೈವ ಅದ ಮರೆಯುವುದೆ?
ಆ ಚಿಂತೆ ನಮಗಿಲ್ಲ" ಎಂದು ನುಡಿದರು. ಆಗ
ಊರಿಂದ ಇವರೆಡೆಗೆ ಹರಕು ಬಟ್ಟೆಯ ಒಬ್ಬ
ಜೀತದವನೈತಂದ. ಹಿರಿಯಾತ ಜೀತವನು
ಕರೆದು, "ಎಲ ಬಾ ಇಲ್ಲಿ, ಬೇಗ ಊರಿಗೆ ಹೋಗಿ
ನಮ್ಮ ಮನೆಯಲಿ ಹೇಳು, ಸಾಧುಗಳು ಬಂದಿಹರು,

ಇಲ್ಲಿ ಮಧ್ಯಾಹ್ನ ನೈವೇದ್ಯ ಒದಗಿಸಬೇಕು"
ಎಂದು ಕೂಗಿದನು. ಆಯಿತು, ಎನುತ ಆ ಜೀತ
ಊರತ್ತ ಸಾರಿದನು. ಹಿರಿಯಾತ ಅಲ್ಲಿಯೇ
ಸಾಧುಗಳ ಜೊತೆಯಲ್ಲಿ ಈ ಮಾತು ಆ ಮಾತು
ಆಡುತ್ತ ಹೊತ್ತ ಕಳೆದನು. ಎರಡು ಗಳಿಗೆಯಲಿ
ಹೊಲಕೆ, ಗದ್ದೆಗೆ, ನೀರು ನಡಿಗೆ ಹೋಗುವುಂದಿ
ಇವರಿರುವ ತಾಣಕ್ಕೈತಂದು ಇವರಾಡುತಿಹ
ಒಂದೆರಡು ಮಾತ ಕೇಳಿದರು. ಅದರಲಿ ಕೆಲರು
ಅಲ್ಲೆ ನಿಂತರು ; ಇನ್ನು ಕೆಲರು ನಡೆದರು ಮುಂದೆ.

ಇಂತುಕಳೆಯಿತು ಅಂದುಮುಂಜಾನೆ. ನಡುಹಗಲು
ಹಿರಿಯಾತ ಊರೊಳಗೆ ಹೋಗಿ ಮಕ್ಕಳ ಜೊತೆಗೆ
ಪೂಜೆಯುಪಕರಣಗಳ ಕಳುಹಿ ನೈವೇದ್ಯವನು
ತಾನೆ ಮಡಿಯಲಿ ಹೊತ್ತು ತಂದು ಸಾಧುಗಳ ಬಳಿ
ಎಲ್ಲವನು ಇರಿಸಿದನು. ಸಾಧುಗಳು ಆಮೊದಲೆ
ಸ್ನಾನವನು ಮುಗಿಸಿ ಮಡಿಯುಟ್ಟು ಬಂದಿದ್ದವರು
ಆ ಸಮಾಧಿಯ ಬಳಿಯ ನೆಲವನು ಪರಿಷ್ಕರಿಸಿ
ನೀರ ಚಿಮುಕಿಸಿ ಶುದ್ಧಮಾಡಿ ಹಿರಿಯನು ತಂದ
ಪೂಜೆಯುಪಕರಣವನು ಹರಡಿ "ಓಂ ಓಂ ನಮೋ
ಓಮೋಮ್ನಮೋಮಹಾಸತ್ತ ಓಮೋಮ್ನಮೋ
ಓಮೋಮ್ಮಹಾಸತ್ತ ಓಮ್ಮಹಾಸತ್ತ ಓಂ
ಓಮೋಮ್ಮಹಾಸತ್ತ ಓಮೋಮ್ಮಹಾಸತ್ತ
ಓಂ ಮಹಾ ಓಂ ಸತ್ತ ಓಂ ಸತ್ತ ಓಂ ಮಹಾ"
ಎಂದು ಮೊದಲಾಗಿ ಮಂತ್ರದರೀತಿ ಉಚ್ಚರಿಸಿ
ಪೂಜೆಯನು ನಡೆಸಿ ನೈವೇದ್ಯವನು ಮುಂದಿಟ್ಟು
ಕೈಮುಗಿದು ಕಣ್ಮುಚ್ಚಿ ಎರಡು ಚಣ ಅಂತಿದ್ದು
ಕಣ್ತೆರದು "ಪೂಜೆ ನಡೆಸಿದ ಮನೆಗೆ ಒಳಿತಕ್ಕೆ"

ಎಂದು ಹರಸಿದರು. ಹಿರಿಯಾತ ಮಕ್ಕಳನೆಲ್ಲ
ಕರೆದು "ಬನ್ನಿರಿ, ಸಮಾಧಿಗೆ ಎರಗಿ, ಗುರುಗಳಿಗೆ
ಎರಗಿ" ಎಂದವರನೆರಗಿಸಿ ತಾನು ಅವರಂತೆ
ಎರಗಿ ಎದ್ದನು. ಸಾಧುಗಳು, ಎಲ್ಲ ಕುಳ್ಳಿರಿ,
ಎಂದು ಸನ್ನೆಯ ಮಾಡಿ ಎಲ್ಲರೂ ಕುಳ್ಳಿರಲು
ನೈವೇದ್ಯದಲಿ ಬಹಳವನು ಅಲ್ಲೆ ಮಕ್ಕಳಿಗೆ
ಹಿರಿಯನಿಗೆ ಹಂಚಿ ಎಲ್ಲಿಯೊ ಸ್ವಲ್ಪವನು ತನಗೆ
ಉಳಿಸಿಕೊಂಡರು; ಅದನು ಎಲ್ಲರೆದುರಲಿ ತಿಂದು
ಕುಳಿತುಕೊಂಡರು. ಮಂತ್ರ ಉಚ್ಚರಿಸಿ ನೈವೇದ್ಯ
ಒಪ್ಪಿಸುವ ಹೊತ್ತಿನಲಿ ಸಾಧುಗಳ ಮನವೇನೊ
ಹುಳ್ಳ ಹುಳ್ಳಗೆ. ಆದರಾವೇಳೆಯಲಿ ಇನ್ನು
ಏನತಾನೇಮಾಡುವುದು? ಪೂಜೆಮುಗಿದಂದು
ಮಕ್ಕಳು ಸಮಾಧಿಗೆರಗಿದವೇಳೆ ಸಾಧುಗಳು,
ಎಲಎಲಾ ಏನು ಇದು, ಅಲ್ಲಿ ಗುರು ಪೂಜಿಸಿದ
ಆ ಸಮಾಧಿಗೆ ಸಲ್ಲುತಿಹ ಎಲ್ಲ ಮರ್ಯಾದೆ
ಇಲ್ಲಿ ಕತ್ತೆಯು ಬೀಳಿಗಾಗುತಿದೆ, ಎಂತಪ್ಪ
ಅಪಚಾರವಾಯಿತಿದು, ಎಂದೆಣಿಸಿಕೊಂಡರು.
ಹಿರಿಯನೆರಗಿದನೊ ಮನ ಮತ್ತಿಷ್ಟು ಅಳುಕಿತು.
ಕೊನೆಯಲಿ ಪ್ರಸಾದವನು ಹಂಚುತ್ತ ಇವರ ಮುಖ
ನಿಜದಿ ಬೆವತಿತು. ಕೊನೆಗೆ ತಾವೇ ಪ್ರಸಾದವನು
ಉಣುವ ಹೊತ್ತಲಿ ಮನದ ಪರಿಯು ಬಣ್ಣಿಸಬೇಡ.
ಹಿರಿಯಾತ ಸಾಧುಗಳ ಕುರಿತು "ನೈವೇದ್ಯವನು
ಉಳಿಸಿಕೊಳ್ಳದೆ ಮಕ್ಕಳಿಗೆ ಹಂಚಿಬಿಟ್ಟಿರಲ.
ಮನೆಗೆ ಬರಬೇಕು, ಭೋಜನ ಮಾಡಿ ಬರಬಹುದು"
ಎಂದು ಹೇಳಿದನು. ಸಾಧುಗಳು "ಈ ದಿನ ಇಲ್ಲಿ
ಪೂಜೆ ಮೊದಲಾಗಿಹುದು; ಇಂದೆಮಗೆ ಆಹಾರ
ಈಗ ಸಿಲುಕಿದುದೆ ಸಾಕು; ಸಂಜೆಯಲಿ ದೀಪ

ಹಚ್ಚಿ ಆರತಿಮಾಡಿ ಅಲ್ಪೋಪಹಾರವನು
ಕೊಂಡು ತೆಪ್ಪನೆ ಮಲಗುವೆವು" ಎಂದು ಹೇಳಿದರು.
ಊರ ಹಿರಿಯಾತ ಸಾಧುಗಳ ಸಂಯಮ ಎನಿತು
ಎಂದು ಅಚ್ಚರಿಗೊಂಡು "ಒಳಿತು, ಸಂಜೆಗೆ ನಾನು
ದೀಪ ಆರತಿಗೆ ಅಲ್ಪೋಪಹಾರಕೆ ಎಲ್ಲ
ಸಜ್ಜುಮಾಡುವೆನು" ಎನ್ನುತ ಮನೆಗೆ ಮರಳಿದನು.

ಅವನು ಮಕ್ಕಳ ಜೊತೆಗೆ ಮನೆಗೆ ಹೊರಟರೆ ಇತ್ತ
ಸಾಧುಗಳ ಮನ ಎನಿಸೊ ಹೊತ್ತು ಒಳಗೇ ಕುದಿದು
ಕದಡಿ ಬಗ್ಗಡವಾಯ್ತು. "ಬಹುಮೋಸವಾಯಿತೇ !
ಬರಿಮೋಸ, ಬರಿವೇಷ. ಈ ಜನರ ಯಾವುದಕೆ
ಎರಗಿಸಿದೆ!" ಎಂದು ಅವರೊಳಗೆ ತಳಮಳಿಸಿದರು.
ಅಂತೆ ಚಿಂತಿಸುತ ಕುಳಿತಿರಲು ಅಂತರ್ಯದಲಿ
ಅವರ ಮನಸಿಗೆ ಸಮಾಧಾನವನು ತಹದೊಂದು
ಹೊಂತು ಮೊಗದೋರಿ ಬೆಳೆಯಿತು. ಎರಗಿದರೆ ಏನು ?
ಯಾವುದನು ಕುರಿತು ಎರಗಿದರೊ ಆ ಗುರಿಯೆಡೆಗೆ
ಆ ನಮನ ಸಾಗುವುದು ; ಅದು ಫಲವನೀಡುವುದು.
ಯಾವ ಊರಿಗೊ ಹೋಹ ಪತ್ರವನು ಅಂಚೆಯಲಿ
ಎಂಥದೋ ಪೆಟ್ಟಿಗೆಗೆ ಹಾಕರೆ? ಆ ಪತ್ರ
ಅಲ್ಲಿಯೇ ನಿಲ್ಲುವುದೆ? ಎರಗಲೆಳಸಿದ ಮಂದಿ
ಎಲ್ಲಿ ಎರಗಿದರೇನು? ಅವರ ಮನ ಗುರಿಯನೇ
ಮುಟ್ಟುವುದು. ಇನ್ನುಳಿದುದೇನು? ತನ್ನದು ಮಾತು.
ಗುರುವಿತ್ತ ಕತ್ತೆ ಶಿಷ್ಯನಿಗೆ ಪೂಜ್ಯವೆ ಸರಿ.
ಗುರುವಿನೊಲುಮೆಯ ಕುರುಹು ಯಾವುದಾದೊಡೆ ಏನು ?
ಅದನು ಪೂಜಿಸಬೇಕು. ಅದುವೆ ಗುರುವಿನ ಒಲುಮೆ ;
ಅದುವೆ ಗುರು, ಗುರುಮೂರ್ತಿ. ಇದಕೆ ಚಿಂತಿಸಲೇಕೆ ?
ಇಂತೆಂದು ಸಾಧುಗಳು ತತ್ವವನು ಮರಮರಳಿ
ಮನಸಿನಲಿ ತಿರಿವಿಹಾಕುತ ಸಂಜೆಯಹ ಮುನ್ನ

ನೆಮ್ಮದಿಯ ತಡಿಯ ಸೇರಿದರು. ಸಂಜೆಗೆ ದೀಪ
ನೈವೇದ್ಯ ಆರತಿಗಳೈತರಲು ಸ್ವಲ್ಪವೂ
ಹುಳ್ಳ ಹುಳ್ಳಗೆ ಇಲ್ಲದೆಲ್ಲವನು ಕೈಕೊಂಡು
ಆರತಿಯ ಮಾಡಿ ನೈವೇದ್ಯವನು ಒಪ್ಪಿಸಿ
ಸ್ವಲ್ಪವನು ಎಲ್ಲರಿಗೆ ಕೊಟ್ಟು ಬಹಳವ ತಾವು
ಉಳಿಸಿಕೊಂಡರು; ಇರುಳು ಅಲ್ಲಿಯೇ ತಂಗಿದರು.

ಊರ ಹಿರಿಯನು ನಡೆದ ರೀತಿಯನು ನೋಡಿ ಜನ
ಮಾರನೆಯ ಮೂರನೆಯ ನಾಲ್ಕನೆಯ ದಿನ ಅಲ್ಲಿ
ಪೂಜೆ ನಡೆವಂತೆ ಏರ್ಪಡಿಸಿದರು. ಕೊನೆಯಾಗಿ
ಸಾಧುಗಳು ಅಲ್ಲಿಯೇ ನಿಲುವಂತೆ ನಿರ್ಧರಿಸಿ,
ದಿನದ ಪೂಜೆಗೆ ತಮ್ಮ ತಮ್ಮ ಹಂಚಿಕೆಯಿಂದ
ನೆರವಾಗಿ ನಿಂತುಕೊಂಡರು. ಊರ ಸನಿಯದಲಿ
ಮಹಿಮೆ ಕಂಡರೆ ಅದನು ಬೇಡವೆಂಬರು ಉಂಟೆ?
ಅಂತೆ ಈ ಊರವರು ನೆರೆಯ ಊರಿನ ಜನಕೆ
ತಮ್ಮೂರಬಳಿ ಕಂಡ ಮಹಿಮೆಯನು ಬಣ್ಣಿಸುತ,
ಅವರಿವರು ತಾವು ಪೂಜೆಗಳ ನಡೆಸುವೆವೆಂದು
ಮುಂದೆ ಬಂದರು. ಸುತ್ತ ಹತ್ತಾರು ಊರವರು
ಬೇಗದಲೆ ಈ ಸ್ಥಲಕೆ ಭಕ್ತ ಮಂಡಲವಾಗಿ
ಕ್ಷೇತ್ರ ಹಿರಿ ಹಿರಿದಾಗಿ ಬೆಳೆಯುತಿದ್ದಿತು. ಸೇವೆ
ಹೆಚ್ಚಿದಂತೆಲ್ಲ ಮಹಿಮೆಯ ಮಾತು ಬೆಳೆದಿಹುದು.
ಕ್ಷೇತ್ರ ಮೂಲವನು ಕಾಣದೆ, ಅದನು ಕೇಳುವುದು
ಸರಿಯಲ್ಲವೆಂದು ತಿಳಿದಿದ್ದ ಭಕ್ತರ ಮನಸು
ಕ್ಷೇತ್ರ ಮೊದಲಾದ ಪರಿಯನು ತಾನೆ ಭಾವಿಸಿತು.
ಸಾಧುಗಳು ಬೇರೆ ತಾಣದೊಳಿರಲು, ಒಂದು ದಿನ
ಸ್ವಪ್ನದಲಿ ಅವರ ಗುರುವಿನ ಗುರುಗಳೈತಂದು,
"ಇಂಥ ಊರಿನ ಬಳಿಗೆ ಬಾ, ನಾವು ಬಾಲ್ಯದಲಿ
ತಪಮಾಡಿದೆಡೆಯ ತೋರುವೆವು, ಆ ಕ್ಷೇತ್ರವನು

ನೀನು ಮೆರೆಯಿಸಬೇಕು, ತಾಣ ಇದುವೇ ಎಂದು
ಒಂದು ದಿವ್ಯ ಜ್ಯೋತಿಯಿಂದ ನೀ ಗುರುತಿಸುವೆ,
ಅಲ್ಲಿ ನಮ್ಮದು ಒಂದು ಲಾಂಛನವನೂ ಕಾಂಬೆ,
ಆದ ಅಲ್ಲಿ ಮಣ್ಣಿನಲಿ, ದೇಹದಲಿ ಆತ್ಮವನು
ಮರೆಮಾಡುವಂತೆ, ಮರೆಮಾಡಿ ಬಳಿಯಲಿ ನಿಲ್ಲು,
ಇನ್ನೆಲ್ಲವನು ನಾವು ನೋಡಿಕೊಂಬೆವು," ಎಂದು
ಆಜ್ಞೆ ಮಾಡಿದರಂತೆ ಸಾಧುಗಳು ಎಚ್ಚತ್ತು
ಸ್ವಪ್ನದಲಿ ಕಂಡ ಪರಿ ಹೊರಟುಬರೆ ಈ ಸ್ಥಳಕೆ
ಸೇರಿ ನಿಂತರು. ಇಲ್ಲಿ ಎಲ್ಲ ಅಂತೆಯೆ ನಡೆದು
ಅವರು ನೆಲಸಿದರಂತೆ. ಎಂಬ ಕತೆ ಮೊದಲಾಗಿ
ಕ್ಷೇತ್ರ ಮಾಹಾತ್ಮ್ಯವಾಯಿತು. ಯಾರು ಹೇಳಿದರು
ಯಾರು ಬೆಳಸಿದರು, ಇದ ಅರಿವೆನೆನಲು ಅಸಾಧ್ಯ.
ನಡೆದುಕೊಳ್ಳುವ ಮಂದಿ ಹೆಚ್ಚಿ ಪೂಜೆಯು ಕೆಲಸ
ಬಹಳವಾಗಿರಲು ಪರಿಚಾರಿಕೆಗೆ ಶಿಷ್ಯ ಜನ
ಬಂದು ಸೇರಿತು. ಸಾಧುಗಳಿಗೆ ವಾಸಕೆ ಒಂದು
ಮಂಟಪವ ಕಟ್ಟಿಸಿತು ಭಕ್ತಜನ. ಪಕ್ಕದಲಿ
ಶಿಷ್ಯರಿಗೆ ಎರಡು ಮಂಟಪ. ಅಂತೆ ಕೆಲದಿನಕೆ
ಬಂದು ಹೋಗುವ ಮಂದಿಗೆಂದೆರಡು ಮಂಟಪ.
ಕ್ಷೇತ್ರ ಬೆಳೆಯಿತು ಇಂತು.

ಆರುವರ್ಷದ ದಿವಸ

ಇಂತು ನಡೆದಿರೆ ಸುತ್ತ ಮೂವತ್ತು ಹರಿದಾರಿ
ಸಾರಿತೀಸ್ಥಲದ ಕೀರ್ತಿ. ಪೂರ್ವದಲಿ ನಮ್ಮ
ಸಾಧುಗಳು ಸೇವೆ ಮಾಡುತಲಿದ್ದ ತಾಣದಲಿ
ಇದ್ದ ಆ ನಮ್ಮ ಹಿರಿಯರ್ಚಕನ ಕಿವಿಯನೂ
ಮುಟ್ಟಿತದು. ಅಲ್ಲಿ ಆ ಗ್ರಾಮದಲಿ ಮೊದಲಾದ
ದಾರಿದ್ರ್ಯ ಬರ ಮುಗಿದರೂ ಬಿಡದೆ ನೆಲಸಿತ್ತು.
ಏತಕೆಂಬುದನು ಅರ್ಚಕ ತೀರ ಕಾಣನು.

ಜನ ಮೊದಲಿನಂತೆ ಬರಲಿಲ್ಲ ಎಂಬಷ್ಟು ನಿಜ.
ಒಂದೆರಡು ವರುಷ ಕಳೆದಿರಲು ಯಾರೋ ಒಮ್ಮೆ,
ಇಲ್ಲಿಂದ ಆರು ಗಾವುದ ದೂರದಲಿ ಒಂದು
ಮಹಿಮೆಯೇರ್ಪಟ್ಟು ದಿವ್ಯ ಜ್ಯೋತಿ ಮೂಡಿಹುದು,
ನಾಡೆಲ್ಲ ಅತ್ತ ನಡೆದಿದೆ, ಎಂದು ಹೇಳಿದರು.
ಅರ್ಚಕ ಮಹಾಶಯನು, ಇಲ್ಲಿದ್ದ ಅನ್ನ ಋಣ
ಮುಗಿಯಿತಿರಬೇಕು, ಬೇರೆಡೆಯ ನೋಡುವ, ಎಂದು
ಅಲ್ಲಿಂದ ಹೊರಟನಪ್ಪುದು. ಏಳುದಿನ ದಾರಿ
ನಡೆದು ಹೊಸ ನಮ್ಮ ಈ ಕ್ಷೇತ್ರದೆಡೆ ಬಂದಿಹನು.
ಅದ ಕುರಿತು ನಡೆಯುತಿಹ ಬಹುಜನರ ಮಾತುಕತೆ
ಇವನ ಕಿವಿಗೇನೊ ಬಿಸವಂದವನು ಮಾಡಿತು.
ಮಕ್ಕಳಿಲ್ಲದ ತನಗೆ ಮಕ್ಕಳಾದರು ಎಂದ
ಒಬ್ಬ. ಎದವಿದ್ದ ಹೆಣ್ಣಿಗೆ ಒಬ್ಬ ವರ ಸಿಕ್ಕಿ
ನಾನು ಬದುಕಿದೆನೆಂದನೊಬ್ಬ. ಕಟ್ಟಲೆಯಲ್ಲಿ
ಇಲ್ಲಿ ಹರಕೆಯ ಸಲ್ಲಿಸಿದೆ, ಸಂದಿತಿಷ್ಟಾರ್ಥ,
ಎಂದನಿನ್ನೊಬ್ಬ. ವೈದ್ಯರು ಸೋತು ಕೈಬಿಟ್ಟ
ಬಾವು ಆತಂಕ ಪರಿಣಾಮ ಶೂಲೆಗಳೆಲ್ಲ
ಇಲ್ಲಿ ಬೇಡಿದ ದಿನವೆ ವಾಸಿ ಎಂದರು ಹಲರು.
ಅರ್ಚಕನ ಮನಕೆ ಈ ಮಾತಿಂದ ನೆನಪಾಯ್ತು
ತಾ ಪೂಜೆ ಮಾಡುತಿದ್ದೆಡೆ ಇಂತ ಮಹಿಮೆಗಳು
ನಡೆದುವೆಂದುದು ಅಂದು ಮಂದಿ. ಈ ದಿನ ಇಲ್ಲಿ
ಅದುವೆ ಮಹಿಮೆಯ ಸಾಲು ನಡೆಯುತಿರುವುದೆ ಎಂದು
ಮನದೊಳಚ್ಚರಿಮೂಡಿ ಮುಂದೆ ನಡೆದನು ಆತ.
ಇಂತು ನಡೆತರುತ, ಈಸ್ಥಳದ ಪರಿಯನು ಇನಿತು
ನೋಡಿ ಹೋದರೆ ಎಂತು, ಎಂದುದಾತನ ಮನಸು.
ಹೋಗಿ ನೋಡುವ ಎಂದೆ ನಿಶ್ಚಯಿಸಿ ಅರ್ಚಕನು
ನೂತನ ಕ್ಷೇತ್ರವನು ಬಳಿಸಾರಿ ಬರುತಿಹನು.

ಆಗ ಮಧ್ಯಾಹ್ನ; ಪೂಜೆಯ ಹೊತ್ತು. ಆ ದಿವಸ ಹೆಚ್ಚಿನದು ಏನೊ ಆರಾಧನೆಯ ಸಂಭ್ರಮ. ಸಾಧುಗಳು ಕಣ್ಮುಚ್ಚಿ ಕೈಮುಗಿದು ಕಣ್ತೆರೆದು ಭಕ್ತವೃಂದದ ಮಧ್ಯೆ ನಿಂದಿಹರು. ಶಿಷ್ಯರಲಿ ಒಬ್ಬಾತ ಆರತಿಯ ಹಿಡಿದೆತ್ತಿ ಆಡಿಸುತ, ಓಮ್ಮಹಾಸತ್ತ, ಓಮೋಮ್ಮಹಾಸತ್ತ ಓಂ, ಓಂ ಮಹಾ ಓಂ ಸತ್ತ ಓಂ ಸತ್ತ ಓಂ ಮಹಾ ಎಂದು ಮಂತ್ರವನು ಹೇಳುತ, ಪೂಜೆಗೈದಿಹನು. ಮತ್ತೊಬ್ಬ ಶಿಷ್ಯ ಶಂಖವನೂದುತಿರೆ ಒಬ್ಬ ಝಾಂಗಟೆಯ ಬಡಿದಿಹನು. ಈ ಮಧ್ಯದಲಿ ನಮ್ಮ ಅರ್ಚಕನು ಬಂದು ಭಕ್ತರ ಮಧ್ಯೆ ಸೇರಿದನು. ಮುಂಗಡೆಗೆ ನಿಂತಿದ್ದ ಸಾಧುಗಳು ಆ ಕ್ಷಣವೆ ಇವನ ನೋಡಿದರು; ಆ ಕ್ಷಣದಲೇ ತನ್ನಗುರು ಎಂಬುದನು ಕಂಡುಕೊಂಡರು; ಓಡಿ ಬಂದವರು ಬಾಗಿ ಈತನಿಗೆ ನಮಿಸಿದರು. ಅರ್ಚಕಹಿರಿಯ ವಿಸ್ಮಯದೊಳಿವನ ನೋಡಿದನು. ಆ ಹಲವರುಷ ಚೆನ್ನಾಗಿ ಉಂಡು ಒಳ್ಳೆಯ ವಸ್ತ್ರವನು ಉಟ್ಟು ಸಾಧುಗಳು ಗುರುವಿಗೇ ಗುರುತು ಸಿಕ್ಕದ ರೀತಿ ಮಾರ್ಪಟ್ಟಿರಪ್ಪುದು. ನಮಿಸಿ ಎದುರಿಗೆ ನಿಂತು ಸಾಧುಗಳು ತಮ್ಮ ಗುರುವನು ಕುರಿತು, "ಮರೆತಿರೇ? ನಾನು," ಎಂದರು. ಅರ್ಚಕನಿಗೆ ಆ ದನಿ ಕೇಳಿ ಗುರುತು ಹತ್ತಿತು. ಓಹೊ ನೀನೆ ಎನ್ನುತ ಅವನು ಸೌಖ್ಯವಾಗಿರುವೆಯಾ ಎಂದು ಕೇಳಿದನವರ. (ಏಕವಚನ ಪ್ರಯೋಗದಿ ಗುರುವ ಬಣ್ಣಿಸುತ ಶಿಷ್ಯನಿಗೆ ಬಹು ವಚನವೇ ಎಂದು ಕೇಳುವಿರ? ಶಿಷ್ಯನನು ಕೇಳುವರು ಬಹುಮಂದಿ; ಆತನಿಗೆ ಬಹುವಚನ ಸಲ್ಲುವುದು. ಗುರುವಾದ ಅರ್ಚಕನ

ಕೇಳುವರು ಒಬ್ಬರಿರಲಿಲ್ಲ. ನ್ಯಾಯವ ನೋಡೆ
ಶೂನ್ಯ ವಚನವ ಬಳಸಬೇಕು ಅವನನು ಕುರಿತು.
ಆದರೇತಕೊ ಕಾಣೆ, ವ್ಯಾಕರಣ ಶಾಸ್ತ್ರದಲಿ
ಏಕ ದ್ವಿ ಬಹು ಎಂಬ ವಚನಗಳ ಮಧ್ಯದಲಿ
ಶಾಸ್ತ್ರಕಾರರು ಶೂನ್ಯವಚನವನೆ ಹೇಳಿಲ್ಲ.
ಅದರಿಂದ ಅವನ ಕುರಿತೇಕವಚನದಿ ನಾನು
ನುಡಿದಿಹೆನು. ಅದೆ ಹೆಚ್ಚು.) ಭಕ್ತರಲಿ ಒಬ್ಬಾತ
ಸಾಧುಗಳು ಹೊಸತಾಗಿ ಬಂದವನ ಪದಕೆರಗಿ
ಇನಿತು ಮರ್ಯಾದೆ ಮಾಡಿರೆ, ಎಲಾ! ಗುರುಗಳಿಗೆ
ಗುರುವಾದ ಈತನಿನ್ನೆಂತ ಮಹಿಮಾವಂತ,
ಎಂದು ಬಂದವನೆ ಅರ್ಚಕನ ಪದಕೆರಗಿದನು.
ಅವನ ಕಂಡುಳಿದವರು ಅವನಂತೆ ಮುಂದರಿದು
ಅರ್ಚಕನಿಗಿನ್ನೆಲ್ಲ ಮರ್ಯಾದೆ ಮಾಡಿದರು.
ಆಮೇಲೆ ಪೂಜೆ ಮುಗಿದಿರೆ ಎಲ್ಲರೂ ಕುಳಿತು
ಪೂಜಾಪ್ರಸಾದಗಳ ಸ್ವೀಕರಿಸಿದರು. ಮೊದಲು
ಅರ್ಚಕರು, ಆಮೇಲೆ ಸಾಧುಗಳು, ಆಮತ್ತೆ
ಉಳಿದವರು. ಇಂತು ಪಂಕ್ತಿಯಲಿ ಚರುಪನು ಒಬ್ಬ
ಶಿಷ್ಯ ಹಂಚಿದನು. ಇದು ನಡೆಯುತಿರೆ ಸಾಧುಗಳು
ಪ್ರಮುಖ ಭಕ್ತರಿಗೆ, ಈ ಬಂದವರು ತಮ್ಮ ಗುರು,
ಇವರನುಗ್ರಹದಿಂದಲೇ ಇಲ್ಲಿ ತನ್ನಂಥ
ಯಃಕಶ್ಚಿತಾದವನು ಜಗದ ಕಣ್ಣೆದುರಿನಲಿ
ಏನೋ ಪದಾರ್ಥವಾದುದು, ಎಂದು ಹೊಗಳಿದರು.

ಸೇವೆ ಮುಗಿದಿರೆ ಎಲ್ಲ ಭಕ್ತರೂ ಪೊರಮಟ್ಟು
ಮಠದ ಜನ ಮಾತ್ರ ಉಳಿದರು. ಊಟ ಮುಗಿಯಿತು.
ವಿಶ್ರಾಂತಿ ವೇಳೆಯಲಿ ಗುರುವಾದ ಅರ್ಚಕನು
ಶಿಷ್ಯನಿಗೆ, "ಅಯ್ಯ ನೀನಿಂತು ಅಧ್ವರ್ಯದಲಿ
ಬಾಳುವುದು ಬಹಳ ಸಂತೋಷ" ಎಂದನು. ಶಿಷ್ಯ

"ಗುರುಗಳೇ ನಾನೆಲ್ಲರೆದುರು ನುಡಿದಂತೆ ಇದು
ಎಲ್ಲವೂ ತಮ್ಮೆಡೆ ಅನುಗ್ರಹದ ಫಲ" ಎಂದ.
ಗುರು "ಬಹಳ ಸಂತೋಷ. ಕಿರಿಯರಿಂತಾಡುವುದೆ
ಚೆನ್ನಾದ ನಡವಳಿಕೆ. ನಿನ್ನ ಬೃಂದಾವನದ
ಹೆಸರು ಹತ್ತಾರು ಗಾವುದ ಹಬ್ಬಿ ಬೆಳೆದಿಹುದು.
ನಿಜವ ಹೇಳುವರೆ, ಇದರೊಂದು ಮಹಿಮೆಗೆ ಸೋತು
ನಮ್ಮೆಡೆಗೆ ಬರುತಿದ್ದ ಜನವೆಲ್ಲ ಇಲ್ಲಿಗೇ
ಬರಲು ತೊಡಗಿಹರು. ಇದು ಯಾರ ಬೃಂದಾವನ ?"
ಎಂದು ನುಡಿದನು. ಶಿಷ್ಯ ಸ್ವಲ್ಪ ಸಂಕೋಚದಲಿ
ಕೈಮುಗಿದು "ತಾವು ಪೂಜಿಸುತಿದ್ದ ಗದ್ದುಗೆಯ
ಉನ್ನತ ಮಹಾಮಹಿಮೆ ಎಲ್ಲಿ? ಈ ಸ್ಥಳವೆಲ್ಲಿ?
ಇದರ ಪರಿಯನು ತಮಗೆ ಬಿನ್ನವಿಸೆ ನನ್ನ ಮನ
ಹಿಂಜರಿಯುತಿದೆ. ಆದರೂ ಅರಿಕೆ ಮಾಡುವೆನು.
ತಪ್ಪುಮಾಡಿಹೆ ನಾನು. ಶಿಷ್ಯಾಭಿಮಾನದಲಿ
ಅದನು ಮಡಿಲಲಿ ಹಾಕಿಕೊಂಡು ಮನ್ನಿಸಬೇಕು."
ಎಂದು ಆಡಿದನು. ಹಿರಿಯರ್ಚಕನು "ಎಲ ಅಯ್ಯ
ಅಂತಪ್ಪ ತಪ್ಪೇನ ಮಾಡಬಲ್ಲೆಯೊ ನೀನು?
ಹೇಳು ಸಂಕೋಚವೇತಕೆ?" ಎಂದು ಉಸುರಿದನು.
ಶಿಷ್ಯ, "ಗುರುಗಳೆ, ತಾವು ಕೊಟ್ಟ ಆ ಕತ್ತೆಮರಿ
ಇಲ್ಲಿಗೈತಂದಹೊತ್ತಿಗೆ ಸತ್ತುಹೋಯಿತು.
ಏನು ಮಾಡುವುದು ತೋಚದೆ ಇಲ್ಲೆಹೂತೆನದ.
ಹೂತು ಗೋರಿಯುಗೆಯ್ದೆ. ಗೆಯ್ದ ಗೋರಿಯ ನೋಡಿ,
ಗುರುಗಳಾರಾಧಿಸುವ ಗದ್ದುಗೆಯ ತೆರನೆ ಇದೆ,
ಒಳಗಿಹುದನಾರುಬಲ್ಲರು, ಯಾರಗದ್ದುಗೆಯೊ,
ಪೂಜೆಮಾಡುವೆನೆಂದು ನಿಂತು ನೋಡುವ, ಎಂದು
ಮನಕೆ ತೋರಿತು. ಅಂತೆಗೆಯ್ದೆನು. ಏನೆನಲಿ?
ಬಂದೆ ಬಂದರು ಮಂದಿ; ನಂಬಿಯೇ ನಂಬಿದರು;

ಯಾವುದೊ ಮಹಾತ್ಮನದು ಬೃಂದಾವನ ಇದೆಂದು
ತಾವೆ ಕತೆ ಕಟ್ಟಿದರು ; ಎಲ್ಲವನು ನಡೆಸಿದರು.
ನಾನೇಕೆ ನಿಜನುಡಿದು ಅವರ ಭಕ್ತಿಯ ಕೆಡಿಸಿ
ಬಡಿಸಿದನ್ನವ ಬಿಟ್ಟು ಮಣ್ಣ ತಿನ್ನಲಿ ಎಂದು
ಸುಮ್ಮನಿದ್ದಿಹೆ ನಾನು. ತಪ್ಪ ಮನ್ನಿಸಬೇಕು"
ಎಂದು ಹಂಬಲಿಸಿ ನುಡಿದನು. ಅದಕೆ ಅರ್ಚಕನು
"ಯಾವುದನು ಮನ್ನಿಸೆನ್ನುವೆ ? ಇಲ್ಲಿ ತಪ್ಪೇನು ?
ಒಳಿತೆ ಆಯಿತು" ಎಂದು ಹೇಳಿದನು. ಶಿಷ್ಯನಿಗೆ
ಸ್ವಲ್ಪ ಅಚ್ಚರಿ : ಏನು, ಗುರು ಇಷ್ಟು ಸುಲಭದಲಿ
ತನ್ನಗೆಯ್ತವನೊಪ್ಪಿದರು, ಎಂದು. ಕ್ಷಣವುಳಿದು
"ತಾವು ಪೂಜಿಸುತಿದ್ದ ಉನ್ನತ ಮಹಾಮಹಿಮ
ಪೀಠವನು ಅಣಕಿಸುವ ತೆರ ಇಲ್ಲಿ ಕತ್ತೆಯನು
ಹುಗಿದು ಪೀಠವಗೆಯ್ದ ತಪ್ಪ ಮನ್ನಿಸಬೇಕು
ಎಂದು ಬೇಡುವೆನು" ಎಂದುಸುರಿದನು. ಆಗ ಗುರು
ಅವನ ನುಡಿ ಕೇಳಿ ತುಸನಕ್ಕು ನುಡಿದರು : "ಅಯ್ಯ :
ನಿಜವ ತಿಳಿ ; ಚಿಂತೆ ಬಿಡು ; ಆ ನಮ್ಮ ಪೀಠದಲಿ
ಮಹಿಮೆಯನು ನಡೆಯಿಸಿದ ಸತ್ವ ಬೇರೊಂದಲ್ಲ ;
ಈ ಕತ್ತೆಯನು ಹೆತ್ತ ತಾಯ್ ಕತ್ತೆ" ಎಂದನು.

* * *

ಹೋ ಎಂದು ಗೊಳ್ಳೆಂದು ಕೇಳುತಿದ್ದವರೆಲ್ಲ
ನಕ್ಕು ಸಾಕಾಗಿ ಸೋತರು. ಸ್ವಲ್ಪ ಹೊತ್ತಿನಲಿ
ಎಲ್ಲರೂ ಸುಮ್ಮನಾಗಲು, ಕತೆಗೆ ಟಿಪ್ಪಣಿಯ
ವೆಂಕಪ್ಪ ಹೇಳಿದರು : " ಕತೆ ಚೆನ್ನವಾಗಿಹುದು.
ಮತದ ಹೆಸರಲಿ ಮೋಸಮಾಡುವನು ಇನ್ನೆಲ್ಲ
ಮೋಸಮಾಡುವ ಜನರತೆರನೆ। ತನ್ನೊಳಗಿರುವ
ದೌರಾತ್ಮ್ಯವನು ಹೊರಗೆ ಸೂಸುವನು. ಇದರಿಂದ
ನಿಜವಾದ ಮತಕೆ ಕೊರೆಯಡಸದು. ನಿಜದಮತ

ನಿಜವೆ ಸರಿ. ಅದರಿಂದ ಜನ ಒಳ್ಳೆಯವರಾಗಿ
ಬಾಳುವುದೆ ನಿಜ. ಬಣ್ಣ ಹಚ್ಚಿ ಮಾಡಿದ ಚಿನ್ನ
ದಿಟವಾಗಿ ಚಿನ್ನವಹುದೇ? ಅಂತೆ ವೇಷದಲಿ
ಮತವೆಂದು ಕಾಣುವ ಬಿಭೀಷಿಕೆಯು ನಿಜವಾಗಿ
ಮತವೆನ್ನಬಾರದಲೆ. ಅದು ಬಿಭೀಷಿಕೆಯೆಂದು
ತೋರುವುದು ನಿಜವಾದ ಮತಕೆ ಬೆಲೆ ತಂದಂತೆ.
ಹಿರಿಯ ಉಪದೇಶಿ ಅಮೆರಿಕದ ಇಂಗರಸಾಲ
ನಿಜವಾದ ಮತಕೆ ಉಪಕಾರವನೆ ಮಾಡಿದರು.
ಅಂತೆಯೇ ಇಂದು ಡಾಕ್ಟರು ನಮಗೆ ಆ ಕತೆಯು
ಹೇಳಿ ನಿಜವಾಗಿ ಉಪಕಾರವನೆ ಮಾಡಿದರು.
ಕತೆಯೊರೆದ ಉಪದೇಶಿ ಒಬ್ಬ ನಾಸ್ತಿಕವಾದಿ,
ಕೇವಲ ವಿಚಾರವಿಶ್ವಾಸಿಗಳ ಗುಂಪಿನಲಿ
ಪ್ರಮುಖನಾಯಕ, ಬುದ್ಧಿಯಾವುದನು ಒಪ್ಪುವುದು
ಅದುವೆ ಸರಿ ಬುದ್ಧಿ ಒಪ್ಪದ ಯಾವುದೂ ತಪ್ಪು
ಎಂಬುದಾತನ ನಿಲುವು, ಎಂದು ಈ ಕತೆಯಲಿ
ಎಲ್ಲ ಮತವನು ಕುರಿತ ಹಳಿವ ನಾನೂಹಿಸೆನು.
ಮೋಸ ಬೇಡೆಂಬುದೇ ಉಪದೇಶಿಯುದ್ದೇಶ.
ಮತದ ಹೆಸರನು ಹೇಳಿ ಹಣಕಾಸುಗಳ ಪಡೆದು
ಬನ್ನಿ ಉದ್ಧಾರಮಾಡುವೆವು ಎಂಬವರೆಲ್ಲ
ಬಹುಭಾಗ ಜೀವನದ ಸಲುವಾಗಿ ಅಷ್ಟಿಷ್ಟು
ಮೋಸವನೆ ಮಾಡುವರು ಎಂದು ಆತನ ಅರಿವು.
ದೇವರೆಂಬುದನರಿತು ಅದರ ಆಶ್ರಯದಲ್ಲಿ
ನಾನು ಒಳ್ಳೆಯದ ಸಾಧಿಸಬೇಕು ಎಂಬವನು
ಮತವ ಮಾರಲು ಹೋಗುವನೆ ಕೊಳ್ಳಹೋಗುವನೆ?
ಅನಿತುಬಲ್ಲವನಾಗೆ, ತನಗೆ ಕಿರಿಯರ ನೋಡಿ
ಕನಿಕರಿಸಿ ಕಲಿಸಬರುವನು. ಅಂತ ವೇಳೆಯಲಿ
ಹಣಕಾಸನವನು ಬಯಸನು. ತಮ್ಮನಿಗೆ ಅಣ್ಣ,

ತಾಯಿ ಮಗನಿಗೆ, ಗೆಳೆಯ ಗೆಳೆಯನಿಗೆ, ನೆರವಾಗಿ
ಒಳಿತು ಎಂಬುದ ತಿಳಿಸುವಂತೆ ತಿಳಿಸಲುಬಹನು
ಅನ್ನದಂಗಡಿ ಊಟವನು ಮಾರುವಂದದಲಿ
ದೈವದಂಗಡಿಯಲ್ಲಿ ಮತವ ಕೊಳುಬಾ ಎನಲು
ಕೊಡುವವನ ಮನ ಕೊಳ್ಳುವನ ಸುಖವ ಲಕ್ಷಿಸದೆ
ಕೈಗೆಬಹ ಕಾಳು ಕಾಸನು ನೋಡಿ ಮುಗಿಯುವುದು.
ಮೋಸಮಾಡುವೆನೆಂಬ ಮತವಳನು ಕೆಡಬಹುದು,
ನಂಬಿ ನಿಜವೆಂದು ದೈವವ ಪೂಜಿಸುವ ಜನರ
ಅವರ ನಂಬಿಕೆಯೆ ಬದುಕಿಸುವುದಲ್ಲವೆ, ಎಂಬ
ಒಂದು ಸೂಚನೆ ಡಾಕ್ಟರೊರೆದ ಕತೆಯಲಿ ಇಹುದು.
ಮನುಜಕುಲ ಬಯಸುವೆಲ್ಲಾ ವಸ್ತುಜಾತದಲಿ
ನಿಜವೆಂತು ಅಂತೆ ಸುಳ್ಳುಂಟು. ಎಲ್ಲಿಯು ಸುಳ್ಳು
ಕೆಟ್ಟುದೇ, ನಿಜವೆಲ್ಲ ಒಳಿತು. ಮನವೇ ಮುಖ್ಯ
ಎಂದು ವಾದಿಸಿ, ಸುಳ್ಳು ಎಂದು ತಿಳಿದೂ ತಿಳಿದು
ಸುಳ್ಳ ನಂಬುವುದು ಸಲ್ಲದು. ಸಟೆಯ ತೊರೆಯುವುದು,
ನಿಜವನೇ ನಂಬುವುದು, ಇದೆ ಲೋಕದಲಿ ಜನಕೆ
ಬೆಳೆವುದಕೆ ಸಾಧನ. ಮೋಸವನು ಹೊರಗೆಡಹಿ
ದಿಟವ ಹರಹುವುದು, ಆಲೋಚಿಸಲು, ಯಾವುದನು
ದೇವರೆನ್ನುವೆವು, ಆ ತತ್ವದಾರಾಧನ."
ಟೀಕೆ ಮುಗಿದಿರೆ ರಾಮು ನಾಳೆ ಕತೆ ಹೇಳುವುದು
ಮಂಗೇಶರಾವ ಎಂದನು. ಅವರು ಮರುದಿವಸ
ಬರೆದ ಕತೆ ಮುಂದೆ ಇದೆ: "ಸೋಜಿಗದ ಹೊಳಲು."

# ಸೋಜಿಗದ ಹೊಳಲು

## ಮುನ್ನುಡಿ

ಬೈಂದೂರ ವೈದ್ಯಕಿಯ ಗಣಪೈಗಳೆಂಬವರು ನಮ್ಮ ತಾತದಿರ ಮಿತ್ರರು. ನನ್ನ ಎಳೆತನದಿ ಮೂಡಬಿದರೆಗೆ ನಮ್ಮ ತಾಯೊಡನೆ ಹೋದಂದು ನಾನು ಇವರನು ಒಮ್ಮೆ ನೋಡಿದೆನು. ಮುದುಕನಲಿ ಮೊದಲು ಮನವನು ಸೆಳೆಯುತಿದ್ದುದಾತನ ಮಿಸೆ. ಮೂಗುಹೊಳ್ಳೆಯನೆ ಮುಚ್ಚಿರುವುದೋ ಎಂಬಂತೆ ಆದರಡಿಗೆ ಹೊಮ್ಮಿದಾ ನಿಬಿಡ ಕೇಶವ್ರಜವು ಮೇಲ್ತುಟಿಯ ಎರಡು ಕೊನೆವರೆಗೆ ತುಸು ಕಿರಿದಾಗಿ ತುತ್ತ ತುದಿಯಲಿ ಒಂದು ಬಾಲವೆನೆ ನಿಮಿರ್ದಿದ್ದು ಎರಡು ಗಲ್ಲವನು ಅರ್ಧರ್ಧ ತುಂಬಿಹುದು. ಈ ಶ್ಮಶ್ರುರಾಜಿಯ ಮೇಲೆ, ಚಂದ್ರರನು ನೋಡುತಿಹ ಎರಡು ಚಂದ್ರರೊ ಎಂಬ ರೀತಿ ಹೊರವಾಗೆಸೆವ ಹುಬ್ಬೆರಡು ಬೆಳ್ಳಗಿರುವುದು. ಇದರ ಮಧ್ಯದಲಿ ಹೊಳೆಹೊಳೆವ ಕಣ್ಣು. ನೋಡುವ ಒಂದು ವೇಗದಲೆ ನಿಮ್ಮ ಎದೆವರೆಗೆ ತೂರುವುದೊ ಎನೆ ಚುಚ್ಚಬಹ ತೀವ್ರ ಅವುಗಳ ದೃಷ್ಟಿ. ಆ ತೀವ್ರತೆಯ ಜೊತೆಗೆ ಎಲ್ಲ ಹೊತ್ತಲು ಒಂದು ಸೊಗಸನಗೆ ಬೆರೆತಿಹುದು. ಮನೆ ಮುಂದೆ ಇವರು ಕೈಸಾಲೆಯಲಿ ಕುಳ್ಳಿರುತ ಬಲಗಡೆಗೆ ಔಷಧದ ಒಂದು ಗಂಟನು ಇರಿಸಿ ಊರ ಜನ ಯಾರೆ ಬಂದರು ನಗುತ ಮಾತಾಡಿ ಕಷ್ಟಸುಖವನು ಕೇಳಿ ಔಷಧವ ಕೊಡುವರು. ಕಷ್ಟವೇನೂ ಇಲ್ಲದವರು ಬಂದರೆ, ಒಳಿತು ಎಲೆ ಅಡಿಕೆ ಜೊತೆಗೆ ಈ ಗುಳಿಗೆ ಒಂದನು ತಿನ್ನಿ, ದೇಹವನು ಲಘುವಾಗಿ ಮಾಡುವುದು, ಮನಸಿನಲಿ ಉಲ್ಲಾಸವಮೂಡುವುದು, ಎಂದು ಮೂರೋ ನಾಲ್ಕೊ

ಕಿರಿಕಿರಿಯು ಮಾತ್ರೆಗಳ ನೀಡುವರು. ನನ್ನಂಥ
ಬಾಲಕರು ಬರಲು, ಆ, ತಮ್ಮ ಬಂದೆಯ ಬಾ ಬಾ,
ಕೋ ಸ್ವಲ್ಪ ಕಲ್ಲುಸಕ್ಕರೆ, ಎಂದು ಸುಮ್ಮನೆಯೆ
ಸಕ್ಕರೆಯ ತುಂಡೊಂದ ನೀಡುವರು. ಗಂಟೇನು
ಅಷ್ಟೊಂದು ದೊಡ್ಡತಾಗಿರಲಿಲ್ಲ. ಆದರೆಯೊ
ಕಿರಿಕಿರಿಯ ಐವತ್ತು ಸಂಪುಟದ ಐವತ್ತು
ಗುಳಿಗೆ ಲೇಹ್ಯಗಳು ಆದರೊಳಗೆ ಎಂದೂ ಒಳವು;
ಜೊತೆಗೆ ಮಕ್ಕಳಿಗಾಗಿ ಕಲ್ಲುಸಕ್ಕರೆ ಇನಿಸು.
ಆ ಬಾರಿ ನಾನು ಅವರಿರುವ ತಾಣವ ಸಾರೆ
ಮುದುಕಯ್ಯ, ಬಾ ತಮ್ಮ ಕುಳಿತುಕೋ ಎಂದೆನುತ
ನಸ್ಯವನು ತೀಡುತ್ತ, ನೀನು ಸರಸೂ ಮಗನೊ
ಎಂದು ಕೇಳಿದರು. ನಾ ಹೌದೆನಲು, ಸರಿಸರಿ,
ಬೆಂಗಳೂರಿನ ಹುಡುಗ, ಸರಿ, ಎಂದು ನಗುನಗುತ,
ನೋಡು ಆ ಡಬ್ಬಿಯಲಿ ಕಲ್ಲುಸಕ್ಕರೆ ಇದೆ
ತೆಗೆದುಕೋ ಎಂದು ಹೇಳಿದರು. ನಾ ಡಬ್ಬವನು
ತೆರೆದು ಸಕ್ಕರೆಯ ಚೂರೊಂದ ಕೊಂಡಿರೆ, ಏಕೆ
ಇನ್ನೆರಡು ಚೂರು ಕೋ, ಎಂದು ನಗುತಾಡಿದರು.
ಆಗ ಸಂಜೆಯ ವೇಳೆ. ಔಷಧವ ಬೇಡುವರೆ
ಜನ ಬರುವ ಹೊತ್ತಲ್ಲ. ಒಬ್ಬ ಇಬ್ಬರು ಜೊತೆಯ
ಮುದುಕರೈತಂದು ಕುಳಿತರು. ನಮ್ಮ ತಾತದಿರು
ಯಾರೊ ಬಂದಿದ್ದವರ ಜೊತೆಗೇನೊ ಮಾತಾಡಿ
ಇವರೆಡೆಗೆ ಬಂದು ಸೇರಿದರು; ಬಂದಿದ್ದಾತ
ಯಾರೆಂದು ಹೇಳುತ್ತ, ಬಾರಕೂರಿನ ನಮ್ಮ
ಭೂಮಿ ಮಾಡುವನು, ಎಂದರು. ವೈದ್ಯರಾನುಡಿಗೆ,
ಓಹೊ ಎನ್ನುತ, ಬಾರಕೂರು ಬಾಳಿದದಿನಕೆ
ಬಹು ಚೆನ್ನ ಬಾಳಿತಪ್ಪುದು, ಎಂದು ಹೇಳಿದರು.
ಕುಳಿತಿದ್ದ ಹಿರಿಯುರಲಿ ಒಬ್ಬಾತ, ಬಹು ಚೆನ್ನ

ಬಾಳಿಯೇ ಇರಬೇಕು, ಈಗಳೂ ಆ ಕೋಟೆ
ಹಳೆಯೂರ ಹಾಳಿನಲಿ ಬೀದಿ ಕೇರಿಯು ಗುರುತು
ಚೆನ್ನಾಗಿ ಕಾಣುವುದು, ಎಂದು ನುಡಿದರು. ತಾತ,
ಈಗಲೂ ಊರು ಹನ್ನೆರಡು ವರ್ಷಕೆ ಒಮ್ಮೆ
ಮರಳಿ ಜೀವವ ಪಡೆದು ಯಾವುದೋ ಒಂದಿರುಳು
ಹಿಂದಣಾ ವೈಭವವ ಮರಳಿ ಬಾಳುವುದೆಂದು
ಹೇಳುವರು ಅಲ್ಲವೆ, ನೀನು ಎಂದೋ ಒಮ್ಮೆ
ನಿನಗೆ ಏನೋ ಆಯಿತೆಂದು ಹೇಳಿದುದುಂಟು,
ಮರೆತು ಹೋಗಿಹೆಯೊ, ಎಂದರು. ವೈದ್ಯರಾನುಡಿಗೆ,
ಮರೆತು ಹೋಗುವೆನೇಕೆ, ಉಳಿದವರು ಹೇಳುವುದ
ನಾನು ಕಣ್ಣಾರ ಕಂಡೆನು, ಅದನೆ ಹೇಳಿದೆನು,
ಎಂದು ನಗುನಗುತ ಉತ್ತರವನಿತ್ತರು. ಒಬ್ಬ
ಮುದುಕಯ್ಯ, "ನಿಜವಾಗಿ? ಏನು ಸಂಗತಿ ಹೇಳಿ,"
ಎನಲು ವೈದ್ಯರು, ನಸ್ಯವನು ಚಿಟಿಕೆಗಳ ಮಾಡಿ,
ಎದುರಿಗಿದ್ದವರಿಗೆರಡನು ಕೊಟ್ಟು ತಾನೊಂದ
ಮೂಗಿಗೇರಿಸಿ, ಮತ್ತೆ ಒಂದ ಬೆರಳಲಿ ಹಿಡಿದು,
ಹೇಳುವೆನು ಕೇಳಿ ಎಂದೀ ಕತೆಯನೊರೆದರು.

### ವೈದ್ಯರ ಕತೆ

ನನಗಾಗ ನಡುಹರೆಯ; ವೈದ್ಯಕೆಯ ವೃತ್ತಿಯಲಿ
ಕುಂದಾಪುರದ ಮೊದಲು ಮಂಗಳೂರಿನವರೆಗೆ
ಒಂದೂರ ಬಿಡದೆ ಸುತ್ತಿದೆನು ಆ ಕಾಲದಲಿ.
ಏನೆಂಥ ಕಾಲವದು! ಮತ್ತೆಬಹುದೇ? ಒಮ್ಮೆ,
ಒಂದು ಜೀವಕೆ ಒಮ್ಮೆ ಮಾತ್ರ, ಬರುವುದು; ಬಂದು
ಈ ಬಾಳ ತನ್ನ ಆನಂದದಾಳಕೆ ಸೆಳೆದು
ಸುಖದಿಂದ ಉಸಿರ ಕಟ್ಟಿಸಿ ಮತ್ತೆ ಬಿಡಿಸುವುದು.
ಅಂಥ ಹರೆಯದ ದಿವಸ ನಾನೊಂದು ಸಲ ಒಂದು
ಸಂಜೆ ನಮ್ಮಾ ಬಾರಕೂರತ್ತ ನಡೆದಿಹೆನು.

ಭೂತಾಲ ಪಾಂಡ್ಯ ನಿರ್ಮಿಸಿದ ಊರಿದು. ಇದನು
ನಿರ್ಮಿಸುವ ಸಲುವಾಗಿ ಆ ನೃಪತಿ ತಪಮಾಡಿ
ಮಂಜುನಾಥನ ಒಲಿಸಿ ಭೂತಗಣಗಳ ನೆರವ
ಪಡೆದನೆಂಬರು. ಬರಿಯ ಮಾನವರ ಬಲ ಬುದ್ಧಿ
ನಿರ್ಮಿಸಲು ಬಲ್ಲುದೇ ಅಂತಪ್ಪ ನಗರಿಯನು!
ಅಂದು ನಾ ಹಳೆಯೂರ ಹಾಳಿನೆಡೆ ಬರುತಿರಲು
ಹನ್ನೆರಡು ವರ್ಷದಲಿ ಒಂದಿರುಳು ಹಳೆನಗರಿ
ಮತ್ತೆ ಬಾಳುವುದೆಂದು ಮುದುಕರಾಡುವ ಮಾತು
ಮನಕೆ ಬಂದಿತು. ಊರಿಗೀ ಪುಣ್ಯ ಒಗೆದುದು
ಎಂತು ಎಂಬುದ ನೀವು ಕೇಳಿ ಬಲ್ಲಿರೊ ಇಲ್ಲೊ.
ಹೇಳುವೆನು ಕೇಳಿ. ನಮ್ಮಾ ಬಾರಕೂರಂದು
ಅಧ್ವರ್ಯದಲಿ ಬಾಳುತಿರುವಂದು ಒಂದು ಸಲ
ಯಾವನೋ ಸನ್ಯಾಸಿ ಅರಮನೆಯ ಮುಂಗಡೆಗೆ
ಬಂದು ಭಿಕ್ಷಾಂದೇಹಿ ಎಂದು ಕೂಗಿದನಂತೆ.
ಅರಮನೆಯ ಭಿಕ್ಷೆ ಬೇಡುವರು ಮುಂಗಡೆ ಹೋಗಿ
ಎಲ್ಲ ಮನೆಯಲಿ ಕೇಳುವಂತೆ ಕೇಳುವುದುಂಟೆ?
ಪಕ್ಕದೊಳಗಾವುದೋ ಬಾಗಿಲಲಿ ಊಳಿಗದ
ಯಾವನೋ ಕುಳಿತಿರುತ ಬಂದ ಕಂಗಾಲರಿಗೆ
ಪಾವು ಸೇರಕ್ಕಿ ಹಾಕುವನು. ಈ ಸನ್ಯಾಸಿ
ಭವತಿ ಭಿಕ್ಷಾಂದೇಹಿ ಎಂದ ಕೂಗಿಗೆ ಅಲ್ಲಿ
ಬಾಗಿಲಲಿ ನಿಂತ ಕಾವಲುಗಾರ, ನಿಂತಂತೆ,
ಪಕ್ಕದಲಿ ಹೋಗಿ ಕೇಳಣ್ಣ ಎಂದನು. ಅವನ
ಆ ಮಾತು ಸನ್ಯಾಸಿಗರಿವಾಗಲಿಲ್ಲಹುದು.
ಅವನು ಅಲ್ಲೇ ನಿಂತು ಭವತಿ ಭಿಕ್ಷಾಂದೇಹಿ
ಎಂದು ಮತ್ತೊಮ್ಮೆ ಕೂಗಿದನು. ಸಜ್ಜೆಯ ಮೇಲೆ
ಬಾರಕೂರಿನ ರಾಜ ಕಿರಿಯ ರಾಣಿಯ ಜೊತೆಗೆ
ಸರಸದಲಿ ಕುಳಿತಿದ್ದನಂತೆ. ಈ ಕೂಗಿಂದ

ರಾಜನಿಗೆ ಬೇಸರಾಯಿತು. ಅವನು ಅವಸರದ
ಆಳ ಬರಹೇಳಿ, ಯಾರವನು ಬಾಗಿಲ ಮುಂದೆ
ಕೂಗುತಿರುವನು ಇಂತು, ತೊಲಗೆನ್ನು, ಎಂದನು.
ಆಳು ಕೆಳಗಿಳಿತಂದು ಭಿಕ್ಷುಕನ ಗದರಿದನು.
ಇವರ ಮಾತನು ಕಾಣನಾತ. ಆದರೆ ನಡತೆ
ಒಳಿತಲ್ಲವೆಂದು ಕಂಡಿತು. ನಿಮ್ಮ ಈ ಕೊಬ್ಬು
ಇಷ್ಟರಲೆ ಮುರಿಯುವುದು, ಹಾಳಾಗುವುದು ಊರು,
ಎಂದು ಕೋಪದಲಿ ಮೊರೆಯುತ ಅವನು ಸಾಗಿದನು.
ರಾಣಿಯಾದವಳಿಗೇನೋ ಭೀತಿಯಾಯಿತು.
ಸಜ್ಜೆಯಿಂದಿಳಿದವಳೆ ಭಿಕ್ಷುಕನ ಹಿಂದೆಯೇ
ಆಕೆ ಓಡಿದಳು; ಸನ್ಯಾಸಿಯನು ಕಂಡಳೋ
ಕಾಲಿಗೆರಗಿದಳು; ತಪ್ಪೆಲ್ಲವನು ಮನ್ನಿಸಿ
ಸಲಹಬೇಕೆಂದು ಬೇಡಿದಳು. ಆ ಸನ್ಯಾಸಿ,
ನಾನು ಶಾಪವನಿತ್ತೆನಲ್ಲ, ವಿಧಿ ಲಿಖಿತವನು
ಬರಿದೆಬಾಯಲಿ ನುಡಿದೆನಹುದು, ಈ ಹಿರಿಯೂರ
ಹಣೆಬರಹವಂತಿರಲು ಎನ್ನಿಂದಲಹುದೇನು,
ಆದೊಡೆಯು ನಿನ್ನಂಥ ಗುಣವಂತೆಯನು ರಾಣಿ
ಎಂದು ಪಡೆದಿಹ ಪುಣ್ಯದೊಂದು ಫಲವಾಗಿ ಇದು
ಎಂತು ಹಾಳಾದೊಡೆಯು ಹನ್ನೆರಡು ವರುಷದಲಿ
ಒಂದಿರುಳು ತನ್ನ ಹಿಂದಣ ವೈಭವವ ತಾಳಿ
ಶೂನ್ಯದುದರವನುಳಿದು ಕಂಗೊಳಿಸಿ ಇರುಳಳಿಯೆ
ಮರಳಿ ಶೂನ್ಯಕೆಕರಗಿ ಮರೆಯುವುದು, ನಡೆತಾಯಿ,
ಎಂದು ನುಡಿಯುತ ಕಣ್ಗೆ ಕಾಣದಾದನು. ಮತ್ತೆ
ಅವನ ಕಂಡವರಿಲ್ಲ. ರಾಣಿ ಹಿಂದಿರುಗಿದಳು,
ನಡೆದುದೆಲ್ಲವನು ದೊರೆಗರುಹಿದಳು. ಅಲ್ಲಿಂದ
ನಾಲ್ಕುವರುಷದ ದಿವಸ ಕಳೆವ ಮುನ್ನವೆ ನಾಡು
ಶತ್ರು ಸೇನೆಗಳ ದಾಳಿಗೆ ನುಚ್ಚು ನುರಿಯಾಯ್ತು.

ಬಾರಕೂರಿನಕೋಟೆ ಅಂದು ಹಾಳ್ಕೆಡೆದುದೇ
ಇಂದಿಗೂ ಹಾಳು. ರಾಜನ ಯಾವ ಪಾತಕಕೆ
ಊರಿಗೇ ಈ ಶಿಕ್ಷೆ ಆಯಿತೆಂಬರು ಜನರು.
ರಾಜನದು ಇಲ್ಲಿ ಪಾತಕವೇನು? ಊರೂರೆ
ಪಾತಕವ ಮಾಡಿತ್ತು, ರಾಜ ಆ ಊರಮುಖ.
ಊರು ಬೆಳೆಯಿತು, ಅದರಪಾಪ ಬೆಳೆಯುವ ಸಮಕೆ
ಪುಣ್ಯ ಬೆಳೆವುದೆ? ನಗರ ಹಾಳಾದ ಹೊತ್ತಿನಲಿ
ಹತ್ತಾರು ಮಂದಿ ದೂರದ ಒಂದು ಕೇರಿಯಲಿ
ಹೋಗಿನಿಂತರು. ಈಗ ಬಾರಕೂರೆಂದಿತ್ತ
ಹೊಳೆಯಂಚಿನಲಿ ಬಾಳುತಿಹ ಊರು ಇಂತಾದ
ಹೊಸಮನೆಯ ಬೀಡು.

ಹಿಂದಣ ನಗರಿ, ಸನ್ಯಾಸಿ
ವರವಿತ್ತತೆರದೆ, ಹನ್ನೆರಡು ವರುಷಕೆ ಒಮ್ಮೆ
ಚೈತ್ರಮಾಸದ ಹುಣ್ಣಿಮೆಯ ರಾತ್ರಿ ಅಂದಿನೊಲು
ಬಾಳುವುದು ಎಂದು, ಆ ಬಾಳ್ಕೆಯಲಿ ನಮ್ಮಂತೆ
ಯಾರೆ ಆಗಲಿ ಹೋಗಿ ಬೆರೆಯಲಾಗುವುದೆಂದು,
ಬೆರೆತವರ ಬಟ್ಟೆಬರೆ ಮೆಯ್ಮುಟ್ಟೆಹುದು ಹೊರತು
ಉಳಿದೆಲ್ಲ ಕನಸ ಊರೊಡನೆ ಮರೆಯುವುದೆಂದು,
ಮತ್ತೆ ಹನ್ನೆರಡು ವರ್ಷದಮೇಲೆ ಅಲ್ಲಿ ಬರೆ
ಅದೆ ತಾಣದಲಿ ಅಂದಿನಂತೆಯೇ ಆ ವಸ್ತು
ಸಿಕ್ಕುವುದು ಎಂದು, ಜನ ಹೇಳಿದುದ ಬಾಲ್ಯದಲಿ
ನಾನು ಕೇಳಿದುದುಂಟು. ಅಂದು ಹಾರಾಡಿಯನು
ಹಿಂದುಳಿದು ಬರುತ ನಾ ಬಾರಕೂರಿನ ಹಳೆಯ
ಕೋಟೆ ಎಡೆಯನು ದಾಟ ಮುಂದರಿವ ಹೊತ್ತಿನಲಿ
ನೇಸರಸ್ತಮಿಸಲಿಳಿದನು. ಅಲ್ಲಿ ದಾರಿಯಲಿ
ಹೊಸಕಾಲದೊಂದು ಗುಡಿ ಇಹುದು. ಅದರೆದುರಿನಲಿ
ಹಳೆದಿನದ ತೋಪು ಒಂದಿದೆ. ಅದರ ಮರ ಬಳ್ಳಿ

ಹೂತಿಹವು. ಸರಳಿಯುದು ತೆಳುಹಸುರಹೂ ಇಲ್ಲಿ ;
ಬೇರೆಡೆ ಕರಂಡೆ, ಮಲ್ಲಿಗೆಯೆ ಎಂಬಂತಿಹುದು ;
ಹುಣುಗಲದ ಮರದ ಮೇಗಡೆ ಕೆಂಚಹೂ ; ತೋಪ
ಅಂಚಿನಲಿ ಹೊನ್ನೆಮರ ಒಂದು. ಆ ಬೆಳಕಿನಲಿ,
ಏನೊತೆರದಲಿ ಕಣ್ಗೆ ಚೆನ್ನಕಂಡಿತು. ತಳಿತು
ಯಾವುದೋ ಬೆರಗಿನಲಿ ನಿಂತ ಮರ ಆ ವೇಳೆ
ಹಿಂದಣೂರಿನಲಿ ಹಿಂದಣ ಸಂಜೆ ಗೌರಚ್ಚಿ
ನಿಂತರೀತಿಯನು ಮನಸಿಗೆ ತರಲು ನಾನಂತೆ—
ಗೌರಚ್ಚಿಯಾರೆ? ಪಾಲ್ಘಾಡಿಂದ ಬಂದಿದ್ದ
ಚೆಲುವ ಮಲಯಾಳಿಯೊಬ್ಬಳು, ಅವಳ ಆರೋಗ್ಯ
ಎಂತಿಹುದು ಎಂದು ಅವಳನು ನೋಡ ಹೋಗಿದ್ದೆ—
ತಳಿತ ಸುರಹೊನ್ನೆಮರ ನಿಂತ ಪರಿ ಗೌರಚ್ಚಿ
ನಿಂತಪರಿಯನು ಮನಕೆ ತರಲು ನಾನವಳಿತ್ತ
ಎಲೆ ಸುರುಳು ನೆನಪಾಗಿ ಅದನು ಮೆಲ್ಲುವ ಎಂದು
ಮರದೆದುರು ಗುಡಿಯ ಬದಿಯಲಿ ಎನಸೊ ಕುಳಿತೆನು.
ಅಳಿಲೆರಡು ಬದಿಯಮರ ಒಂದರಿಂದಿಳಿತಂದು
ಈ ಮರದ ಮೇಲ್ಗಡೆಗೆ ಒಂದು ಒಂದನು ಅಟ್ಟಿ
ಏರಿದುವು. ಹಾವರಾಣಿಯ ಪಿಳ್ಳೆ ಒಂದಂತೆ
ಬಂದು ಬಿಸಿಲಲಿ ಬೆನ್ನ ಬಣ್ಣಬಣ್ಣವ ತೋರಿ
ಬೇರೆ ಮರದೆಡೆಗೆ ಸಾರಿತು. ಎಲ್ಲ ಹಕ್ಕಿಯೂ
ಆಗಲೇ ಗೂಡುಗಳ ಸೇರಿದ್ದವಪ್ಪುದು.
ಬಾರಕೂರಿನ ಬಳಿಯ ಅಂತ ಸಂಜೆಯ ಒಂದು
ಚೆಂದವನು ನುಡಿಯೆ ಮನುಜನಿಗಳವೆ? ಹೊಸ ಊರ
ಮೇಡಿಂದ ಸಂಜೆಯಲಿ ಹೊಳೆಯಂತರಾಳದಲಿ
ತಲೆಯೆತ್ತಿನಿಂತ ತೆಂಗಿನ ತೋಟ, ಅದ ಹೊತ್ತ
ಬೆಣ್ಣೆಕುದುರನು ನೋಡಿ: ಭುವನೇಶ್ವರೀ ದೇವಿ
ನಮ್ಮ ಸೀತಾನದಿಯ ಉಬ್ಬೆದೆಯ ನೀರಿನಲಿ

ತೆಪ್ಪದಲಿ ಕುಳಿತೇನು ಸೂರ್ಯನೆಡೆ ಹೊರಟರೋ
ಎಂದೆ ತೋರುವುದು. ಎಲೆ ಸುರುಳನಗಿಯುತ ನನಗೆ
ಗೌರಜ್ಜಿ ಆದರಲ್ಲಿ ಕಸ್ತೂರಿಮಾತ್ರೆಯನು
ಹಾಕಿಲ್ಲವೆಂದು ತೋರಿತು. ಹಾಕು ಎಂದಿದ್ದೆ;
ಹಾಕಿದೆನು ಎಂದಿದ್ದಳವಳು. ಎಲೆಮೆಲುವಂದು
ಆರೋಗ್ಯಕೆಂದೆರಡು ಕಸ್ತೂರಿ ಮಾತ್ರೆಯನು
ತಿನ್ನುವುದು ನನ್ನ ವಾಡಿಕೆ. ನನ್ನ ಹಡಪವನು
ತೆರೆದು ಆ ಮಾತ್ರೆ ಇಹ ಕಿರಿಯ ಸಂಪುಟದಿಂದ
ಎರಡು ಮಾತ್ರೆಯನೆತ್ತಿ ಹಾಕಿಕೊಂಡೆನು. ಅಂದೆ
ಉದಯದಲಿ ನಾನು ಆ ಸಂಪುಟಕೆ ಆ ಮಾತ್ರೆ
ಹತ್ತ ಹಾಕಿದ ನೆನಪು. ಮಧ್ಯಾಹ್ನ ಗೌರಜ್ಜಿ,
ಎರಡು ಮಾತ್ರೆಯನು ಎಲೆ ಸುರುಳಿಯಲಿ ಇರಿಸಿದಳು.
ನಾನೀಗ ಎರಡ ತೆಗೆಯಲು ಆರು ಇರಬೇಕು.
ನೋಡಿದರೆ ಎಂಟಿತ್ತು. ಎರಡು ಮಾತ್ರೆಯ ಕೊಂಡು
ಎಲೆಯನಗಿಯುತ ಅಂತೆ ಕುಳಿತಿರಲು, ತಾನಾಗಿ
ಅಂದು ಚೈತ್ರದ ಹುಣ್ಣಿಮೆಯ ದಿವಸ ಎನ್ನುವುದು
ಮನಕೆ ಜ್ಞಾಪಕವಾಯ್ತು. ಬಲಗಡೆಗೆ ಸೂರ್ಯಾಸ್ತ
ಒಡ್ಡೋಲಗದಲಿ ನಡೆದಿರಲು, ಇದುರಲಿ ಇತ್ತ
ಎಡ್ಡದಿನ್ನೊಂದು ಒಡ್ಡೋಲಗದ ಸಂಭ್ರಮಕೆ
ತಿಂಗಳುದಿಸಿದನು. ಹೊತ್ತಾಗುತಿದೆ ಏಳೋಣ
ಎಂದು ಮನ ಅರ್ಧಯೋಚಿಸುತಿರಲು ಇನ್ನರ್ಧ
ಏಳುವುದು ಬೇಡೆಂದು ಅಲ್ಲಿಯೇ ಕೀಲಿಸಿತು.

ಅನಿತರಲಿ ಬಲದ ಕಡೆಯಿಂದಾರೊ ಗುಂಪಾಗಿ
ಬಂದಂತೆ ತೋರೆ ನಾನವರತ್ತ ತಿರುಗಿದೆನು.
ನಾಲ್ಕಾರು ಹರದೆಯರು; ಜೊತೆಗೆ ಮಕ್ಕಳು ಮಂದಿ ;
ಕೈಗಳಲಿ ತಟ್ಟೆಗಳ ಹಿಡಿದು ಯಾವುದೊ ಗುಡಿಗೆ
ಹೋಹಂತೆ ಹೊರಟಿಹರು ; ತಲೆಗೆ ಹೂ ಮುಡಿದಿಹರು ;

ಬೆಡಗಿಂದ ನಡೆಯುತಿರುವರು. ಅವರ ಜೊತೆಗಿದ್ದ
ಒಬ್ಬಾತನನು ನಾನು, ಎತ್ತ ಹೊರಟಿರಿ ಅಣ್ಣ
ಎಂದು ಕೇಳಲು, ಅವನು ಮಂಜುನಾಥನ ಗುಡಿಗೆ
ಎಂದು ಮರುನುಡಿ ಆಡಿದನು. ಅಲ್ಲಿ ಸುತ್ತಿನಲಿ
ಮಂಜುನಾಥನದೊಂದು ಗುಡಿ ಇರುವುದೆಂಬುದನೆ
ನಾ ಕಂಡುದಿಲ್ಲ. ಅದರಿಂದ, ಗುಡಿ ಇಹುದೆಲ್ಲಿ,
ಎಂದು ಕೇಳಿದೆನು. ಅದಕಾತ, ಹೊರಕೋಟೆಯಲಿ,
ಎಂದು ಮರುನುಡಿದು ಗುಂಪಿನ ಜೊತೆಗೆ ಸಾರಿದನು.
ನಗುತ ನುಡಿಯುತ ನಲಿದು ಸಂತಸದಿ ನಡೆದಿವರ
ನೋಡುತಿರೆ ನನಗೆ ಸೋಜಿಗವಾಯ್ತು. ಈ ಮಂದಿ
ಬರುತಿಹರು ಎಲ್ಲಿಂದ, ಇಲ್ಲಿ ಊರಾವುದು,
ಇತ್ತ ಪೋಹರು ಎಲ್ಲಿ, ಎಂದು ತಲೆಯನು ಎತ್ತಿ
ನೋಡಿದೆನು. ತಿಂಗಳುದಯಿಸಿ ಮೂರು ಮಾರೆದ್ದು
ತಣ್ಣನೆಯ ಬೆಳಕ ನೆಲದಡೆ ಚೆಲ್ಲಿ ನಗುತಿಹನು.
ಆ ಬೆಳಕಿನಡಿಗೆ ಹಿರಿದಾಗಿ ಬಾಳುವ ಊರು
ಒಂದು ಕಂಡಿತು. ಇಲ್ಲಿ ಊರಾವುದೆಂದ ಮನ
ಆ ಕ್ಷಣವೆ ಅಚ್ಚರಿಯನೇ ನಿಚ್ಚವೆಂಬಂತೆ
ಇದಿರ ನೋಟವನು ಅನುಭವಿಸತೊಡಗಿತು. ಆಹ !
ಏನು ಅಂದದ ನೋಟವದು ! ಬಯಲ ತುಂಬ ಮನೆ.
ನನ್ನ ಎದುರಲೆ ಮೂರು ಕೇರಿ. ಮನೆ ಮನೆ ಮುಂದೆ
ದೀಪವಿಟ್ಟಿಹರು. ಮಧ್ಯದ ಕೇರಿಯಾಕಡೆಗೆ
ದೇವಮಂದಿರವೊಂದು. ಅದರ ಮುಂಗಡೆ ತುಂಬ
ದೀಪ ಹಚ್ಚಿಹರು. ಚಿತ್ರಾ ಪೂರ್ಣಿಮೆಯ ತೇರು
ಸಂಜೆಯಲಿ ನೆಲೆಗೆ ಬಂದುದು ಅಲ್ಲೆ ನಿಂತಿಹುದು.
ಗರ್ಭಗುಡಿಯಲಿ ನಡೆಯುತಿರುವ ಪೂಜೆಯು ನನಗೆ
ಕುಳಿತ ಕಡೆಯಿಂದಲೇ ಕಾಣುತಿದೆ. ಹೋಗುವರು,
ಬರುವವರು, ನಿಲುವವರು, ನುಡಿವವರು, ನಗುವವರು :

ಇವರ ಮಧ್ಯದಲಿ ನಲಿದೋಡುತ್ತ ಕೆಲೆಯುತ್ತ
ತಿಂಗಳಲಿ ಆಡುತಿಹ ಬಾಲಕರು. ಒಳಗಿಂದ
ಒಮ್ಮೊಮ್ಮೆ ಬಾರಿಸುವ ಗಂಟೆ. ಅದರಾನಂದ
ಇಂತೆಂದು ನುಡಿಯಬಾರದು. ಅಂತೆ ದೂರದಲಿ
ಬೇರೆ ದೇಗುಲಗಳಲಿ ಬಾರಿಸುತಲಿಹ ಗಂಟೆ.
ಸ್ವಲ್ಪ ದೂರದಲೆ ಭಜನೆಯ ತಾಲಮದ್ದಲೆಯ
ಕೊರಲೆತ್ತಿ ಹಾಡುತಿಹ ಹಾಡು. ಇನ್ನೂ ಅಷ್ಟು
ದೂರದಲಿ ಯಾವುದೋ ಹಿರಿಮನೆಯ ಓಲಗದ
ಸಂಭ್ರಮ ವಿಜೃಂಭಿಸಿದೆ. ಕುಳಿತಲ್ಲೆ ನನ್ನ ಮನ
ಸುಖದೊಳೋಲಾಡಿತು ; ತಂಗಾಳಿ ಬೀಸುತಿರೆ
ಬೆಳುತಿಂಗಳೇನು ತೊಟ್ಟಿಲಲಿಟ್ಟು ತೂಗಿತೋ
ಎಂಬಂತೆ ಜೊಂಪೇರಿ ಅಲ್ಲೆ ಮಲಗಿದೆ ನಾನು.

ಅದು ಎನಿಸು ಹೊತ್ತಿಂತು ಕಡೆದಿದ್ದನೋ ಕಾಣೆ.
ಇರುಳು ಬೆಳೆದಿರಬೇಕು. ಆಗಲ್ಲಿ ಯಾವನೋ
ಬಂದು ನನ್ನನು ತಟ್ಟಿ ಎಬ್ಬಿಸಿದತೆರನಾಯ್ತು.
ಎದ್ದು ನೋಡಿದೆನು. ನಿಲುವಂಗಿ ತೊಟ್ಟಿಹ ಆಳು,
ನನ್ನ ಕುರಿತವನೆ, ಅಯ್ಯಾ, ಏಕೆ ಬೀದಿಯಲಿ
ಮಲಗಿಹಿರಿ, ಒಡತಿ ಕೇಳುವರು, ಎಂದನು. ಆವನು
ತಲೆ ತಿರುಹಿ ತೋರಿದೆಡೆ ಅಂತೆ ನಾ ನೋಡಿದೆನು.
ಒಬ್ಬ ಹರೆಯದ ಹೆಣ್ಣು ; ಚೆಲುವೆ ; ಎದುರಲಿ ನಿಂತು
ನನ್ನ ನೋಡುತಲಿಹಳು: ಗೌರಚ್ಚಿಯಕ್ಕನೋ
ಅತ್ತಿಗೆಯೊ ಎಂಬಂತೆ ಕಾಂಬುದವಳಾ ನಿಂತ
ಬೆಡಗು. ಅವಳನು ನೋಡಿ ಏನೊಂದ ನುಡಿವುದಕು
ನನ್ನ ನಾಲಗೆ ಆತುದಿಲ್ಲ. ಅಂತದರಿಂದ
ನಾನು ಸುಮ್ಮನೆ ಇಹೆನು. ಮರುಚಣಕೆ ಆ ಚೆಲುವೆ,
ತುಂಬಿದೂರಿನಲಿ ಮಲಗುವರೆ ಎಡೆ ಇಲ್ಲವೆ,

ರಾಯರನು ಮನೆಗೆ ಕರೆತಾ, ಚಿನ್ನ, ಹಾಸಿಕೊಡು,
ಅಲ್ಲಿ ಮಲಗಲಿ, ಎಂದು ಮೆಲ್ಲನುಲಿದಳು. ಅವಳ
ಆ ಉಲಿಯ ಮೆಲುಪೊ! ಆ ಉಲಿದ ನುಡಿಗಳ ನುಣುಪೊ!
ನುಡಿಗಳನು ನುಡಿದ ಅವಳಾಹಾವವೋ! ಇದನು
ಎಂತು ನಾ ಬಣ್ಣಿಸಲಿ? ಆಳು ಚಿನ್ನಗೆ ಇಂತು
ಆಣತಿಯನಿತ್ತಾಕೆ ಮನೆಯ ಕಡೆ ತಿರುಗಿದಳು.

ನಾನು ಅಲ್ಲಿಂದೆದ್ದು ಆಳ ಜೊತೆಯಲಿ ಹತ್ತು
ಇಪ್ಪತ್ತು ಗಜದಷ್ಟು ದೂರ ನಡೆದನು. ಆಗ
ಬೀದಿಯಲಿ ಜನವಿಲ್ಲ. ದೇಗುಲದ ಮುಂಭಾಗ
ಬರಿದಾಗಿ ಬೆಳಗುತಿರುವುದು. ಚಂದ್ರ ತಲೆ ಮೇಲೆ
ತುಂಬು ಕಳೆಯಲಿ ತೊಳಗುತಿಹನು. ತಣ್ಣನೆ ಗಾಳಿ
ಸುರಹೊನ್ನೆಮರದ ನಸುಗಂಪು ಭಾರವ ಹೊತ್ತು
ಮೆಲುಮೆಲನೆ ಹರಿಯುತಿದೆ. ಹಿರಿಯ ಊರಿನ ದೀಪ
ಎಲ್ಲೆಡೆಯು ಮಿನುಗುತಿದೆ. ಇಪ್ಪತ್ತು ಗಜ ನಡೆಯೆ
ಮೂಡವುಳ್ಳೊಂದು ಹಿರಿಮನೆ. ಅದರ ಕೈಸಾಲೆ
ಸಿಂಗಾರವಾಗಿಹುದು. ಚಿನ್ನ ನನ್ನನು ಒಳಗೆ
ಕರೆದೊಯ್ದು ಕೂಡುಮಣೆಯನು ತೋರಿ, ಕುಳ್ಳಿರಿ,
ಎಂದು ಹೇಳಿದನು. ನಾ ಕುಳಿತಿರಲು ಒಳಹೋಗಿ
ಒಂದು ಚೆಂಬಿನ ತುಂಬ ಬಿಸಿನೀರ ತಂದಿತ್ತು,
ಎಲೆ ಅಡಕೆ ತಟ್ಟೆಯೊಂದನು ಎದುರಿಗಿಟ್ಟನು.
ನನಗೆ ಹೊಟ್ಟೆಯಲಿ ಹಸಿವಾಗುತಿದೆ. ಈ ಮಂದಿ
ಏತರವರೋ, ಇವರ ಊಟ ಕೊಡಿ ಎನ್ನುವುದೆ
ಎಂದು ನಾ ಚಿಂತಿಸಿರೆ, ಜನಿವಾರ ವೀಭೂತಿ
ಧರಿಸಿದ್ದ ಒಬ್ಬ ಪರಿಚಾರಕನು ಇನ್ನೆರಡು
ತಟ್ಟೆಯಲಿ ನಾಲ್ಕಾರು ಬಟ್ಟಲಲಿ ಸೀರವೆ
ಕಾಯನ್ನ ಕೂಟು ಪಾಯಸ ಪಲ್ಯವನು ಇಟ್ಟು

ತಂದು ಎನ್ನಿದಿರೊಳಿರಿಸಿದನು. ಕೈಕಾಲ್ತೊಳೆದು
ನಾನದನು ತಿಂದು ತಣಿದವನೆ ಆ ಎಲೆ ಅಡಕೆ
ಮೆಲ್ಲತೊಡಗಿದೆನು. ಕಸ್ತೂರಿಮಾತ್ರೆಯನೆರಡ
ತೆಗೆಯಬೇಕೆಂದಾಸೆ, ತೆಗೆಯೆ ಸೋಮಾರಿತನ.
ಆಗ, ಸಂಜೆಯಲಿ ಕಸ್ತೂರಿಮಾತ್ರೆಯ ಲೆಕ್ಕ
ತಾಳೆ ಹೋಗದ ಮಾತು ನೆನವ ಸಾರಿತು. ಅಂಥ
ಸೋಜಿಗದ ಬಾಳುವೆಯೊಳಾದರೂ ಮನುಜನಿಗೆ
ಇಂತ ಲೆಕ್ಕದಮಾತು ಮನಕೆ ಸುಳಿಯಲು ಬಹುದೆ?
ಏನ ಹೇಳಲಿ ನೋಡಿ. ಇಂತು ಮಾತ್ರೆಯ ಲೆಕ್ಕ
ಹತ್ತರಲಿ ಎರಡು ಹೋದರೆ ಎಂಟು, ಎಂಟರಲಿ
ಎರಡು ಹೋದರೆ ಆರು, ಹತ್ತೆಂಟು ಆರೆನುತ
ಮನಸಿನಲಿ ಸುಳಿದಿರಲು ನಾನು ಎಲೆ ಅಡಕೆಯನು
ಮೆಲ್ಲನೆಯೆ ಮೆಲುತಿಹೆನು.

ಆಗ ಬಾಗಿಲೊಳೊಬ್ಬ
ಹೊಸಬ ಬಂದವನು, ಸ್ವಾಮಿ, ಎಂದು ಕೂಗಿದನು.
ಚೆನ್ನ, ಯಾರದು, ಎಂದು ಹೊರಗೆ ಬರೆ ಆ ಹೊಸಬ
ಮೆಲ್ಲನೆಯ ದನಿಯಲ್ಲಿ, ಇದು ರಾಜಮಣಿಯವರ
ಮನೆಯೆ, ಎಂದನು. ಚೆನ್ನ, ಅಹುದು, ಎನೆ ಬಂದಾತ,
ಇಲ್ಲಿ ಹಿಂದಿನಸಾರಿ ಬಂದಂದು ನಾನೊಂದು
ಪೆಟ್ಟಿಗೆಯ ಬಿಟ್ಟು ಹೋದೆನು, ಅದನು ಒಯ್ಯುವದಕೆ
ಈಗ ಬಂದಿಹೆನು, ಎಂದನು. ಚೆನ್ನ, ಕುಳ್ಳಿರ್ರಿ,
ನೋಡಿಬರುವೆನು, ಎಂದು ಒಳಗಡೆಗೆ ಸಾರಿದನು.
ಹೊಸಬ ನನ್ನನು ಗುರುತು ಕಂಡಂತೆ ದಿಟ್ಟಿಸುತ
ಬಳಿಗೈದಿ ಹತ್ತಿರವೆ ಕುಳಿತನಪ್ಪುದು. ಅವನು
ಮಂಗಳೂರಲಿ ನಾನು ಆಗಾಗ ನೋಡಿದ್ದ
ಮೈಸೂರ ರತ್ನಪಡಿ ವ್ಯಾಪಾರಿ ಒಬ್ಬಾತ.

ನಾನು ಅವನನು ನೀವು ಇಂತವರು ಅಲ್ಲವೇ
ಎಂದು ಕೇಳಿದೆ. ಆವನು, ಹೌದು ಎನ್ನುತ, ನೀವು
ಇಲ್ಲಿಯೋ ಇರುವರೋ, ಎಂದೆನ್ನ ಕೇಳಿದನು.
ನಾನು, ಇಲ್ಲ, ಇಲ್ಲಿ ಬಂದಿರುವುದಿದೆ ಮೊದಲು,
ಎಂದು ಹೇಳಲು ಅವನು ಭಯದಿಂದ ಬಿಗಿದಿರುವ
ಬಿರಿನೋಟದಲಿ ನನ್ನ ನೋಡುತ್ತ, ರಾಯರೇ,
ಅಂತಿರಲು, ಇದು ಏನು, ಬಲಿಯ ಕುರಿಯಂದದಲಿ
ಸರಸದಲಿ ಎಲೆಯಡಕೆ ಅಗಿಯುತಿರುವಿರಿ ಇಂತು,
ಎಂದು ಹೇಳಿದನು. ಅವನರ್ಥ ತಿಳಿಯದು ನನಗೆ.
ಏಕೆ ಎಂದೆನು. ಹೊಸಬ, ತಾನೆ ತಿಳಿವುದು, ಅದನು
ನಾ ಹೇಳಲೇಕೆ, ಎಂದನು. ಇಷ್ಟು ಹೊತ್ತಿಗೆ
ಚಿನ್ನ ಒಳಗಿಂದ ಬಂದವನು, ಪೆಟ್ಟಿಯ ನೀವು
ಎಲ್ಲಿ ಇಟ್ಟಿರೊ ಅಲ್ಲಿ ಬಂದು ಕೊಳ್ಳಿರಿ ಎಂದ.
ಹೊಸಬ ಒಳಗಡೆ ಹೋಗ ಮನಸಿಲ್ಲವೆಂಬಂತೆ
ಇನಿಸು ಹಿಂತೆಗೆದು, ಆಗಲಿ ಎಂದು ಅವನೊಡನೆ
ಬದಿಯ ಕೊಟಡಿಗೆ ಹೋಗಿ ಎರಡು ನಿಮಿಷದ ಮೇಲೆ
ಒಂದು ಪೆಟ್ಟಿಗೆಯ ಕೈಯಲಿ ಹಿಡಿದು ಬಂದನು.
ಅವನ ಮೊಗದಲಿ ಕಂಡ ಆನಂದ ಇನಿತೆಂದು
ಹೇಳತೀರದು. ಆವನು ಹೊರಗೆ ನಡೆಯುವ ಮುನ್ನ
ನನ್ನ ಹತ್ತಿರ ಬಂದು ಕಿವಿಯೆಡೆಗೆ ಬಾಯಿಟ್ಟು,
ನೀವಿಲ್ಲಿ ನಿಲ್ಲಬೇಡಿರಿ, ನನ್ನ ನುಡಿ ಕೇಳಿ,
ಓಡಿ ಬನ್ನಿರಿ, ಎಂದು ಹೇಳಿದನು. ಇವನೇಕೆ
ಇಂತಾಡುತಿಹನು ಎಂದೆನಗೆ ಅರಿವಾಗದೊಲು
ಏನೊ ಮನಸಿಗೆ ಮಂಕು. ಬರುವುದಿಲ್ಲವೆ ಎಂದು
ಹೊಸ ಆತ ಕೇಳುತ್ತ, ಇದು ನಿಜದ ಊರಲ್ಲ,
ಅಂದಿನೂರಿನ ದೈಯು, ಬರುವುದಾದರೆ ಬನ್ನಿ,
ಬರುವುದಕೆ ಆಗದಿರೆ ನಿಮ್ಮ ಒಡವೆ ಅದೇನೆ

ಇದ್ದರೂ ಜೊತೆಯಾಗಿ ವ್ಯೆಗೆ ಸೋಕಿರುವಂತೆ
ಇರಿಸಿಕೊಳ್ಳಿರಿ, ಎನುತ ಹೊರಗೆ ಹೊರಟನು.

ನಾನು
ಬಾಗಿಲೆಡೆ ಅಂತೆ ನೋಡುತಲಿರಲು ಮನೆಯಾಕೆ
ಮತ್ತೆ ಬಂದಳು. ತಲೆಯನೋಸರಿಸಿ ಎದುರಿನಲಿ
ಹೇಳಲಾಗದ ಒಂದು ಬೆಡಗ ನಿಲುವಲಿ ನಿಂತು
ಫಲಹಾರ ಆಯಿತೇ ಎಂದು ಕೇಳಿದಳು. ಆ
ಕೇಳುವೆಯ ಅಂದವೇ ಅಂದ. ಆಯಿತು ಎಂದು
ಎಂತೊ ನಾಮರುನುಡಿಯ ಉಸುರಿದೆನು. ಆ ಚೆಲುವು
ದೆವ್ವವಾಗಿಹ ಊರ ಚೆಲುವು ಎನಬಹುದಾರು?
ನನ್ನ ಮನಸಿಗೆ ಅಂತ ಯೋಚನೆಯೆ ಸುಳಿಯದಿರೆ
ಈ ಕಣ್ಣು ಅವಳ ಆ ರೂಪದಲೆ ನಟ್ಟವು.
ಕನಿಕರಿಸಿ ಮನೆಗೆ ಕರೆತಂದ ಹೆಣ್ಣಿನ ಚೆಲುವ
ಕಣ್ಣಿಕ್ಕಿ ನೋಡುವುದು ಸರಿಯಲ್ಲ ಎಂಬುದನು
ಮನಸು ಬಲ್ಲದು; ಆದರೂ ಅವಳ ಆ ಬೆಡಗು
ಎನ್ನ ಸೆಳೆಯುತಲಿತ್ತು. ಇಂತು ನಾನವಳ ಕಡೆ
ನೋಡಬಾರದು ಎಂದು ತಿಳಿತಿಳಿದೆ ನೋಡುತ್ತ
ಏನೊಬ್ಬ ಹಳ್ಳಿಗನ ತೆರದೆ ನಡೆಯುತಲಿಹೆನು.
ನನ್ನಪರಿ ಇಂತಿರಲು ಚೆಲುವೆ ನನ್ನನು ಕುರಿತು,
ಬದಿಯಕೋಣೆಯಲಿ ಹಾಸಿಗೆ ಹಾಸಿಹುದು, ಅಲ್ಲಿ
ಹೋಗಿ ಮಲಗಿರಿ, ಎಂದು ಹೇಳಿದಳು. ನಾನೆದ್ದು
ಕೋಣೆಯೆಡೆ ಸಾರಿದೆನು. ಚೆನ್ನ ಹಾಸಿಗೆ ಹಾಕಿ
ಹೊರಗೆ ಬಂದನು. ನಾನು ಒಳಹೊಕ್ಕು ಮಲಗಿದೆನು.
ಕ್ಷಣಬಿಟ್ಟು ಚೆನ್ನ ಮತ್ತೊಮ್ಮೆ ಒಳಗೈತರಲು
ನಾನವನ ಕರೆದು, ಚೆನ್ನಯ್ಯ, ನಿನ್ನನು ಒಂದು
ಮಾತು ಕೇಳಲೆ, ಎಂದೆ. ಅದಕೇನು ಕೇಳಿರಿ,

ಎಂದನವ. ನಾ, ರಾಜಮಣಿ ಎನ್ನುವರು ಯಾರು,
ಎಂದೆನಲು ಅವನು, ನಮ್ಮೊಡತಿಯರ ಹೆಸರು ಅದು,
ಎಂದು ನುಡಿದನು. ನನ್ನ ಈ ಮನೆಗೆ ಕರೆತಂದ
ಹೆಣ್ಮಗಳೆ ನಿಮ್ಮೊಡತಿ, ಎಂದು ನಾ ಕೇಳಿರಲು,
ಅಹುದು, ಎಂದನು ಚೆನ್ನ. ಏನು ಸೋಜಿಗವೆಂದು
ನಾನಂತೆ ಅವನ ನೋಡುತ ಸುಮ್ಮನಿರೆ ಅವನು,
ಇಂದು ಹಬ್ಬದ ದಿವಸ, ಅರಸರೋಲಗದಲ್ಲಿ
ನೃತ್ಯ ಮಾಡುವುದಿತ್ತು, ಅದರಿಂದ ನಮ್ಮೊಡತಿ
ಅರಮನೆಗೆ ಹೋಗಿ ಓಲಗ ಮುಗಿಸಿ ಹಿಂತಿರುಗಿ
ಬರುತ ದಾರಿಯಲಿ ಹೊತ್ತಲ್ಲದೀ ಹೊತ್ತಿನಲಿ
ನೀವು ಬೀದಿಯಲಿ ಮಲಗಿಹ ಪರಿಯ ನೋಡಿದರು,
ನೋಡಿ ಮರುಗುತ ನನ್ನ ಕರೆದು ನಿಮ್ಮೆಡೆ ಬಂದು
ನಿದ್ದೆಯಿಂದೆಚ್ಚರಿಸಿ ನಿಮ್ಮ ಕರೆತಂದಿಹರು,
ಎಂದು ಹೇಳಿದನು. ನರ್ತಕಿಯಾದ ರಾಜಮಣಿ
ವಾರವನಿತೆಯೆ ಸತ್ಯ. ಆದರಾ ಹೆಣ್ಣಿನದು
ಏನು ಗಾಂಭೀರ್ಯ! ಏನಾನೋಟ! ಆ ನಿಲುವು!
ಗರತಿಯರ ಗರತಿಯಂತಿಹಳು ಎನಿಸಿತು ನನಗೆ.
ಇಂತು ನಾನಿರೆ ಆಕೆ ಬಾಗಿಲೆಡೆಗೈತಂದು
ನನ್ನನಾವುದೊ ಒಂದು ತೆರದ ನಗೆ ನೋಟದಲಿ
ನೋಡುತಿದ್ದಳು. ಚೆನ್ನ ಹೊರಹೊರಟ. ರಾಜಮಣಿ
ಒಳಗೆ ಬಂದಳು. ಮಂಚದೆಡೆಯ ಸಾರುತ ನನ್ನ
ದಿಟ್ಟಿಸುತೆ ಅಂತೆ ನಿಂತಳು. ಎಷ್ಟೊ ಹೊತ್ತಿಂತು
ನೋಡುತಿದ್ದವಳು ಕೊನೆಯಲಿ ತನ್ನ ಕೈಯಿಂದ
ನನ್ನ ಗಲ್ಲವನು ಸೋಕಿದಳು.

ಅಷ್ಟೇ ನನಗೆ
ಈಗ ನೆನವಿಹುದು. ಗಲ್ಲವ ಬೆರಳು ಸೋಕಿತು;
ಸೋಕಿನಾನಂದದುಬ್ಬರಕೆ ಒಡಲಿನ ಪರಿವೆ

ಮರೆತು ಹೋಯಿತು; ಸುಖಕೆ ಜೀವಾಳ ಸೊಕ್ಕಿತು.
ಪಾರಿಜಾತದ ಹೂವ ಮೆದು ; ತಾಯ ಎದೆಹಾಲ
ನಸುಬಿಸುಪು ; ಕರುವನೆಕ್ಕುವ ಹಸುವ ನಾಲಗೆಯ
ನೇಹ ; ಬಹುಮಾತಿಂದ ಏನು, ಕಣ್ಣಲಿ ಮಿನುಗಿ
ಮಾಯವಾಡುತಲಿರುವ ಇಸಿಯೊಲವು ಎದೆತುಂಬಿ
ನಳಿತೋಳಿನಲಿ ಹರಿದು ಬೆರಳಿಂದ ಸೂಸಿತೆನೆ,
ಹೇಳಲಾಗದ ಒಂದು ಆನಂದ. ಅತಿಬೆಳಕ
ಕಣ್ಣು ತಡೆಯದು ; ತುಂಬಸೀಯನೀನಾಲಗೆ
ತಡೆಯಲಾರದು. ಮೆಯ್ಯ ಬಲಕೆಲ್ಲ ಮಿತಿಉಂಟು.
ನಮ್ಮೊಡಲು ನಡೆವ ಈ ಲೋಕವನು ಮಿಾರಿರುವ
ಬೇರೊಂದು ಎತ್ತರದ ಬಾಳ ಸೋಕಿನ ಸುಖವ
ತಡೆಯಲಾರದೆ ಹೋಯಿತೆನ್ನಮೆಯ್. ಆ ಸುಖ,
ಸುಖವಲ್ಲ, ನೋವೆ, ಎಂಬಂತೆ ಆ ಕ್ಷಣದಲ್ಲಿ
ಯಾತನೆಯೆ ಆಗಿ ಎನ್ನೊಡಲರಿವು ತಪ್ಪಿತು.

ಮತ್ತೆ ನೆನವರಿವ ಹೊತ್ತಿಗೆ ನಮ್ಮ ಹೊಸ ಊರು
ಬಾರಕೂರಲಿ ನಮ್ಮ ಭಟ್ಟರಂಗಳದಲ್ಲಿ
ಮಲಗಿದ್ದೆ ನಾನು. ಇಲ್ಲಿಗೆ ಬಂದೆ ಎಂತು ನಾ
ಎಂದು ಕೇಳಲು ಮನೆಯಭಟ್ಟ, ಹಳೆಯೂರ ಬಳಿ
ತೋಪಿನಲಿ ನೀವು ಮರದಡಿಗೆ ಒರಗಿರೆ ನಿಮ್ಮ
ಹಾರಾಡಿ ಮಾದ ಉದಯದಲಿ ನೋಡುತ ಅಂಜಿ
ಓಡಿಬಂದೂರಿನಲಿ ಹೇಳಿದನು, ನಾವೆಲ್ಲ
ವೈದ್ಯರಿಗೆ ಏನಾಯ್ತು ಎಂದು ಅಲ್ಲಿಗೆ ಬಂದು
ಕರೆದುತಂದೆವು, ಎಂದು ಹೇಳಿದರು. ಊರಾತ
ಮುದುಕಯ್ಯ ಒಬ್ಬ, ಚೈತ್ರದ ಹುಣ್ಣಿಮೆಯ ಸಂಜೆ
ಚಂದ್ರ ಹುಟ್ಟುವ ಹೊತ್ತು ಹಳೆ ಊರ ಬಯಲಿನಲಿ
ಸಿಕ್ಕಿದವರಿಗೆ ಇಂತು ಏನಾದರೊಂದಹುದು,

ಎಂದು ಹೇಳಿದರು. ಆ ದಿನ ನನಗೆ ಬಹು ಹಸಿವು ; ಅಂತೆ ಬಹುದಾಹ. ಸುಮ್ಮನೆ ಮಲಗಿ ಬಿದ್ದಿದ್ದು ಮಾರನೆಯ ದಿವಸ ಎದ್ದೆನು. ಬಾರಕೂರ ಕತೆ ಬಹುಜನಕೆ ಬರಿಯ ಕತೆ, ನನಗೆ ನಿಜದನುಭವ.

### ಹಿನ್ನುಡಿ

ಇಂತು ವೈದ್ಯರು ತಮ್ಮ ಅನುಭವದ ಸಂಗತಿಯ ಮುಗಿಸಿರಲು ನಮ್ಮ ತಾತದಿರು, ಆ ವ್ಯಾಪಾರಿ ನಿನಗೆ ಆಮೇಲೆ ಸಿಕ್ಕಲೆ ಇಲ್ಲ ಅಲ್ಲವೆ, ಎಂದು ಕೇಳಿದರು. ವೈದ್ಯರು ಅದಕೆ, "ಆ ರಾತ್ರಿ ಯಾವನೋ ಒಬ್ಬ ಕೈಯಲಿ ಒಂದು ಪೆಟ್ಟಿಗೆಯ ಹಿಡಿದಿದ್ದವನು ಬಾರಕೂರ ಹೊಳೆಯೆಡೆ ಬಂದು ದೋಣಿಯವನನು ತನ್ನ ಆ ಕಡೆಗೆ ಕರೆದೊಯ್ಯು ಎಂದು ಕೇಳಿದನೆಂದು, ಅಂಬಿಗರು, ಸರಿಹೊತ್ತು, ನೀರು ನಿದ್ರಿಸುತಿಹುದು, ಈ ವೇಳೆಯಲಿ ಬೇಡ ಕೋಳಿ ಕೂಗಿದ ಒಡನೆ ದಾಟಿಸುವ, ಅದುವರೆಗೆ ತಡೆಯಿರೆಂದನು ಎಂದು, ಕೇಳಿದೆನು. ಹಳೆಯೂರ ಕನಸ ಬಾಳಲಿ ಬೆರೆತು ಹೊರಗೆ ಬೀಳುವ ಜನಕೆ ಏನಾದರೊಂದು ಕೇಡಹುದೆಂದು ಹೇಳುವರು. ಅವನು ಮೊದಲನೆಸಾರಿ ಆ ಹೆಣ್ಣ ಮನೆಯಲ್ಲಿ ತಂಗಿ ನನ್ನಂತೆಯೇ ಅದು ಕನಸ ಊರೆಂದು ತಿಳಿಯಲಾರದೆ ಇದ್ದು ಪೆಟ್ಟಿಗೆಯ ಬದಿಗಿರಿಸಿ ತಾನೊಂದುಕಡೆ ಮಲಗಿ ನಿದ್ದೆ ಮಾಡಿರಬೇಕು. ಬೆಳಗಾಗ ಎದ್ದನೇ ಅವನ ಮೈಮೇಲಿದ್ದ ಬಟ್ಟೆಬರೆ ಹೊರತಾಗಿ ಉಳಿದುದೆಲ್ಲವು ಇರುಳ ವೈಭವದ ಜೊತೆಗೆ ಮರೆಯಾಗಿ ಹೋಯಿತು. ಇವನ ಪೆಟ್ಟಿಗೆಗು ಅದುವೆ ಗತಿಯಾಗಿತ್ತು. ಅದರಲ್ಲಿ ವಜ್ರವೋ ವೈಡೂರ್ಯವೋ ಮುತ್ತು ಹವಳವೋ

ಏನಿತ್ತೊ ಎಲ್ಲವೂ ಹೋಗಿತ್ತು. ಬಡಪಾಯಿ
ಹನ್ನೆರಡು ವರುಷ ಕಾದಿದ್ದು ಮುರಳಿಯು ಊರು
ಕನಸ ಬಾಳುವೆಯು ಬಾಳುವ ದಿವಸ ಆ ಸ್ಥಳಕೆ
ಬಂದು ಆ ಮನೆಯ ನೆಪ್ಪನೆ ಹಿಡಿದು ಪೆಟ್ಟಿಗೆಯು
ಮತ್ತೆ ಪಡೆದಿರಬೇಕು. ಹಿಂದೆ ಬೇರೆಯ ಜನಕೆ
ಇಂತಾದುದುಂಟೆಂದು ಹೇಳಿದೆನೆ" ಎಂದರು.
ನಮ್ಮ ತಾತದಿರು, ನಿನಗಾದುದನು ಆಮೇಲೆ
ಕೆಲಮಂದಿ ಅಪ್ಪು ತಿಂದುದರಿಂದ ಆಯ್ತೆಂದು
ಹೇಳಿದರು ಅಲ್ಲವೆ, ಎಂದು ಕೇಳಿದರು. "ಊಂ,
ಬುದ್ಧಿ ಇಲ್ಲದ ಮಂದಿ ಹೇಳಿದರು. ಆ ದಿವಸ
ಗೌರಜ್ಜಿ ಎಲೆ ಸುರುಳಿಯನು ಸುತ್ತಿಕೊಡುವುದಕೆ
ಕಸ್ತೂರಿ ಮಾತ್ರೆಯನು ಕೇಳಿದಳು. ಚೀಲದಲಿ
ಕೆಂಪು ಸಂಪುಟದಲ್ಲಿ ಇದೆ, ತೆಗೆದುಕೋ, ಎಂದು
ನಾ ಹೇಳಿದೆನು. ಚೀಲದಲಿ ಕೆಂಪುಸಂಪುಟ
ಎರುಡು ಇದ್ದವು. ಒಂದರಲಿ ಅಪೀಮಿನ ಮಾತ್ರೆ
ಒಂದರಲಿ ಕಸ್ತೂರಿ ಮಾತ್ರೆ ಇದ್ದವು. ಅವಳು
ಕಸ್ತೂರಿ ಮಾತ್ರೆಗಳ ಸಂಪುಟಕೆ ಬದಲಾಗಿ
ಇನ್ನೊಂದು ಸಂಪುಟವ ತೆಗೆದಪೀಮಿನ ಮಾತ್ರೆ
ಎರಡ ಎಲೆಸುರುಳಿಯಲಿ ಸೇರಿಸಿದಳೆಂದಿವರು
ಹೇಳಿದರು. ಎರಡು ಸಂಪುಟ ಇಹುದು ಎಂಬುದನು
ಆ ಕ್ಷಣಕೆ ನಾನು ಮರೆತುದು ಉಂಟು. ಅವಳಿಗೂ
ಅದರ ಅರಿವಿಲ್ಲ ದಿಟ. ನಾನೆ ಹೇಳಿದೆ ನೋಡು,
ಕಸ್ತೂರಿಮಾತ್ರೆ ಇದ್ದಂತೆ ಹತ್ತೂ ಇತ್ತು.
ಆದರಿಂದ ಈ ಬುದ್ಧಿವಂತ ಜನ ಗೌರಜ್ಜಿ
ಕೈತಪ್ಪಿ ಆ ಅಪೀಮಿನ ಸಂಪುಟವನೆತ್ತಿ
ಸುರುಳಿಯಲಿ ಆ ಮಾತ್ರೆ ಇರಿಸಿದಳು ಎಂದರು.
ಇವರೇನಪೀಮು ಮಾತ್ರೆಯನೆಣಿಸಿ ನೋಡಿದರೆ?

ಆ ಮಾತ್ರೆ ಎಷ್ಟಿತ್ತೋ, ಅದನು ನಾನೂ ಕಾಣೆ.
ನಾನು ಕಂಡುದು ಅಪೀಮಿನ ಕನಸು ಎಂದರೂ
ಆ ಊರು ಕೇರಿ ಆ ಮಂದಿ ಆ ಮನೆ ಆಳು
ಎಲ್ಲವೂ ಆ ಸ್ಥಳಕೆ ಸರಿಯಾಗಿ ಬಂದರೇ
ಅದು ಎಂತು ? ವಾರವನಿತೆಯನು ಕಂಡೆನು ಎಂತು ?
ಅವಳ ಆ ಹೆಸರೇನು, ಚೆಲುವೇನು, ನಯವೇನು.
ಇದು ಎಲ್ಲವೂ ಅಪೀಮಿನ ಅಮಲೆ ?" ಎಂದರು.
ಎಲ್ಲಾದರೂ ಉಂಟೆ ಎನೆ ನಮ್ಮ ತಾತದಿರು,
ಜೊತೆಗಿದ್ದ ಮುದುಕರೂ ಉಂಟೆ ಎಂದರು. ವೈದ್ಯ
ಗಣಪೈಗಳೆನ್ನಕಡೆ ನೋಡಿ, ಈ ಹುಡುಗನಿಗೆ
ನಾನು ಹೇಳಿದ ಮಾತು ಏನು ತಿಳಿಯಿತೊ ಕಾಣೆ,
ಎಂದು ಹೇಳಿದರು. ತಾತದಿರು, ಏತರ ಹುಡುಗ,
ಎಂಟುವರ್ಷದ ಹೈದನಿಗೆ ಇಂತ ಕತೆ ಮಾತು
ತಿಳಿಯದಿರುವುದೆ, ಎಂದರು. ವೈದ್ಯ ಮುದುಕಯ್ಯ
ನನಗೆ ಸಕ್ಕರೆಯ ಚೂರೊಂದ ನೀಡುತ, ಹೋಗಿ
ಈ ಡಬ್ಬಿಯಲಿ ಸುಣ್ಣ ತುಂಬಿತಾ ಎಂದೊಂದು
ಡಬ್ಬಿಯನು ತೋರಿದರು. ಸುಣ್ಣವನು ತಂದಿತ್ತು
ನಾನು ಜೊತೆಯವರೊಡನೆ ಆಟವಾಡಲು ಹೋದೆ.

* * *

ಕತೆ ಮುಗಿಯೆ ವೆಂಕಪ್ಪ, " ಸೋಜಿಗದ ಹೊಳಲಕತೆ
ತುಂಬ ಸೋಜಿಗದ ಕತೆಯಾಗಿದೆ. ಇದನೊಮ್ಮೆ
ನಮ್ಮ ಉಗ್ರಾಣರಾಯರು ಹೇಳಿದರು. ಆಗ
ನಾನು ಹಿರಿಯಣ್ಣ ಕೇಳಿದೆವು. ಜನರಲಿ ಏನು,
ಹನ್ನೆರಡು ವರ್ಷದಲಿ ಒಮ್ಮೆ ಆ ಹಾಳೂರು
ಮರಳಿ ಬಾಳುವುದೆಂಬ ತಿಳಿವಳಿಕೆ ಇದೆ, ಅದನು
ಅವರು ಬಹು ಚೆನ್ನಾಗಿ ತಿಳಿಸಿದರು. ಅದರೊಡನೆ
ಮಂಗೇಶ, ಮುದಿಚೆಲುವ ವೈದ್ಯನನು, ಗೌರಜ್ಜಿ

ಶಾಪವನು ಕೊಟ್ಟ ಸನ್ಯಾಸಿ, ಗುಣವತಿರಾಣಿ,
ಮಂಜುನಾಥೇಶ್ವರನ ಮಂದಿರ, ರಾಜಮಣಿ,
ಈ ಎಲ್ಲ ವಿವರವನು ಬೆರಸಿ ಕತೆ ಹೇಳಿಹನು.
ಒಂದೊಂದು ಕತೆಗು ಕತೆ ಚೆನ್ನವಾಗಿದೆ ಎಂದು
ಹೇಳಲೇತಕೆ? ಗೆಳೆಯನೊರೆವ ಕತೆ ಚೆನ್ನವೆ.
ವೈದ್ಯನಾಡುವ ಮಾತು ಅಲ್ಲಲ್ಲಿ ವೈದ್ಯನದೊ
ಕತೆಯೊರೆವ ಗೆಳೆಯನದೊ ಎಂಬೊಂದು ಸಂದೇಹ
ನನಗೆ ತೋರಿತು. ಗೆಳೆಯನೇ ವೈದ್ಯನಾಗಿರಲು
ಇದರೊಳಾಶ್ಚರವೇನು? ಆ ಮಾತಿರಲಿ.
ಲೋಕದಲಿ ಚೆಲುವು ಕಣ್ಣೆದುರು ಹೊಳೆ ಹರಿಯುತಿದೆ.
ಬಾಳದುಮ್ಮಾನದಲಿ ಸಿಲುಕಿ ಮನುಜನ ಜೀವ
ಹೊಳೆ ಹರಿವ ಚೆಲುವ ನೋಡುವ ಮನಸು ಇಲ್ಲದಿದೆ:
ಅರಳಿಟ್ಟು ದೊರೆಯಲಿಲ್ಲೆಂಬ ಕೋಪಕೆ ಕೂಸು
ಆಟದಾನೆಯನೆಸೆದು ಅಳುತಕುಳಿತಿರುವಂತೆ.
ಹಸಿವಿಲ್ಲದಿದ್ದರೂ ಅರಳಿಟ್ಟಿಗಳುತಿಹನು
ಎಂದು ಕೂಸಿನ ಅಣ್ಣ ಆಟದಾನೆಯನೆತ್ತಿ
ಅವನ ಕರೆವಂತೆ ಈ ಕತೆ ಜಗದ ಮಾಯೆಯನು
ನೋಡು ಬಾ ಎಂದು ನಮ್ಮಂತವರ ಕರೆಯುವುದು.
ಮತ್ತೊಂದು ಮಾತು. ಹನ್ನೆರಡು ವರ್ಷಕೆ ಒಮ್ಮೆ
ಕಂಡು ಮರೆಯುವ ಊರು ಮಾನವನ ಇಹಜನ್ಮ
ಎಂದರೂ ಒಪ್ಪುವುದು. ಹಾರಾಡಿಯನು ಬಿಟ್ಟು
ಬಾರಕೂರಿಗೆ ನಡೆದ ವೈದ್ಯ ಕನಸಿನ ಊರ
ಕಂಡು ಮರುಳಾದಂತೆ, ಈ ಬಾಳ ಮೀರಿರುವ
ಬೇರೆ ಬಾಳಲಿ ದಾರಿ ನಡೆವಂದು ನಮ್ಮಾತ್ಮ,
ಈ ಲೋಕವನು ಹೊಕ್ಕು, ಇಲ್ಲೊಂದು ಜಗವಿತ್ತೆ,
ಎಂದು ಅಚ್ಚರಿಗೊಳ್ಳುವುದು. ಉತ್ತರ ಕ್ಷಣವೆ
ಇದನೊಪ್ಪಿಕೊಂಡು ನಡೆವುದು. ಒಮ್ಮೆ ರತ್ನವನು

ಕಳೆದುಕೊಂಬುದು ; ಒಮ್ಮೆ ನಲ್ಲಿಯನು ಕಾಂಬುದು.
ನಷ್ಟವನು ಕಂಡುಕೊಳ್ಳುವ ವೇಳೆ ಜಗವಿಲ್ಲ ;
ಸುಖಕೆ ಮನವನು ತೆತ್ತು ಸೋತಂದು ಜಗವಿಲ್ಲ ;
ಜಗವೆಲ್ಲಿ? ಇನ್ನೊಂದು ಮಾತು ಈ ಬಾಳಿನಲಿ
ನಮಗಿರುವ ಕರಣ ಈ ಜಗದ ಸುಖದುಃಖವನು
ಸಹಿಸುವರೆ ಬೇಕೆಷ್ಟು ಅಷ್ಟೆ ಬಲವಾಗಿಹವು ;
ಈ ಬಲವ ಮಿಕ್ಕ ಸುಖ ಕಷ್ಟಬರೆ ಸೋಲುವುವು ;
ಸೋತುದೆ ಅಪಸ್ಮಾರದೊಳಗಾಳುವುವು. ಇದೇ
ಕಾರಣವೆ ಈ ಬಾಳ ಅನುಭವಕೆ ಹಿರಿದಾದ
ಬೇರೊಂದು ಅನುಭವದ ಸಮಯಬರೆ ಈ ಜೀವ
ದೇಹವನು ತೊರೆಯುವುದು. ಮಂಗೇಶ ಈ ತೆರದ
ಅರ್ಥವನು ಇಟ್ಟು ಕತೆಯೊರೆದನೋ, ಇಲ್ಲವೊ,
ನನಗೇನೊ ಈ ಭಾವ ತೋರುತಿವೆ" ಎಂದರು.
ಟೀಕೆ ಮುಗಿದಿರೆ ರಾಮು, ನಾಳೆ ಕತೆಹೇಳುವುದು
ದತ್ತೋಜಿ, ಎಂದು ಸಾರಿದನು. ಚೌತಿಯ ದಿವಸ
ಆ ಗೆಳೆಯ ಒರೆದ ಕತೆ ಹರಿಕಥೆಗಳಲಿ ಮಧ್ಯೆ
ನಾಮಮಹಿಮೆಯ ಕುರಿತು ಬಹತೆರದ ಕಿರುಗತೆ.
ಅದು ಮುಂದೆ ಇದೆ ; ಅದನು ಅಂತೆಂದೆ ಕರೆದಿದೆ.

# ನಾಮ ಮಹಿಮೆ

ದೇವಿ ರಾಘವನರಸಿ ಜನಕನಂದಿನಿ ಸೀತೆ
ಲಂಕೆಯಲಿ ದಶಮುಖನ ಅರಮನೆಯ ಮಧ್ಯದಲಿ
ರಾಜೋಪವನದಿ ಸೆರೆಯಾಗಿ ದುಃಖದೊಳಿದ್ದ
ಸಂಗತಿಯ ಹನುಮಂತ ಎಂದು ತಂದರುಹಿದನೊ,
ಅಂದೆ ವಾನರವಂಶದಧಿನಾಥ ಸುಗ್ರೀವ
ಆ ಮೊದಲೆ ನೆರೆದಿದ್ದ ಕಪಿ ಋಕ್ಷ ಸೇನೆಗಳ
ಯೂಥಪರ ಕುರಿತು, ದಳವನು ದಕ್ಷಿಣಾಂಬುಧಿಯ
ತಡಿಗೆ ನಡೆಸಿರಿ, ಎಂದು ಆಣತಿಯನಿತ್ತನು.
ಔತಣವನುಣ ಹೊರಟ ಭೂದೇವರೋಳಿಯೋ
ಹಬ್ಬದಲಿ ಆಡ ಹೊರಟಿಹ ಬಾಲಗಡಣವೋ
ಎಂಬಂತೆ ಆ ಚಪಲ ದಳವೆಲ್ಲ ಭೋಯೆಂದು
ಉತ್ಸಾಹದಾವೇಶದಿಂದ ಮೊರೆದೆದ್ದು ಕೆಲ
ದಿವಸದಲೆ ಸಾಗರದ ತಟವನೈದಿತು. ಜಲಧಿ,
ದಿನ ವರುಷ ತನ್ನ ಭೋರ್ಗರೆ ಒಂದರಿಂದಲೇ
ನಭದಾಳವನು ತುಂಬಿ ಆದರ ಸೆಲೆಯನೆ ಕೇಳಿ,
ತಾನು ಒಂದೇ ಉಂಟು ಮೂಲೋಕವಿಲ್ಲೆಂಬ
ಭಾವ ತೆರೆತೆರೆಯಾಗಿ ನಲಿಯೆ, ಅಭಿಮಾನದಲಿ
ಓಲಾಡುತಿರುತ, ಒಮ್ಮೆಗೆ ದೂರದಿಂದ ಈ
ಋಕ್ಷಬಲ ವಾನರಾನೀಕಗಳ ನಿರ್ಘೋಷ
ಬಳಿಸಾರಿ ಬರೆ, ಪ್ರಳಯ ಕಾಲವೈತಂದುದೋ
ನಾನು ಮರೆತೆನೆ ಏನು ಎಂದೆನಸೊ ಚಿಂತೆಯಲಿ
ಎಂಬಂತೆ ನಿಂತಿಹುದು. ಶ್ರೀರಾಮ ಸುಗ್ರೀವ
ಸೌಮಿತ್ರಿ ಹನುಮದಂಗದ ಜಾಂಬವಂತ ನಳ
ಮೊದಲಾಗಿ ಬಲವೆಲ್ಲ ಬಂದದರ ವೇಲೆಯಲಿ
ಪಾಳೆಯವ ಹಾಕಿ ನಿಂತಿತು. ತನ್ನ ಕಾರ್ಯದಲಿ

ಹೊರಟಿರುವ ದಳಗಳಿಗೆ ದಾರಿಯನು ನೀಡೆಂದು
ರಘುರಾಮ ಅಂಭೋಧಿಯನು ಬೇಡಿಕೊಂಡುದನು,
ಇಕ್ಷ್ವಾಕುಕುಲಮೌಳಿಮಣಿ ಗೆಯ್ದ ಪ್ರಾರ್ಥನೆಗೆ
ಸಾಗರನು ಕಿವಿಗೊಡದೆ ಮೋದಂಡವಾಗಿರಲು
ದಾಶರಥಿ ಇವನ ಅವಿನಯಕೆ ತಗುವಂದದಲಿ
ಶಿಕ್ಷೆಗೆಯ್ವರೆ ತನ್ನ ತ್ರಿಭುವನ ಸುವಿಖ್ಯಾತ
ಕೋದಂಡವನು ಕೊಂಡು ಬಾಣವನು ತೊಟ್ಟುದನು,
ಆಗ ಭಯದಲಿ ಸರಿತ್ಪತಿ ವೇಗದಲಿ ಬಂದು
ರಾಮಚಂದ್ರನ ಶರಣು ಹೊಕ್ಕು ಕಪಿಕುಲಮುಖ್ಯ
ನಳನಿಂದ ಸೇತುವನು ನಿರ್ಮಿಸಿರಿ ಎಂದುದನು,
ನಳ ಅಂತೆ ಸೇತುವನು ನಿರ್ಮಿಸಿದನೆಂಬುದನು,
ರಾಮಾಯಣದಲಿ ಹೇಳಿಹುದ ಬಲ್ಲೆವು ಎಲ್ಲ.
ನಳ ಆಗ ಸೇತುನಿರ್ಮಾಣದಲಿ ತೊಡಗಿದನು.
ಕೆಲಸ ನಡೆಯುತಿ ಸೇತು ಬೆಳೆಯುತಿರೆ ಶ್ರೀರಾಮ,
ತಮ್ಮ ಸೌಮಿತ್ರಿಯನು, ಕಟ್ಟಡದ ಕೆಲಸದಲಿ
ನಳ ಮಾಡುವುದು ಏನು, ಎಂದು ಕೇಳಿದನಹುದು.
ಸೌಮಿತ್ರಿ, "ಶೈಲ ಸನ್ನಿಭ ಋಕ್ಷವಾನರರು,
ಗವಯ ಮೈನ್ದ ದ್ವಿವಿದ ಗಜ ಗವಾಕ್ಷ ಸುಬಾಹು,
ಸೂರ್ಯಾಕ್ಷ ಶರಭ ಸಂಪಾತಿ ವಿದ್ಯುನ್ಮಾಲಿ,
ಕುಮುದ ತಾರ ಸುಷೇಣ ಹರಿ ಸುಪಾಟಲ ನೀಲ,
ದಶನಾಗ ಶತನಾಗಬಲರು ಎಲ್ಲೆಡೆಯಿಂದ
ಶೈಲಖಂಡಗಳ ತಂದಿದಿರಿನಲಿ ಕೆಡಹುವರು.
ನಳ ಅವುಗಳನು ಎತ್ತಿ ತನ್ನ ತರ್ಜನಿಯಿಂದ
ಏನೊ ಗುರುತನು ಮಾಡಿ, ನೀರಿಗೆಸೆಯಿರಿ ಇವನು,
ಎಂದು ಹೇಳುವನು. ಬದಿಗಿಹ ಋಕ್ಷವಾನರರು
ಅಂತಪ್ಪ ಶೈಲ ಖಂಡಗಳ ಮುಂದಕೆ ದೂಡಿ
ಸಾಗರದ ತೆರೆಗೆ ಹಾಕುವರು. ಆ ಬಂಡೆಗಳು

ಒಂದು ಒಂದಕೆ ಅಂಟಿ ನೀರಿನಲಿ ತೇಲುವುವು.
ಇಂತು ಮುಂದರಿಯುತಿಹ ಸೇತುವಿನ ಮೇಗಡೆಗೆ
ಮರಮರಳಿ ಶೈಲಖಂಡಗಳ ತಂದೆಸೆಯುವರು ;
ಜನ ಬಂದು ನಿಲ್ಲುವರು ; ಎಲ್ಲ ಭಾರವ ಹೊತ್ತು
ಮೊದಲು ಹಾಕಿದ ಖಂಡ ತೇಲುತಲೆ ನಿಂತಿಹವು"
ಎಂದು ಹೇಳಿದನು. ಶ್ರೀರಾಮ "ನಳ ಏನನೋ
ಗುರುತು ಮಾಡುವನೆ, ಅದರಿಂದ ಶೈಲದ ಖಂಡ
ತೇಲುತಿರಬೇಕು, ಅಲ್ಲವೆ ?" ಎಂದ. ಸೌಮಿತ್ರಿ
"ಅಹುದಂತೆ. ನಳ ಅಂತೆ ಹೇಳಿದನು" ಎಂದನು.
ರಾಮಚಂದ್ರನಿಗೆ ಸಂತಸ, ಜೊತೆಗೆ ಒಂದಿನಿಸು
ಬಿಸವಂದ : ಯಾವ ಗುರುತನು ತಳೆದ ಬಲದಿಂದ
ಕಲ್ಲು ನೀರಲಿ ತೇಲಬಹುದೆಂದು. ಅವನಂತೆ
ತಮ್ಮನನು, "ನಳ ಕಲ್ಲುಗಳ ಮೇಲೆ ಬರೆವ ಈ
ಅಚ್ಚರಿಯ ಬರಹವೇನೆಂದು ಜನ ಅರಿಯದೋ"
ಎಂದು ಕೇಳಿದನು. ಲಕ್ಷ್ಮಣ "ನನಗೆ ತಿಳಿಯದು ;
ಬಹುಮಂದಿ ಅದ ಕುರಿತು ಚಿಂತಿಸುತಲಿಲ್ಲೆಂದು
ತೋರುತಿದೆ" ಎಂದು ಮರುನುಡಿದನು. ಹನುಮನಾಗ
ಬಳಿಗೆ ಬಂದನು. ರಾಮ ಹನುಮಂತನನು ಕುರಿತು
"ನಳ ಏನನೋ ಬರೆದು ಕಲ್ಲ ನೀರಿನಲಿರಿಸೆ
ಅದು ತೇಲುತಿಹುದಂತೆ ; ಅಹುದೆ ?" ಎಂದನು. ಆತ,
ಅಹುದು ಪ್ರಭುವೇ, ಎಂದು ಹೇಳಿದನು. ಶ್ರೀರಾಮ
"ಅವನ ಆ ಬರಹ ಏನು" ಎನಲು, ಹನುಮಂತ
"ಅದು ಮರೆಯ ಒಂದು ನುಡಿ" ಎಂದನು. ರಘೂದ್ವಹನ
ಕೌತುಕವ ಮರೆಯನುಡಿಯೆಂಬ ನುಡಿ ಚುಚ್ಚಿತು.
ಅವನು "ನಮಗದ ತಿಳುಹಬಹುದೊ" ಎಂದನು. "ಆಳು
ಅರಸನಿಗೆ ತಿಳಿಸಬಾರದ ಮರೆಯೆ ಲೋಕದಲಿ"
ಎಂದು ಹನುಮಂತ ನುಡಿದನು. "ಏನು ಆ ಬರಹ ?"

"ರಾಮ ಎಂದೆನುತ ಪ್ರಭುವಿನ ಹೆಸರಿನಕ್ಕರವ
ಕಲ್ಲ ಮೇಗಡೆ ಗುರುತಿಸುವನು". "ನಮ್ಮದು ಹೆಸರ?"
"ಅಹುದು ಪ್ರಭುವೇ". ರಾಮನಚ್ಚರಿಗೆ ಕೊನೆಯಿಲ್ಲ.
ಆದರೂ ಅವನು ಮುಂದಕೆ ಯಾವ ಮಾತನೂ
ಆಡದದನಲ್ಲಿಗೇ ನಿಲಿಸಿದನು.

ಆ ಸಂಜೆ

ಈ ಅಣ್ಣ ತಮ್ಮದಿರು ಸುಗ್ರೀವ ಅಂಗದರ
ಜೊತೆಯಲ್ಲಿ ತಮ್ಮ ವನವಾಸದಾಹಾರವನು,
ಜೊತೆಗೆ ವಾನರರ ಮೆಚ್ಚಿಗೆಯ ಕಿತ್ತಿಳೆ, ಜೇನು,
ಹಲಸು, ಪಾಕದಲಿ ನೆನದಿದ್ದ ಮಾವಿನ ಹಣ್ಣು,
ಮೊದಲಾದ ಊಟವನು, ಬೆರಸಿ ಆರೋಗಣೆಯ
ಮುಗಿಸಿ ಕುಟಜದ ಮುಂದೆ ಕುಳಿತಿಹರು. ಸುಗ್ರೀವ,
ಅಗ್ನಿಸಾಕ್ಷಿಯಲಿ ರಾಮನ ಸಖ್ಯವನು ಬೆಳೆಸಿ,
ದೇವಿಯನು ಬಿಡಿಸಿತಹೆನೆಂದು ಶಪಥವಮಾಡಿ,
ಜೊತೆಯೊಳೇ ನಡೆದು ಇನಿತರಲಿ ಆ ಒಡೆಯನಿಗೆ
ಲಕ್ಷ್ಮಣನೊ ಭರತನೋ ಶತ್ರುಘ್ನನೋ ಎಂಬ
ತೆರನೆ ತಾನೂ ಒಬ್ಬ ತಮ್ಮನೇ ಆಗಿಹನು.
ಫಾಲ್ಗುಣದ ಹುಣ್ಣಿಮೆಯ ಚಂದ್ರ ಚೆಲುವನು ತೊಟ್ಟು
ತನ್ನ ಅಂದಿನ ತುಂಬು ಮುಖದ ನಗೆಯನು ನಕ್ಕು
ಪದುಳದಲಿ ನೀಲನಿರ್ಮಲ ಗಗನದಂಗಳವ
ತೀವಿ ಸಾಗರದಲೆಯ ಮೇಲೆ, ವೇಲೆಯಮರಳ
ಮೇಲೆ, ಮಂದರ ಪರ್ವತದ ತಪ್ಪಲಿನ ಹೂತ
ಕಾನನದ ಮೇಲೆ, ಸಾಲಾಗಿ ಕಂಗೊಳಿಸುತಿಹ
ತಗ್ಗು ಎತ್ತರದ ಶೃಂಗದ ಮೇಲೆ, ಚಿಕ್ಕಾದ
ತಣ್ಬೆಳಕ ಸಂತಸವ ಸುರಿದು, ರಾಮನ ಮನದ
ಬೇಗೆಯನು ಕಳೆದು ಸಂತಯಿಸಲೆಳಸಿದನೊ ಎನೆ
ಅಕಳಂಕ ಕಾಂತಿಯಲಿ ತೊಳಗಿಹನು. ವನರಾಜಿ,

ಪೂರ್ಣ ಚಂದ್ರನ ಪ್ರೇಮಪೂರ್ಣ ಭಾಸುರಹಾಸ
ಪೀಯೂಷ ಸೇಚನವ ತಳೆದು, ಮಸಗಿದ ಸುಖದಿ
ಸುಯ್ವ ನಸುಬಿಸುವ ಸುಯ್ಲವೊಲೊಮ್ಮೆ, ರಾಘವನ
ವಿರಹ ಶೋಕದಲಿ ಅನುತಪಿಪಂತೆ ತೋರುತಿಹ
ಎನಸೊ ಹೆಚ್ಚಿನ ಬಿಸುಪಸುಯ್ಲ ತೆರದಿಂದೊಮ್ಮೆ,
ಮಾಮಲರ ಕಂಪು ಬೆರಸಿದ ಉಸಿರಸೂಸುತಿದೆ.
ತುಂಬು ತಿಂಗಳ ಚಂದ್ರ, ಮಲರ ಕಂಪಿನ ಗಾಳಿ
ರಾಘವನ ಬೇನೆಯನು ಕೊರಗೆಯ್ವುದೇತರದು,
ಬೆಳಸಿದವು: ಬಿದ್ದು ನೊಂದಳುತಿರುವ ಕಂದನಿಗೆ
ಸಾಂತ್ವನವ ನುಡಿವ ತಾಯಕ್ಕರದಿರ ನುಡಿಯಂತೆ.
ಸಾಂತ್ವನದ ನುಡಿಯಿಂದೆ ನೋವು ಮಾಣದು ಗಡಾ.
ಮನಕೆ ಸುಖವೀವ ಎನಿತೋ ಒಲವು; ಇನ್ನೆನಿತೊ
ವಸ್ತು; ಆದೊಡೆಯು ಈ ಬೇನೆ. ಕಂದನ ದುಃಖ
ಇದರಿಂದ ಮತ್ತು ಉಕ್ಕುವುದು. ರಾಮನಮನದ
ಬೇನೆ ಆ ಫಾಲ್ಗುಣದ ಇರುಳು ಚಂದ್ರನ ಜೊತೆಗೆ
ಪೂರ್ಣತೆಯ ಹೊಂದಿ ಇವನಾಂತರ್ಯವನು ತುಂಬಿ
ಸರ್ವಾಂಗವನು ತಪಿಸಿ ಹೊರಸೂಸಿ ಲೋಕವನೆ
ತೀವಿ ಕರಿನಿಡು ನಿರಾಶೆಯ ಕರಾಳಾಕೃತಿಯ
ಹೊತ್ತು ನಿಂತಿತು. ಹಿಂದೆ ಇಂತಪ್ಪ ರಾತ್ರಿಯಲಿ
ಧೃತಿಗೆಟ್ಟು ಹೃದಯದುದ್ವೇಗವನು ಸೈರಿಸದೆ
ಅಳಲಿ ಸೋದರ ಸಖರ ಮನಗಳನು ನೋಯಿಸಿದ
ಪರಿ ರಾಮಚಂದ್ರನಿಗೆ ನೆನವಿಹುದು. ಮತ್ತೊಮ್ಮೆ
ಇಂತುಗೆಯ್ವುದು ಸಲ್ಲ ಎಂದವನು ಸಖನೊಡನೆ
ಏನಾನುಮೊಂದು ಬೇರೆಯ ಸಂಗತಿಯನೊರೆವ
ಎಂಬ ಯತ್ನದಲಿ, "ಸೇತುವ ನಿರ್ಮಿಸುವತೆರನ
ಕೇಳಿದೆಯ" ಎಂದು ನುಡಿದನು. ವಾನರಾಧಿಪತಿ
ತೆರನೇನು ಎನಲು, ರಘುವರ "ಶೈಲಖಂಡದಲಿ

ನಳ ನಮ್ಮ ಹೆಸರ ಗುರುತಿಸಿ ನೀರಮೇಲಿರಿಸೆ
ಅವು ತೇಲುವುವು ಎಂಬ ನುಡಿಯು" ಎಂದನು. ಅದಕೆ
ದಿನಪಸುತ, "ಅಹುದು ತಾನಂತು ಎಸಗುವೆನೆಂದು
ನಳ ನನಗೆ ಮೊದಲೆ ತಿಳಿಸಿದನು" ಎಂದನು. ರಾಮ
"ಇದು ನಿನಗೆ ಅಚ್ಚರಿಯ ತರದೆ" ಎನೆ ಸುಗ್ರೀವ
"ನನಗೆ ಅಚ್ಚರಿಯಿಲ್ಲ. ನಿನ್ನ ಕೋಪಗೆ ಸುಗಿದು
ಪದದೆಡೆಗೆ ಬಂದು ಕೆಡೆದಂಬುಧಿಯ ಊರ್ಮಿಗಳು,
ನಿನ್ನ ಹೆಸರಿನ ಅಂಕಿತವ ತಳೆದ ಕಲ್ಗಳನು
ಉಂಡು ಜೀರ್ಣಿಸಿಕೊಂಬ ಶಕ್ತಿ ತಮಗಿಲ್ಲೆಂದು
ಕಾಣವೇ? ಆಕಲ್ಲು ತೇಲುವುದು ಅದ್ಭುತವೆ?"
ಎಂದು ಮಾರ್ನುಡಿದನಪ್ಪುದು. ಮತ್ತೆ ರಾಮನಿಗೆ
"ಎಲ ಇವರ ಪ್ರಭುಭಕ್ತಿ ಎನಿತು ದೃಢ; ನಂಬಿಕೆ
ಎನಿತು ನಿಶ್ಚಲ?" ಎಂದು ಆಶ್ಚರ್ಯ. ಆದರೂ
ಮಧ್ಯಾಹ್ನದಂತೆ ಮಾತನು ಅಲ್ಲೆ ನಿಲಿಸಿದನು.

ಒಂದು ಗಳಿಗೆಯ ಹೊತ್ತು ಸಖರಿಬ್ಬರೂ ಅಲ್ಲೆ
ಕುಳಿತಿಹರು. ಸುಗ್ರೀವ, ಈ ಸೇತು ಯಾವಂದು
ಕಟ್ಟಿಮುಗಿವುದೊ, ಎಂದು ಸೇನೆ ಲಂಕೆಯ ಮುಟ್ಟಿ
ರಾವಣನ ಬಲವ ಪುಡಿಗುಟ್ಟುವುದೊ, ಶ್ರೀರಾಮ
ಆ ರಾಕ್ಷಸನ ಕೊಂದು ಸೀತೆಯನು ಸೆರೆಬಿಡಿಸಿ
ಮರಳಿ ಸುಖಕಾಂಬುದೆಂದೋ ಎಂದು ಚಿಂತಿಸುತ,
ದೊರೆಯನೊಮ್ಮೊಮ್ಮೆ ನೋಡುವನು. ಸೀತಾನಾಥ,
ಎದುರಿನಲಿ ಅಲೆಯುತಿಹ ನೀರು ಚಂದ್ರಿಕೆಯಿಂದ
ಹೊಳೆದು ಕ್ರೀಡೆಯಲಿ ಬೆಳಕನು ಹರಹಿ ಝಲಪಿಸುತ
ಚೊಕ್ಕ ಬೆಳ್ಳಿಯ ಕಾಸಿ ತೆಳ್ಳನೆಯ ಅದುರಾಗಿ
ತಟ್ಟಿ ವೈಭವಕೆ ಹೊದೆದಿತೊ ಎಂದು ತೋರುವುದ
ನೋಡಿ, ಕೌತುಕದಿಂದ, ಇಂಥ ಚೆಲುವನು ನೋಡೆ
ಸೀತೆ ಜೊತೆಗಿಲ್ಲವಾದಳು, ಎಂದು ಮರುಗಿಹನು.

ರಾಮನಿಗೆ ಇದುವೆ ಪದ್ಧತಿ ಆಗ. ಜೇಡಹುಳ
ನೆಯ್ದ ಬಲೆಯಲಿ ಉದ್ದನೆಯ ದಾರ ಎಲ್ಲವೂ
ಜೇಡನನು ಮುಟ್ಟುವುದು; ಅಡ್ಡದೆಲ್ಲಾ ದಾರ
ಜೇಡನನು ಸುತ್ತುವುದು; ಇಂತು ಆ ದಿನಗಳಲಿ
ರಾಮನೆಲ್ಲಾ ಎಣಿಕೆಯನು ತನ್ನ ಬಳಿಗೆಳೆದು
ಇಲ್ಲ ತನ್ನನು ಸುತ್ತಿ ಬಳಸುವಂದದಿ ಮಾಡಿ,
ಜಾನಕೀವಿರಹದಷ್ಟಾವಕ್ರ ಸಂತಾಪ
ಅವನ ಬಾಳ್ವಿಯ ಮಧ್ಯದಲಿ ಬಲೆಯ ಹೆಣೆದಿತ್ತು.
ರಾವಣನ ಸೆರೆಯಾಗಿ ಸೀತೆ ತೊಳಲಿದಳೆಂತು
ಅಂತು ರಘುವರ ಅವಳ ಚಿಂತೆಯಲಿ ಸೆರೆಯಾಗಿ
ಹಗಲಿರುಳು ನಿದ್ರೆ ಎಚ್ಚರಗಳಲಿ ತೊಳಲಿದನು.
ಬದಿಯ ವನದಲಿ ಪೂತ ಬೆಟ್ಟದಾವರೆಯ ಮರ
ಬರಿಕೊಂಬು ಹೂವಾಗಿ ಮೇಲು ಮುಖದಲಿ ನಿಂತು
ವನದೇವತೆಯ ಸೊಂಟದಲಿ ಕುಳಿತ ಬರಿಮೈಯ
ಕಂದ ಕೈಗಳ ಎತ್ತಿ ಚಂದ್ರ ಮಾಮಾ ಬಾ ಬಾ
ಎಂದು ಕರೆವಂತಿತ್ತು. ವನದ ಮಧ್ಯದಿಹಾಯ್ದು
ಬಂದ ಕಮ್ಮೆಲರು ಶ್ರೀರಾಮನಿಗೆ ಪ್ರೇಯಸಿಯ
ಜೊತೆಗಿದ್ದ ದಿನದ ನರುಗಂಪಿನವಳುಸಿರೊ ಇದು
ಎಂಬ ಭ್ರಾಂತಿಯ ನೀಡುತಿತ್ತು. ರಘುನಾಥನಿಗೆ
ಅಂತೆ ತೋರಿತು: "ಈಗ ಬರುತಿರುವ ಗಾಳಿಯಿದು
ಸಾಗರದ ಮೇಲಿಂದ ಹಾಯ್ದು ಲಂಕಾಪುರದ
ಉಪವನಗಳಲಿ ತೂರಿ ಸೀತೆಯೊಡಲನು ಸೋಕಿ
ನನ್ನನೈದಿದೆ. ಜಾನಕಿಯ ದಿವ್ಯಗಾತ್ರವನು
ನೋಡುವುದು ಸೋಕುವುದು ಇಂದುದೊರೆಯದ ಸೈಪು.
ಅದಸೋಕಿ ಬಂದ ಈ ಎಲರಿಗೇ ಮೈಯೊಡ್ಡಿ
ಆಸೋಕ ಸುಖವನನುಭವಿಸುವೆನು. ಅಕಟಕಟ,
ಗಂಡಾದ ನಾನು, ಸಖರಲಿ ಸುರಕ್ಷಿತನಾಗಿ,

ತಮ್ಮ ಮಂತ್ರಿಗಳೊಡನೆ ಇಂತಿಲ್ಲಿ ಕುಳ್ಳಿರುತ,
ಈ ತೆರ ಅಧೀರನಾಗುವೆನೆ! ಆ ನನ್ನರಸಿ
ಅಸುರನ ಅಶೋಕವನದಲಿ ಯಾವ ಪಲ, ಯಾವ
ಕ್ಷಣ, ಯಾವ ಕೇಡ ತಹುದೋ ಎಂಬ ಭೀತಿಯಲಿ
ಕಾವಲ ಕರಾಳಮುಖಿಯರ ಮಧ್ಯೆ ಸುಕುಮಾರಿ
ಇಂಥ ಕಷ್ಟವ ಕಾಣದವಳು ಬಾಳಿಹಳೆಂತು?
ಈ ಗಾಳಿ ನನ್ನ ಮೆಯ್ಯನು ಸೋಕಿದುದು ಈಗ
ಅವಳೆಡೆಗೆ ಹಾಯ್ದು ಅವಳೊಡಲನೂ ಸೋಕಿತೇ
ಎನಗಾದ ಸುಖ ಅವಳಿಗಾದೀತು. ಅದು ಎಲ್ಲಿ?
ನಮ್ಮಿಬ್ಬರಲಿ ನಿಜದಿನೋಡೆ ಸೀತೆಯ ದುಃಖ
ನನ್ನ ದುಃಖಕೆ ಮಿಗಿಲು. ಇದನೆ ಸಹಿಸೆನು ನಾನು;
ಬಾಳಲಾರೆನು ಎನುತಿಹೆನು. ಇನ್ನು ಹೆಣ್ಣಾವಳು
ನಾನು ಬಿಡಿಸುವವರೆಗೆ ಬಾಳ ಧರಿಸಿರುವಳೇ?
ಸಂದೇಹವೇಕೆ? ಧರಿಸಿಯೆ ಇಹಳು. ಇನ್ನೆಂತ
ಏತರ ಅವಸ್ಥೆಯಲು ಗಂಡಿಗಿಂತಲು ಹೆಣ್ಣು
ಮಿಗಿಲ ಕಷ್ಟಕೆ ಸಿಲುಕುವುದು; ಗಂಡಿಗಿಂತಲೂ
ಮಿಗಿಲಾದ ಧೃತಿಯಿಂದ ಕಷ್ಟವನು ಸಹಿಸುವುದು.
ಇಂತಪ್ಪ ಹುಣ್ಣಿಮೆಯ ರಾತ್ರಿಯಲಿ ನಾವಂದು
ಜೊತೆಯಲಿ ಜನಸ್ಥಾನದಲಿ ವಿಹರಿಸಿದ ವೇಳೆ
ತುಂಬು ಹೆರೆಯನು ಎನಿತು ನೋಡಿದರು ವೈದೇಹಿ
ತಣಿವ ತಳೆಯಳು. ಏನು ಆಸೆ ಆ ಕಣ್ಗಳಿಗೆ
ಚಂದ್ರನನು ನೋಡುವುದರಲಿ! ತಾರೆ ಅರಸನನು
ನೋಡಲೆಳಸುವ ಚಂದ! ಸೀತೆ ತಲೆಯನು ಎತ್ತಿ
ತಿಂಗಳಲಿ ಕಣ್ಣಿಟ್ಟು ನಿಂತ ಹೊತ್ತಿಗೆ ಅವಳ
ಭಂಗಿ ನೋಡಲು ಸೊಗಸು. ಆ ಕಿಂಚಿದುನ್ನಮಿತ
ಮುಖ, ವಕ್ಷ, ಅಭಿರಾಮವಕ್ರ ಕಂಬುಗ್ರೀವ.
ಆಹ! ಈ ತುಂಬು ತಿಂಗಳನು ಈ ವೇಳೆಯಲಿ

ಸೀತೆ ನೋಡುತಲಿಹಳೊ? ಇರಬಹುದು. ಎರಡುಸಿರು
ತನ್ನುಸಿರು ಸೀತೆಯುಸಿರಂತೆ ಒಂದೆನೆ ಬೆಸೆದು
ಬಂದು ಬಾಳ್ವೆಯನು ಎರಡೆಡೆ ಬಾಳುತಿರುವಂದು,
ತನ್ನ ಮನದಲಿ ಆಸೆ, ಅವಳ ಮನದಲಿ ಆಸೆ,
ತನ್ನ ಮನದಲಿ ಶಂಕೆ, ಅವಳ ಮನದಲಿ ಶಂಕೆ,
ತನ್ನ ಮನದಲಿ ಹೆರೆಯ ನೋಡಬೇಕೆಂಬೆಣಿಕೆ
ಅದನು ನೋಡಿದ ತಣಿವು ಬೇನೆ, ಅಂತೆಯೆ ಅವಳ
ಮನದಲೂ ಅದ ನೋಡುವೆಣಿಕೆ ಅದ ನೋಡಿ ಬಹ
ತಣಿವು ಬೇನೆಗಳು, ಮತ್ತೊಮ್ಮೆ ನೋಡುವೆನೆಂಬ
ತನ್ನ ಈ ಬಯಕೆಯೊಲು ಬಯಕೆ, ತಲೆದೋರುವುದು
ಏನು ಅಚ್ಚರಿ? ಆಶ್ರಮದೊಳಿದ್ದ ಆ ದಿವಸ
ಚಂದ್ರನನು ನೋಡು ನೋಡುತ ಸೀತೆ 'ಜೀವೇಶ
ನೀಕೂಡ ಚಂದ್ರನನು ನೋಡು ಈರ್ವರ ದೃಷ್ಟಿ
ಚಂದ್ರನಲಿ ಕೂಡಿರಲಿ' ಎಂದು ಹೇಳಿದಳೊಮ್ಮೆ.
ಅರಮನೆಯ ಆಟಪಾಟ ವಿನೋದ ತಪ್ಪಿರಲು
ವೈದೇಹಿ ಏನಾದರಿಲ್ಲಾಯಿತೆಂಬುದನೆ
ಕಾಣದವಳಂತೆ ತನ್ನದೆ ಆಟಪಾಟವನು
ತನ್ನದೆ ವಿನೋದವನು ಸೃಜಿಸಿಕೊಂಡಳು ಸರಸಿ.
ಎದುರೆದುರು ಕುಳಿತು ನೋಟದಲಿ ನೋಟವ ಬೆರಸಿ
ಜೀವ ಜೀವದಿ ಬೆರೆವುದೊಂದಂದ. ಅದೆ ನೋಟ
ಎನಿತೊ ದೂರದ ಹೆರೆಯ ಕುರಿತು ಜೊತೆ ಜೊತೆ ಸಾರಿ
ಜೀವ ಜೀವದಲಿ ಅದರಲಿ ಬೆರೆವುದೊಂದಂದ.
ಎದುರು ಎದುರಲಿ ಕುಳಿತು ನೋಟಬೆರೆಯುವ ಸೈಪು
ಇನ್ನೆಂದೊ. ಈ ಕ್ಷಣದಿ ವೈದೇಹಿಚಂದ್ರನನು
ನೋಡುತಿಹುದಾಗೆ ಆ ನೋಡುತಿಹ ನೋಟದಲಿ
ನನ್ನ ಈ ನೋಟ ಬೆರೆಯಲಿ. ಕಾದಲರ ಕುಲದ
ಅಭಿಮಾನಿ ತಾರಾಧಿಪತಿಯ ಆಶ್ರಯಕಿಂತ

ಅಗಲಿರುವ ಕಾದಲರ ದೃಷ್ಟಿಮಿಲನಕೆ ಬೇರೆ
ಒಳಿತು ಆಶ್ರಯ ಉಂಟೆ?" ಇಂತೆಂದು ಯೋಚಿಸುತ
ಶ್ರೀರಾಮಚಂದ್ರ ಚಂದ್ರನ ಕಡೆಗೆ ನೋಡಿದನು;
ಅಂತೆ ಸುಗ್ರೀವನೆಡೆ ತಿರುಗಿದನು; ಕಪಿರಾಜ
ಹಿಂಬದಿಯ ಕಲ್ಲನೊರಗಿದ್ದವನು ಅಂತೆಯೇ
ನಿದ್ರಿಸುತಲಿಹಪರಿಯ ನೋಡಿದನು. ಹಾ ತನ್ನ
ರೀತಿಯೇ. ಎನಿತು ಹೊತ್ತಾಯಿತೋ ಕುಳಿತಿದ್ದು!
ಸುತ್ತ ನೋಡಿದನು ರಘುವರ. ಕಾವಲವರಂತೆ
ನಿದ್ರೆಯೊಳಗಾಳಿಹರು. ಹನುಮಂತ ಲಕ್ಷ್ಮಣರು?
ಅವರಾದರೂ ಕಾಣಲಿಲ್ಲ. ರಘುಕುಲಮೌಳಿ
ಎದ್ದು ನಿಂತನು; ಸೇತುವಿನ ಕಲ್ಲು ನಿಂತಿರುವ
ತೆರನ ನೋಡುವ ಎಂದು ಮನವಾಗಿ, ಅಲ್ಲಿಂದ
ಮುನ್ನೀರ ಕಡೆಗೆ ಮೆಲು ಮೆಲನೆ ನಡೆದನು. ರಾಮ
ಸುಗ್ರೀವನೊಡನೆ ಕುಳ್ಳಿರುತ ಚಿಂತೆಯೊಳದ್ದು
ನೋವುದನು ನೋಡಿ ಸೌಮಿತ್ರಿ ಹನುಮಂತನಿಗೆ
ಅಗ್ರಜನ ಪರಿಯ ನೋಡೆಂದು ತೋರಿಸಿ ಕಣ್ಣ
ಹನಿಯೆರಡ ಮಿಡಿದು ಗುಡಿಸಿಲಸಾರಿ ತಾನಲ್ಲಿ
ಕುಳಿತು ಅತ್ತಿಗೆ ಅಣ್ಣದಿರ ನೋವ ನೆನವಿನಲಿ
ನೋಯುತಿರುವನು. ಅಂಜನಾದ್ರಿಸುತ, ಹೊರಗಿರುತ,
ತಾನಾಗಿ ನುಡಿಸಬಾರದು, ರಾಮ ಕರೆದನೇ
ಬಳಿ ಸಾರಬೇಕು, ಎಂಬೆಣಿಕೆಯಲಿ ಕಾದಿಹನು.
ಇಂತಿರಲು ಶ್ರೀರಾಮ ತಾನೊಬ್ಬನೇ ಎದ್ದು
ಸೇತುವಿನ ಕಡೆಗಿಳಿದ ಹದನು ಕಂಡಿತು ಇವಗೆ.
ದೊರೆಯೇನು ಬೇನೆಯನು ತಾಳಲಾರದೆ ಬಾಳ
ನೀಗಲೆಳಸಿದನೊ ಎಂದಿವನ ಮನದಲಿ ಶಂಕೆ.
ಯಾರನೂ ಕರೆಯದೊಬ್ಬನೆ ಹನುಮ ರಾಘವನ
ಹಿಂದೆಯೇ ಸಪ್ಪುಳಿಲ್ಲದೆ ನಡೆದುಬರುತಿಹನು.

ಶ್ರೀರಾಮ ಸೇತುವನು ಸಾರಿದನು ; ಮೊದಲಿನಲಿ
ಶೈಲಖಂಡಗಳು ನಿಂತಿಹ ಪರಿಯ ನೋಡಿದನು ;
ಮುಂದೆ ಕೆಲಹೆಜ್ಜೆಯನು ನಡೆದು, ಆರ್ಯಾವರ್ತ
ತನ್ನ ತಾಯನು ಕದ್ದ ಲಂಕೇಶ್ವರನ ಸದೆದು
ದೇವಿಯನು ಬಿಡಿಸಿತಹೆನೆಂದು ನೀಡುತಲಿರುವ
ತೋಳು ಎಂಬಂತೆ ನಳಸೇತು ಮುನ್ನೀರಿನಲಿ
ದಿಟ್ಟವಾಗಿಹುದ ಕಂಡನು. ಅತ್ತ ಇತ್ತ ಜಲ
ಆಲೆದಲೆದು ಸೇತುವಿನ ಬಂಡೆಗಳನೋಲಗಿಸಿ
ಮಾಂತ್ರಿಕನ ದಂಡವನು ಕಂಡು ಹೆಡೆಗಳ ಸಾಲ
ತಗ್ಗಿಸಿದ ಹಾವಿನಂತಿಹುದು. ರಘುರಾಮನಿಗೆ
ಲಂಕೆಯನು ಸೇರಿದಂತೆಯೆ ಹಿರಿದುಸಂತಸ.
ಮುಖದ ಕತ್ತಲು ಹರಿದು ಅವನು ಉಲ್ಲಸದಿಂದ
ಅತ್ತಿತ್ತ ಕತ್ತ ತಿರುಹಿದನು. ಹನುಮಂತನಿಗೆ,
ದೊರೆಯೇನು ಬಾಳ ನೀಗುವನೊ ಎನ್ನುವ ಶಂಕೆ
ಮಾಯವಾಯಿತು. ಆದರೆಂತು ಬಳಿಸಾರುವುದು?
ಹಿಂಬಾಲಿಸಿದೆಯೇಕೆ ಎಂದು ಕೇಳಿದನು; ಗತಿ?
ಅದರಿಂದ ಅವನು ದೂರದಲೆ ನಿಂತನು. ರಾಮ
ಸೇತುವಿನ ಅಂಚಿನಲಿ ಬಂಡೆಯೊಂದನು ಸಾರಿ
ಅಲ್ಲಿ ಕುಳಿತನು; ನಾಲ್ಕು ಕ್ಷಣ ಸುಮ್ಮನೆಯೆ ಕುಳಿತು,
ಏನು ತೋರಿತೊ ಮನಕೆ, ಬದಿಯಲ್ಲಿ ಬಿದ್ದಿದ್ದ
ಸಣ್ಣ ಕಲ್ಲೊಂದ ಎತ್ತಿದನು; ಅದ ನೀರಿನಲಿ
ಮೆಲ್ಲನಿರಿಸಿದನು. ಆದು ನೀರಿನಲಿ ಮೆಲ್ಲನೆಯೆ
ಇಳಿದು ಮರೆಯಿತು. ದೂರದಲಿ ಯಾರೊ ನಕ್ಕಂತೆ
ಶಬ್ದವಾಯಿತು. ರಾಮಚಂದ್ರ ಅಲ್ಲಿಂದೆದ್ದು
ಸುತ್ತಲೂ ನೋಡಿ ಯಾರೂ ಕಾಣದಿರೆ ಮರಳಿ
ಪಾಳೆಯಕೆ ನಡೆದು ಬಂದನು. ನಕ್ಕವನು ಹನುಮ.
ದೊರೆ ಸಾಗರಕೆ ಸಾರಿದುದು ಜೀವ ಬಿಡಲಲ್ಲ,

ತನ್ನ ಭಕ್ತರು ಎಣಿಸುವನಿತು ತಾ ಹಿರಿಯನೇ
ಎಂಬುದನು ತಿಳಿವುದಕೆ, ಎಂಬುದವನಿಗೆ ತೋರಿ
ನಗೆ ಬಂದು ನಕ್ಕನಪ್ಪುದು. ರಾಮ ಹಿಂದಿರುಗಿ
ನೋಡುವನಿತರಲಿ ತನ್ನೊಡಲ ಕಿರಿದನುಮಾಡಿ
ಅಡಗಿ ಕಾಣಿಸದೆ ಇದ್ದವನು ರಾಮನ ಹಿಂದೆ
ಪಾಳಿಯುವ ಸೇರಿದನು.

ಮೂರನೆಯದಿನ ಹನುಮ
ಪಾದಸೇವೆಗೆ ಬಂದ ವೇಳೆ ಸೀತಾರಮಣ
ಲಕ್ಷ್ಮಣನ ಕುರಿತು, " ಹನುಮಂತ ಸವಿನುಡಿವನಿತು
ನಿಜವನೂ ನುಡಿಯೆ ಚೆನ್ನಹುದು" ಎಂದನು. ರಾಮ
ಏನು ಹೇಳುತಲಿಹನು ಎಂಬುದನು ಹನುಮಂತ
ಅರಿತು ನಗುತಿಹನು. ಸೌಮಿತ್ರಿಗೀ ಅರಿವಿಲ್ಲ.
ಪ್ರಭುಪರಾಯಣ, ಅನೃತಶತ್ರು, ಅಂಜನೆಯಣುಗ;
ಅವನನೇತಕೆ ಅಣ್ಣ ಇಂತು ಉದಯದಿ ಎದ್ದು
ಎಂದೆ ಆದರು ಯಾರನಾದರೂ ನುಡಿಯದಿಹ
ವ್ಯಂಗ್ಯದಲಿ ಸುಳ್ಳ ಎಂದರು? ರಾಘವಾವರಜ
ಆ ಕ್ಷಣವೆ ಅಣ್ಣನನು ಹನುಮನನು ನೋಡಿದನು.
ಅಣ್ಣನದು ನಗೆಯೆ; ಹನುಮಂತನದು ಬಹಳ ನಗೆ.
ಇದ ನೋಡಿ ಅವನು ನೆಮ್ಮದಿ ತಾಳಿ, ಇವರಿವರ
ಯಾವುದೋ ಹಾಸ್ಯ ಇದು ಎಂದರಿತು, ಸಂಕೇತ
ಏನೆಂದು ತಿಳಿವುದಕೆ "ಹನುಮಂತ ಅನೃತವನು
ಹೇಳಿದುದ ಕಾಣೆ" ಎಂದನು. ರಾಮ "ನಮ್ಮೊಂದು
ಹೆಸರಿನಕ್ಷರವ ಬರೆದೊಡೆ ಕಲ್ಲು ನೀರಿನಲಿ
ತೇಲುವುದು ಎಂದನಲ್ಲವೆ ನಿನ್ನೆ? ಈ ಮಾತು
ನಮ್ಮ ಹೆಮ್ಮೆಯ ಬೆಳಸಬಲ್ಲ ಸವಿನುಡಿ ಹೊರತು
ನಿಜವಲ್ಲ" ಎಂದು ನುಡಿದನು. ಅದಕೆ ಸೌಮಿತ್ರಿ
"ಏಕೆ? ಅದು ನಿಜ. ನಿನ್ನೆ ಸಂಜೆ ನಾನೇ ನಳನ

ಕೇಳಿದೆನು. ಅವನು ಇದನೇ ತಿಳಿಸಿದನು" ಎಂದು
ಅರಿಕೆ ಮಾಡಿದನು. "ಹಾಗೆಂಬೆಯೊ? ಏನು ಇದು.
ಆಶ್ಚರ್ಯವಾಗಿಹುದು! ನನ್ನ ಹೆಸರನು ಬರೆದ
ಕಲ್ಲು ತೇಲುವುದು; ನಾನೇ ಸ್ವತಃ ಕೈಯಿಂದ
ನೀರ ಮೇಗಡೆ ಇಟ್ಟ ಕಲ್ಲು ಯಾರೋ ಇಟ್ಟ
ಕಲ್ಲಿನಂದವೆ ಮುಳುಗುವುದು. ಏನು ಸೋಜಿಗವೊ".
ಸೌಮಿತ್ರಿ ಕೇಳಿದನು: "ನೀನು ನೀರಿನ ಮೇಲೆ
ಕಲ್ಲಿಟ್ಟು ನೋಡಿದೆಯ?" ರಾಮನಿಗು ಮುಂದಾಗಿ
ಹನುಮಂತ, "ಹೌದು ನೋಡಿದರು" ಎಂದನು. ರಾಮ
"ನಾ ನೋಡಿದುದ ನೀನು ಕಂಡೆಯಾ" ಎಂದೆನಲು
ಹನುಮಂತ, "ದೂರದಲಿ ನಿಂತು ಕಂಡೆನು ಒಡೆಯ.
ಕಂಡು ನಕ್ಕೆನು. ತಾವು ನಕ್ಕವರು ಯಾರೆಂದು
ಹಿಂದಿರುಗಿ ನೋಡಿದಿರಿ. ಅಡಗಿ ಕಾಣದೆ ಮರೆದೆ."
ಎಂದು ಬಿನ್ನವಿಸಿದನು. ಶ್ರೀರಾಮ: "ಚೆನ್ನಾಯ್ತು
ಇಂತಾದರೆಂತು ಮನುಜನ ಹೆಸರ ಅಕ್ಕರಕೆ
ಮನುಜನಿಗೆ ಇಲ್ಲದಿಹ ಮಹಿಮೆ ದೊರೆವಟ್ಟಹುದು?"
ಹನುಮಂತ ಮರು ನುಡಿದನಾಗ: "ಮನುಜನ ಹೆಸರ
ಅಕ್ಕರಕೆ, ಮನುಜನಿಗೆ, ಏನಾವ ಮಹಿಮೆಗಳು
ಅಳುವಡುವುವೋ ಕಾಣೆ. ಸರ್ವಲೋಕ ಶರಣ್ಯ
ನನ್ನೊಡೆಯ ರಾಮಚಂದ್ರನ ಹೆಸರಿನಕ್ಕರವ
ನಂಬಿ ಗುರುತಿಸೆ ಕಲ್ಲು ನೀರಿನಲಿ ತೇಲುವುದು
ಸತ್ಯ. ಶ್ರೀರಾಮ ರಕ್ಷಿಸಬಲ್ಲ ದೈವ ನಿಜ.
ಅವನ ಹೆಸರೆಮ್ಮ ರಕ್ಷಿಸಬಲ್ಲ ಮಂತ್ರ ನಿಜ.
ರಾಮ ಕೈಹಿಡಿದಿರಲು ಕೇಡೆಲ್ಲಿ ವಸ್ತುವಿಗೆ?
ಕೈಹಿಡಿದ ಗುರುತು ಬರೆದಿಹ ಹೆಸರಿನಕ್ಷರ.
ನಂಬಿರುವ ನಳ ನಿಮ್ಮ ಹೆಸರ ಕಲ್ಲಲಿ ಬರೆದು
ರಾಮ ಕೈಹಿಡಿದ ಕಲ್ಲೆಂದು ನೀರಿನಲಿರಿಸೆ,

ರಾಮುನೇ ಸ್ವತಃ ಹಿಡಿದಿಲ್ಲ, ಆದರು ಅವನ
ಅಂಕಿತವ ತಳೆದಿಹುದು. ಎಂದು ಜಲ ಆ ಕಲ್ಲ
ನುಂಗದಿರುವುದು. ರಾಮುನಂಕಿತದ ಮಾತಿಲ್ಲ;
ಕೈಹಿಡಿದ ಮಾತಿಲ್ಲ. ಸ್ವತಃ ಅವನೇ ಕಲ್ಲ
ನೀರಿನಲಿ ಇಟ್ಟು ಕೈಬಿಡಲು ಅದು ತೇಲುವುದೆ?
ನೀರು ಅದ ತೇಲಿಸುವುದೇ? ದೈವ ಕೈಬಿಡಲು,
ಮುಳುಗುವುದೆ ಧರ್ಮವಾಗಿಹ ಕಲ್ಲು ಮುಳುಗುವುದು
ಅಂತಿರಲಿ, ತೇಲುವುದೆ ಧರ್ಮವಾಗಿಹ ಬೆಂಡು
ತೇಲಲಾರದು, ಕಂಡಿರಾ? ನಿನ್ನೆ ಇರುಳಿನಲಿ
ನೀವು ನೀರಿನೊಳಿಟ್ಟು ಕೈಬಿಟ್ಟ ವಸ್ತುವದು
ಮುಳುಗದಿನ್ನೇನ ಗೆಯ್ವುದು ಸಾಧ್ಯ? ಲೋಕದಲಿ
ದೈವ ಕೈಬಿಟ್ಟ ವಸ್ತುವನು ಜಲ ನೆಲ ಬಾನು
ಎಲ್ಲವೂ ನುಂಗುವುದು; ದೈವ ಕೈಹಿಡಿದುದನು
ಎಲ್ಲವೂ ಸಲಹುವುದು. ಎಂತೆ ಆಗಲಿ, ಒಡೆಯ,
ಕಲ್ಲಂದದೆನ್ನೆದೆಯ ಮೇಲೆ ಎಂದೂ ನಿಮ್ಮ
ನಾಮುದಂಕಿತವಿರಲಿ. ಸಂಸಾರ ಜಲಧಿಯುಲಿ
ತೇಲುವುದ ಎನಗನುಗ್ರಹಿಸಿ. ಎಂದೇ ಇರಲಿ,
ಎಂತೆ ಆಗಲಿ, ಇವನ ಕೈ ಬಿಟ್ಟರೇನಹನು
ಎಂದು ಎನ್ನನು ಪರೀಕ್ಷಿಸಬೇಡಿ, ರಕ್ಷಕಾ,
ಹೇ ಜಾನಕೀ ನಾಥ." ಇಂತು ಬಿನ್ನಹ ಮಾಡಿ
ಪೊಡಮುಟ್ಟು ರಾಮುನಡಿಗಳನು ಹಿಡಿದನು ಹನುಮ.
ಆಂಜನೇಯುನ ಭಕ್ತಿಯುತ್ಕರ್ಷವನು ನೋಡಿ
ರಾಮ ರಾಮಾನುಜರು ಕೌತುಕದೊಳಾಳಿದರು.

* * *

ದತ್ತೋಜಿ ಕತೆ ಹೇಳಿ ನಿಲಿಸಿರಲು ವೆಂಕಪ್ಪ
ಟಿಪ್ಪಣಿಯ ನುಡಿದರು. "ನನಗೆ ಇಂತಪ್ಪ ಕತೆ

ಬಹು ಒಪ್ಪು. ಕಲ್ಲು ನೀರಲಿ ತೇಲಿತೆಂಬುದನು
ನಂಬಿದೆನು ಎಂದಲ್ಲ. ರಾಮಚಂದ್ರನ ಕತೆಯು
ಹಲವು ಅದ್ಭುತಗಳಲಿ ಅದು ಒಂದು ಅದ್ಭುತ.
ಬೇಕಾಯ್ತು ನಂಬುವೆವು; ಬೇಡವೇ ನಂಬೆವು.
ಅಲ್ಲದೆ, ಸಂಪ್ರದಾಯದಲಿ ಇಂತಹ ಎಲ್ಲ
ಅದ್ಭುತಕು ಏನೇನೊ ವಿವರಣೆಯ ಹೇಳುವರು.
ಅದು ಎಂತೆ ಇರಲಿ, ಚೆನ್ನಾದ ನಂಬಿಕೆಯಿಂದ
ಬಾಳು ಚೆನ್ನಾಗುವುದು ಎಂಬುದೇ ಇದರಿಂದ
ತೇರಿ ಬಹ ತತ್ವ. ಹರಿಕಥೆಗಳಲಿ ಇದೆತೆರದ
ಕಥೆಯ ಹೇಳುವುದುಂಟು. ಈ ದಿವಸ ದತ್ತೋಜಿ
ಹರಿಕಥೆಯ ಉಪಕತೆಗೆ ರಾಮಾಯಣದ ಕೆಲವು
ಚೆಲುವ ಸಂಗತಿಯ ಪೋಣಿಸಿ ತನ್ನತೇ ಆದ
ಊಹೆ ನೋಡಿದ ಮತ್ತೆ ಕೆಲವು ವಿವರವ ಕೋದು
ತಕ್ಕಷ್ಟು ವಿಸ್ತಾರದೊಂದು ಕತೆ ಮಾಡಿದರು.
ಅವರ ಉದ್ದೇಶ ನೀರಲಿ ಕಲ್ಲು ತೇಲಿತೇ
ತೇಲಲಿಲ್ಲವೆ ಎಂಬ ವಿಷಯದಲಿ ಸಿದ್ಧಾಂತ
ಮಾಡುವುದು ಅಲ್ಲೆಂದು ತೋರುತಿದೆ. ರಾಘವನ
ಬಾಳ ಸಂದರ್ಭ ಒಂದನುಕೊಂಡು ರಸ ಒಸರಿ
ಮನಮುಟ್ಟುವಂತೆ ಬಣ್ಣಿಸಲು ನೋಡಿಹರವರು.
ಇಲ್ಲಿ ಕತೆಯೊರೆವ ರೀತಿಯೆ ಮುಖ್ಯ. ಆ ರೀತಿ
ನನಗೆ ಒಪ್ಪುಗೆ, ಇಷ್ಟು ಹೇಳಬಲ್ಲೆನು ನಾನು.

"ಇದು ನಾಲ್ಕನೆಯ ದಿವಸ. ನನ್ನ ಟೀಕೆಯ ಸರತಿ
ಇಂದು ಮುಗಿಯಿತು. ನಾಳೆ ಮೊದಲು ಅಷ್ಟಮಿವರೆಗೆ
ಹಿರಿಯಣ್ಣ ಟೀಕೆ ಮಾಡುವರು. ನಾ ನುಡಿದ ನುಡಿ
ಬಹುವೇಳೆ ತಪ್ಪಿಯೇ ಇರಬೇಕು. ನೇಹಿಗರು
ನನ್ನ ಪರಿ ಇಂತೆಂದು ಅದನು ಮನ್ನಿಸಬೇಕು."

ಎನೆ ರಾಮು "ತಪ್ಪು ಸರಿಗಳನು ಹುಡುಕುವರಿಲ್ಲಿ
ಇಲ್ಲ. ಗೆಳೆಯರ ನುಡಿಯು ಕೇಳುವುದು ಒಂದೇ
ಈ ಸಮೂಹದ ಬಯಕೆ. ವಿಜಯ ಪಂಚಮಿಯ ಕತೆ
ಕೃಷ್ಣಮೂರ್ತಿಯದು," ಎಂದನು. ಮಾರನೆಯ ದಿನದ
ಅವನ ಕತೆ, "ಕಪ್ಪೆ ಚೆನ್ನಿಗಮೂರ್ತಿ," ಮುಂದಿಹುದು.

Printed by U. Narasimha Mallya, Proprietor, B. B. D. Power Press
Cottonpet, Bangalore City

# ವಿಷಯ ಸೂಚಿಕೆ

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾನ್ತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )
ತಾಯ್ನುಡಿಯ ತಮ್ಮಡಿ
ನವರಾತ್ರಿ ೨
ನವರಾತ್ರಿ ೪
ಚಿತ್ರಾಂಗದಾ
ಸುನೀತ (ಪದ್ಯಗಳು)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :–

ಸತ್ಯಶೋಧನ ಪುಸ್ತಕ ಭಾಂಡಾರ, ಕೋಟೆ, ಬೆಂಗಳೂರು ಸಿಟಿ.
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ.
ಜೀವನ ಕಾರ್ಯಾಲಯ, ಗವಿಪುರದ ವಿಸ್ತರಣ, ಬಸವನಗುಡಿ.

# ಕಪ್ಪೆ ಚೆನ್ನಿಗಮೂರ್ತಿ

ಯಾದವ ಕುಲಾಂಬರದ್ಯುಮಣಿ ತ್ರಿಭುವನಮಲ್ಲ
ತಳಕಾಡು ಕೊಂಗು ಬನವಾಸಿ ನಂಗಲಿ ಕಂಚಿ
ಉಚ್ಚಂಗಿ ನೊಳಬವಾಡಿಯು ಕೊಂಡ ದೋರ್ದಂಡ
ಗಂಡ ಭುಜಬಳವೀರಗಂಗ ಹೊಯ್ಸಳದೇವ,
ವಾಸನ್ತಿಕಾದೇವಿ ದಯೆಗೆಯ್ದ ವರದಿಂದ
ಅನ್ವಯದೊಳುದಯಿಸಿದ ಪುಣ್ಯತೇಜೋಮೂರ್ತಿ,
ವಿಷ್ಣುವರ್ಧನ ಧರಾನಾಥ, ಬೇಲೂರಿನಲಿ
ವಿಜಯನಾರಾಯಣನ ಮಂದಿರವ ನಿರ್ಮಿಸಿ
ಒಂದು ಶುಭದಿವಸ ಮೂರ್ತಿಪ್ರತಿಷ್ಠೆಯ ಗೆಯ್ದು,
ಬಾಳುವೆಗೆ ವಿಜಯವನು ನೀಡಿ ರಕ್ಷಿಸುತಿರ್ದ
ದೈವದಡಿಯಲಿ ತನ್ನ ಕಾಣಿಕೆಯ ಸಲಿಸಿದನು.

ಯಾವ ಶುಭಲಗ್ನದಲಿ ವಿಜಯನಾರಾಯಣನ
ಮೂರ್ತಿಪ್ರತಿಷ್ಠೆಯಾದುದು, ಅಂದು ಸಂಜೆಯಲಿ
ದೊರೆಯ ಹಿರಿಯರಸಿ ಶಾಂತಾದೇವಿ, ಅವನೆಡೆಗೆ
ಸಾರಿ, ಪಟ್ಟದ ರಾಣಿಯಾಗಿ ತನ್ನತು ಒಂದು
ಮಂದಿರವ ಗೆಯಿಸಿ ಸುಂದರಕೇಶವನ ನಿಲಿಸಿ
ದೈವವನು ಪೂಜಿಸಲು ಅಪ್ಪಣೆಯ ಬೇಡಿದಳು.
ವಿಷ್ಣುವರ್ಧನರಾಯ ತನ್ನ ಪಟ್ಟದರಾಣಿ
ಎಂದೆ ಆಗಲಿ ಏನ ಬಯಸಿದರು ಅದ ತಾನು
ಬೇಡ ಎಂದವನಲ್ಲ. ತನ್ನ ಎಳೆಹರೆಯದಲಿ
ಅವಳು, ಎಳೆಹೆಣ್ಣು, ಮನವನು ಎಂತು ಮರುಳಾಡಿ
ಬಾಳ ಬೆಳಗಿದಳು, ಅವನದ ಸದಾ ನೆನೆದಿಹನು.
ತರುಣರಾಜಕುಮಾರ, ಅಂತಃಪುರದೊಳೊಮ್ಮೆ
ಒಂದು ಉತ್ಸವವ ನೋಡುತಲಿಹನು. ಮಧ್ಯದಲಿ

ನೃತ್ಯವೊಂದುಂಟು. ರಾಜನ ನಂಟಮನೆತನದ
ಹೆಣ್ಣಿವಳು, ಮಾಚವ್ವೆ ಮಾರಸಿಂಗರ ಪುತ್ರಿ,
ನೃತ್ಯಮಾಡುತ ಮುಂದೆ ಸಾರಿದಳು. ಎಳೆಹೆಣ್ಣು :
ದಂತದಲಿ ಕಡೆದುದೆನೆ ಒಡಲು, ತಿದ್ದಿದ ಮೋರೆ,
ಮಿಂಚಿನಂದದಿ ಸುಳಿವ ತೋಳು, ನೀರಿನಲೊಲೆವ
ತಾವರೆಯ ನಗುವ ಕೈತಳ, ಕಣ್ಣು, ಮೂಗು, ತುಟಿ ;
ಏನೊ ಮಾಟದ ಕೆನ್ನೆ ; ಕಿವಿ ಹುಬ್ಬು ಮುಂಗುರುಳು :
ಮನ್ಮಥನ ಕೈಗೊಂಬೆ ಕಣ್ಣ ಮುಂಗಡೆ ಸುಳಿದು
ನೋಡುವರ ಮನಗಳನು ಕದ್ದು ನಡೆದಳೊ ಎಂತು
ಎಂಬಂತೆ ಅವಳು ನೃತ್ಯವ ಮುಗಿಸಿ ನರ್ತನದ
ರಂಗವನು ಬಿಟ್ಟು ಸಾರಿದಳು; ರಾಜಕುಮಾರ
ಬಿಟ್ಟಿದೇವನ ಹೃದಯರಂಗವನು ಸೇರಿದಳು.
ಅಂದವನ ಎದೆಗಾವ ರಾಮಣೀಯಕಮೂರ್ತಿ
ಸಾರಿ ಬಂದುಲ್ಲಸವ ನೀಡಿತೋ ಅದೆ ಇಂದು
ರಾಣಿ ಶಾಂತಲೆ ಬರಲು ಇವನೆದುರು ಸುಳಿಯುವುದು.
ಎನಲು ಶಾಂತಾದೇವಿ ಬರಿಯ ಮೋಹದ ಮೂರ್ತಿ
ಎಂದಲ್ಲ. ಅದು ಮೊದಲು ಎಂದೆ ಆಗಲಿ ತನ್ನ
ಇನಿಯನಿಗೆ ಎದುರು ಬಾಳಿದಳಿಲ್ಲ. ಎಳೆತನದಿ
ಹೆಣ್ಣುಮಗುವೊಂದ ಹೆತ್ತಳು. ರೋಗರುಜಿನದಲಿ
ಅದು ಚಿಂತೆಗೆಡೆನೀಡೆ ತನಗಿಂತಲೂ ತನ್ನ
ದೊರೆಯ ಮನಸಿಗೆ ಬೇಸರಾಯಿತೇ ಎಂದಿವಳು
ಆಳೋಚಿಸಿದಳು. ಆಚಾರ್ಯದೇವರು ಬಂದು
ಮಗಳಿಗಾರೋಗ್ಯವನು ದಯೆಗೆಯ್ದು ಉದ್ಧರಿಸೆ
ಇನ್ನು ತನ್ನರಸನಿಗೆ ಈ ಚಿಂತೆ ಇಲ್ಲವಲೆ
ಎಂದು ತನ್ನಾಂತರದ ಕಳಕಳಿಯ ನೀಗಿದಳು.
ಗಂಡುಮಗನನು ಹಡೆಯಲಿಲ್ಲ: ಅದು ಒಂದು ಕೊರೆ.
ವಂಶವನು ನಡಸುವರೆ ಮಗನಿರಲಿ ಎಂದಿವಳು

ಅರಸನಿಗೆ ನಂಟರಲಿ ತಕ್ಕ ಹೆಣ್ಣನು ತಂದು
ಮದುವೆಮಾಡಿದಳು. ಅವಳೇ ರಾಣಿ ಲಕ್ಷ್ಮಲೆ.
ಚೆಲುವೆ; ತಿಳಿದವಳಲ್ಲ; ಅವಳು ವಂಶಕೆ ಎರಡು
ಗಂಡುಮಕ್ಕಳನು ನೀಡಿದಳು. ಅರಸನ ಮನಕೆ
ಒಮ್ಮೆಯಾದರು ತನ್ನ ವಂಶವನು ನಡೆಯಿಸುವ
ಮಗನ ಹೆತ್ತವಳು ಪಟ್ಟದ ರಾಣಿಯಲ್ಲೆಂದು
ತೋರಿದುದೆ ಇಲ್ಲ. ಇಂತಪ್ಪೊಂದು ವೈಖರಿಯ
ನಿರ್ಮತ್ಸರದ ಸೂತ್ರವನು ರಾಣಿ ಹಿಡಿದಿಹಳು.

ಇಂತು ಬಾಳುವೆಯು ಬೆಳಕಾಗಿ ನಡೆದಿಹ ದೇವಿ
ಅಲ್ಲದುದನೆಂದಾದರೂ ಏಕೆ ಬೇಡುವಳು?
ಬೇಡವೆನ್ನುವನೇಕೆ ಭೂಪಾಲ? ಆ ದಿವಸ
ರಾಣಿ ಸುಂದರಕೇಶವನಿಗೆ ಮಂದಿರವೊಂದ
ನಿರ್ಮಿಸುವ ಎನೆ ಅರಸ ಒಪ್ಪಿದನು. ಶಾಂತಲೆ
ಗಂಡನಿಗೆ ಉಸುರಿದಳು: "ನನ್ನ ಬೇಡಿಕೆ ಇದಕೆ
ಒಪ್ಪಿಕೊಂಡಿರೆ, ನನಗೆ ಹದುಳದಲಿ ಹದುಳ ಇದು.
ನಿಮ್ಮ ಪಟ್ಟದ ರಾಣಿಯಾಗಿ ಬಾಳುವ ಪುಣ್ಯ
ನನ್ನ ಪಾಲಿಗೆ ಎಂತು ಬಂದಿತಂತೇ ಕುಲಕೆ
ಒಬ್ಬ ಮಗನನು ಹಡೆವ ಪುಣ್ಯವೂ ಬಂದಿತ್ತೆ
ಚೆನ್ನಿತ್ತು. ದೇವರಿದ ಬೇಡವೆಂದರು. ಒಳಿತು.
ಕುವರನೊಬ್ಬನ ಹಡೆಯಲಿಲ್ಲ; ಅಷ್ಟೇ ಹೊರತು
ಅಣ್ಮ ಕಣ್ಣೆತ್ತಿ ನೋಡದೆ ನನ್ನ ಬಿಡಲಿಲ್ಲ.
ಇದೆ ನನ್ನ ಸೌಭಾಗ್ಯ. ರಾಜರೊಲ್ಲದ ರಾಣಿ
ಎಂದು ಅರಮನೆ ಮಂದಿ ನನ್ನ ಕನಿಕರಿಸರಲೆ.
ನನ್ನ ಚೆನ್ನಿಗನ ಒಲವನು ಗರ್ಭದಲಿ ಧರಿಸಿ
ಮಗನಾಗಿ ಹಡೆದು ಕೈಗಳಲಿ ಹಿಡಿಯದ ಕೊರೆಯ
ಈಗ ಶಿಲೆಯಿಂದ ಮೂರ್ತಿಯ ಕಡೆಸಿ ತುಂಬುವೆನು.
ಎದೆಯಾಳದಲಿ ದೈವವನು ಯಾವ ರೂಪಿಂದ

ಇಂದಿನೀವರೆಗೆ ಪೂಜಿಸಿದೆನೋ ಆ ರೂಪು
ನನ್ನ ಹೆಸರಿಂದ ನಿರ್ಮಿಸಿದೊಂದು ಮಂದಿರದ
ಗರ್ಭಪೀಠದಲಿ ರಾರಾಜಿಸಲಿ."

ಆಣ್ಮನಿಗೆ

ಇಂತೊರೆದು ರಾಣಿ ಶಾಂತಲೆ ವೇಗದಿಂದೈದಿ
ತನ್ನ ತಾಯಿಗೆ ಸಂಗತಿಯನರುಹಿ ಜೊತೆಯರಸಿ
ಲಕ್ಷ್ಮಲೆಯ ಅವಸರವನರಿತು ಅವಳೆಡೆ ಸಾರಿ
ಉಳಿದೊಬ್ಬ ರಾಣಿಯನು ಆ ಸ್ಥಳಕೆ ಬರಮಾಡಿ
"ದೊರೆ ಇಂತು ಒಪ್ಪಿಹರು; ಪಟ್ಟದರಸಿತಿ ಎಂದು
ನೀವೆನ್ನ ಅಕ್ಕಾಜಿ ಎನ್ನುತಿರುವಿರಿ; ನಮ್ಮ
ಮೂರು ಮಂದಿಯ ಸೇವೆ ಎಂದೆ ಈ ಮಂದಿರವ
ನಾನು ಬೇಡಿಹೆನು. ಅರಸರ ಜೊತೆಗೆ ರಾಣಿಯರು
ಧರ್ಮವನು ನಡೆಸುವುದು ನಮ್ಮ ಅರಸರ ಬಿಟ್ಟು
ಇದುವರೆಗೆ ಬೇರೆ ಇನ್ನೆಲ್ಲಿಯೂ ಸಂದಿಲ್ಲ.
ನಮ್ಮ ದೊರೆಗಿರಲಿ ಈ ಕೀರ್ತಿ" ಎಂದಳು. ರಾಣಿ
ಲಕ್ಷ್ಮಲಾದೇವಿ ಹಿರಿಯಾಕೆ ಆಡಿದ ನುಡಿಯ
ಕೇಳಿ "ಸಂತೋಷ ಅಕ್ಕಾಜಿ" ಎಂದಳು. ರಾಣಿ
ಬೊಮ್ಮಲಾದೇವಿ, ತನಗೂ ಹಿರಿಯ ಲಕ್ಷ್ಮಲೆ,
ಮಗನ ಹೆತ್ತಿಹ ರಾಣಿ, ಸಮ್ಮತಿಸುತಿರೆ ಇನ್ನು
ತನ್ನ ಮಾತೇನೆಂದು ಮರುನುಡಿಯದಿದ್ದಳು.

ಮಾರನೆಯ ದಿನ ರಾಣಿ ದೊರೆಯೊಡನೆ ದೇಗುಲಕೆ
ಸಾರಿ, ವಿಧಿಯರಿತು ಪೂಜೆಯ ಮುಗಿಸಿ, ಜಕ್ಕಣ
ಸ್ಥಪತಿಯನು ಬರಮಾಡಿ ಪತಿಯೆದುರು ಆತನಿಗೆ
ತನ್ನ ಆಸೆಯನು, ದೊರೆ ಅದಕೆ ಒಪ್ಪಿರುವುದನು,
ಅರುಹಿದಳು. ಮಾತ ಮುಂದರಿಸಿ, "ಆಚಾರ್ಯರೇ
ದೊರೆಗಳಾಣತಿಗೆಂದು ಮಾಡಿರುವ ನಮ್ಮ ಈ
ವಿಜಯನಾರಾಯಣನ ಮೂರ್ತಿಗೂ ಚೆಲುವಾದ

ಮೂರ್ತಿಯನು ನಮಗಾಗಿ ಮಾಡಿಕೊಡಬೇಕು. ಈ
ಬಾಳಿನಲಿ ಉಳಿದ ಎಲ್ಲೆಡೆ ನಾವು ಅರಸರಿಗೆ
ಸೋತು ನಡೆದಿಹೆವು ಕಂಡಿರ. ಇವರ ಸೋಲಿಸಲು
ಈಗ ದೊರೆತಿದೆ ಸಮಯ. ಈ ನಮ್ಮ ಆಸೆಯನು
ಸಲ್ಲಿಸುವ ಭಾರ ನಿಮ್ಮದು" ಎಂದು ನಕ್ಕಳು.

ಹಿರಿಯ ರಾಣಿಯ ರಾಯ ಸರಸದೀ ನುಡಿಕೇಳಿ
ಸ್ಥಪತಿ ಜಕ್ಕಣ ಒಂದು ಮೆಚ್ಚಿಕೆಯ ನೋಟದಲಿ
ರಾಜರಾಣಿಯರ ನೋಡುತ ಇಂತು ಭಕ್ತಿಯಲಿ
ಬಿನ್ನಯಿಸಿದನು. "ತಾಯಿ, ಸನ್ನಿಧಾನದ ಬಯಕೆ
ನ್ಯಾಯವಾದುದು. ಗಂಡು ತನ್ನ ಕನಸಿನ ರೂಪ
ನಿಜಮಾಡಬೇಕೆನಲು ಮೂರ್ತಿಯನು ಬಣ್ಣದಲೊ
ಕಲ್ಲಿನಲೊ ಬರೆಕೊರೆಯಬೇಕು. ಹೆಣ್ಣಿನ ಕನಸು
ಗರ್ಭದಲಿ ಕೂಸಾಗಿ ಬೆಳೆಯುವುದು. ಕಲ್ಲಿನಲಿ
ಬಾ ಎನಲು ಅಂತೆ ನಿಜವಾಗಿ ಒಡಮೂಡುವುದು.
ತಮ್ಮ ಬಯಕೆಯ ದೈವ ಮೂರ್ತಿಯಾಗಲಿ ಎಂದು
ದಿನ ಬಿಡದೆ ದೇವಿಯರು ಬೇಡುತಿರಿ. ಅದು ಒಲಿದು
ನನ್ನ ಮನಸಿನ ಗರ್ಭದಲಿ ಮೂಡಿ ಈ ಹಸ್ತ
ಈ ಬೆರಲುಗಳ ನಡೆಸಿ ಹೊರಗಡೆಗೆ ಕಾಣಲಿ.
ಗರ್ಭದಲಿ ಜನ್ಮವೆತ್ತಿದ ಕೂಸು ಮೂರು ದಿನ,
ಇಲ್ಲವೇ ನೂರುವರುಷಕೆ, ಬಾಳ ಮುಗಿಸುವುದು.
ಭಕ್ತಿಯಲಿ ಮೂರ್ತಿವೆತ್ತುದು ಪೂರ್ಣಕಲ್ಪಕೂ
ಬಾಳಬಲ್ಲುದು. ತಮ್ಮ ಹೆಸರ ಲೋಕಕೆ ಸಾರಿ
ಎಂದಿಗೂ ನಿಲ್ಲಬಲ್ಲುದು. ಭಕ್ತಿ ತಪದಿಂದ
ರಾಜದಂಪತಿ ಅನುಗ್ರಹಿಸಿ. ಈ ಕೈಯಿಂದ
ತಮ್ಮಾಸೆ ಸಲುವಂತೆ ಹಿರಿದೈವ ಕರುಣಿಸಲಿ."

ಇಂತು ಶಿಲ್ಪಾಚಾರ್ಯನೊರೆದಿರಲು ದೊರೆರಾಣಿ
ಅರಮನೆಗೆ ಮರಳಿದರು. ಅರಸಿತಿಯ ದೇಗುಲದ

ಕೆಲಸವನು ಅದೆ ಒಳ್ಳೆದಿವಸ ಮೊದಲಿಟ್ಟರು.
ಸ್ಥಪತಿ ದೇವರನು ಪೂಜಿಸಿ ತನ್ನ ಕಣ್ಣೆದುರು
ಕಾಣುತಿರಬೇಕೆಂದು ಬೇಡಿ ಸಲ್ಲಕ್ಷಣ
ಕ್ಷಣದಲಿ ಸುಲಕ್ಷಣದ ಶಿಲೆಯೊಂದ ವರಿಸಿದನು ;
ಅದನು ಕಾರ್ಯಾಗಾರದೊಳಗಡೆಗೆ ತಂದಿರಿಸಿ
ಸೌಮ್ಯಕೇಶವನ ಮೂರ್ತಿಯನಲ್ಲಿ ನೋಡಿದನು ;
ಅದ ಬಿಡಿಸತೊಡಗಿದನು. ಮಂದಿರದ ಕೆಲಸವನು
ನೋಡಿಕೊಳ್ಳುತ ಗರ್ಭಗೃಹ ಮುಗಿವ ವೇಳೆಗೆ
ಮೂರ್ತಿಯನು ಅಣಿಮಾಡಲಿಹನು. ನವರಂಗದಲಿ
ಎಂದಿನೊಲು ಕಂಬಗಳು, ಇತ್ತಿತ್ತ ಬಾಗಿಲು,
ಕಂಬದಲಿ ರೂಪುಗಳು, ಹೊರಗಡೆಯ ಗೋಡೆಯಲಿ
ಬೆರೆವ ಕಲ್ಲಲಿ ಕೆತ್ತನೆಯ ಕೆಲಸ, ಮಂದಿರದ
ಮುಂಗಡೆಗೆ ಚೆಲುಚೆಲುವ ಮೂರ್ತಿಗಳು, ಎಲ್ಲವೂ
ಒಂದಾಗಿ ಸಿದ್ಧವಾಗುತಲಿಹವು. ದೊರೆ, ಅಂತೆ
ರಾಣಿ ಶಾಂತಾದೇವಿ, ಒಮ್ಮೊಮ್ಮೆ ಐತಂದು
ನಡೆದಿರುವ ಕಾರ್ಯವನು ನೋಡುವರು. ಎಲ್ಲವೂ
ಚೆನ್ನಾಗಿ ನಡೆದಿಹುದ ಕಂಡು ಸಂತಸಗೊಂಡು
ಮರಳುವರು.

ಈಮಧ್ಯೆ ಅರಮನೆಯ ಮನಗಳಲಿ
ಒಡಕುಗಳು ತೋರಿಕೊಂಡವು. ರಾಣಿ ಲಕ್ಷ್ಮಲೆಗೆ
ಈ ದೇಗುಲದ ಮಾತು ಬಹವರೆಗು ಮನಸಿನಲಿ
ಕಶ್ಮಲದ ಕಲೆ ಇಲ್ಲ. ತನ್ನ ಮಗನೇ ಮುಂದೆ
ಅರಸಾಗಲಿಹನು ; ಯುವರಾಜನಿಗೆ ತಾಯ್ ತಾನು ;
ಹಿರಿಯಳೆನ್ನುವ ಬರಿಯ ಹೆಸರಿಂದ ಶಾಂತಲೆಗೆ
ಬಂದುದೇನಂತೆ, ಇರಲೇಳು : ಎಂಬರ್ಥದಲಿ
ಏನೊ ಧೋರಣೆಯೊಳಿದ್ದಳು. ಇಂದು ಏನು ಇದು ?
ಹಿರಿಯ ರಾಣಿಯ ಹೆಸರಿಸಿಂದ ಮಂದಿರವೊಂದು

ನಿರ್ಮಾಣವಾಗಲಿದೆಯೆನಲು ಲಕ್ಷ್ಮಲೆಯೊಳಗು
ಇದು ಎಂತು ಎಂದು ವಾದಿಸಿತು. "ಮಗನನು ಹೆರದ
ಹಿರಿಯರಸಿ ರಾಜನಿಗೆ ಗುಂಡ ಹಡೆದೀವಳೇ ?
ಬಂಜೆಹೆಣ್ಣೇ ಹೆಣ್ಣೆ? ಹೆಣ್ಣು ಹೆಣ್ಣನೆ ಹೆತ್ತು
ಪಟ್ಟದರಸಿತಿಯೆಂದು ಮೆರೆಯಲೇ ? ಪಟ್ಟವನು
ಯಾರು ನಡಸುವರೊ ಅವರದು ಪಟ್ಟ. ಈ ರಾಣಿ
ತಾನು ಪಟ್ಟದ ರಾಣಿ ಎಂದು ಹೆಸರನು ನಿಲಿಸಿ
ತನ್ನ ಹೆಸರನು ಮರೆಯಿಸುವೆನೆಂದು ಹೊರಟಿಹಳು.
ಅಕ್ಕನೇ ಇವಳು ? ಏತರ ಅಕ್ಕ? ಹೊರಗಡೆಗೆ
ನಗುನಗುತ ನುಡಿದು ಮನದಲಿ ಹಗೆಯ ಬೆಳಸಿಹಳು.
ಸವತಿತನವೆಂಬುದಿದೆ. ಆ ತನ್ನ ಮನಸಿನಲಿ
ಇನ್ನೇನು ಕಲ್ಮಷವನೆಣಿಸಿಹಳೊ ಕಂಡೆನೇ ?
ಅರಸನಿಗೆ ಏನೇನ ಹೇಳುವಳೊ? ಅವನಿಂದ
ಏನೇನ ಮಾಡಿಸುವಳೋ? ಯಾರು ಬಲ್ಲರಿದ ?
ಮಗನ ಹೆರದೆಯೆ ಇಂದು ತನ್ನ ಹೆಸರನು ನಿಲಿಸ
ತೊಡಗಿದವಳಾ ಮಗನೆ ಅರಸಾಗಬೇಕೇಕೆ,
ತನ್ನ ಮಗಳೇ ಆಳಬಾರದೇ ಎನಬಹುದು.
ಇಲ್ಲವೇ ಈ ಮಗನ ವಿಷವಿಕ್ಕಿ ಕೊಲಬಹುದು."

ಇಂತು ಲಕ್ಷ್ಮಲೆ ಯೋಚಿಸಿದಳು. ಕೆಲದಿನ ಕಳೆದು
ಬೊಮ್ಮಲೆಯ ಜೊತೆಗಿರುವ ಹೊತ್ತು ಯಾವುದೊ ಮಾತು
ಎಂತೊ ಬಂದಂತೆ ನೆಪಮಾಡಿ, ಅವಳಾಂತರ್ಯ
ಎಂತಿಹುದೊ ಎಂದು ನೋಡಿದಳು. ಬೊಮ್ಮಲೆಯ ಮನ
ಅರಮನೆಗೆ ಬಂದ ಮೊದಲಿಂದ ಒಂದೇ ಕೆಡಕು.
ಚೆಲುವೆ; ಪಲ್ಲವರಾಜಪುತ್ರಿ. ವಿನಯದಿ ತಂದೆ
ರಾಜನಿಗೆ ಒಪ್ಪಿಸಿದ ಹೆಣ್ಣು. ಮದುವೆಯೆ ಸರಿ:
ಆದರೂ ಪಟ್ಟಮಹಿಷಿಗೆ, ಮಗನ ಹೆರಲೆಂದು
ಕೈಹಿಡಿದು ಕರೆತಂದ ಅರಸಿತಿಗೆ, ಸರಿಯಹಳೆ ?

ಸುಖವೀಯೆ ಶಯ್ಯೆಗೈತಂದ ಬೆಲೆವೆಣ್ಣಂತೆ
ಚೆಲುವೆಣ್ಣು; ಬೆಲೆವೆಣ್ಣಿಗೆರಡೊ ಮೂರೋ ಬೆರಳು
ಹೆಚ್ಚಿನವಳಿರಬಹುದು. ತಾ ಇಂತು ಕೊರೆಯೆಂಬ
ಹೀನಾಯ ಬೊಮ್ಮಲೆಯ ಮನವ ಕಹಿಮಾಡಿಹುದು.
ಅಲ್ಲದೆಯೊ ಅವಳಿಗೂ ಮಗನಿಲ್ಲ. ಲಕ್ಷ್ಮಲೆಯ
ಕುರಿತಾದರೂ ಅವಳ ಮನಕೆ ಸಮ್ಮತವಿಲ್ಲ.
ಆದರೂ ಲಕ್ಷ್ಮಲೆಯ ಕಡೆಗೆ ರಾಜನ ಮನಸು
ಅಷ್ಟೇನು ಒಲಿದಿಲ್ಲ ಎಂದಿವಳು ಆಕೆಯನು
ಅದು ಎಷ್ಟೊ ಸಹಿಸುವಳು; ಆದರೀ ಶಾಂತವ್ವೆ
ಮುದುಕಿರಾಣಿಯದು ಏಸಿದು ಪ್ರತಿಷ್ಠೆ! ಇವಳ
ಮಿನುಕೇನು! ಕುಲುಕೇನು! ತಾನು, ಇನ್ನೂ ಹೊಚ್ಚ
ಹದಿನಾರು ವಯದ ಹೊಸ ಹೆಣ್ಣೆಂದೆ ತಿಳಿದಿಹಳೊ?
ಏನು ಕತೆ ಇದು ಎಂದು ಬೊಮ್ಮಲೆಗೆ ಮತ್ಸರ.
ಹಲ ಹೆಣ್ಣ ಮದುವೆಯಪ್ಪವರು ಕಿರಿಹೆಂಡಿರನು
ಮನೆಹೊಗಿಸಿ ತರುವ ಹೊತ್ತಿನಲಿ ಅವಳೊಡನೆಯೇ
ಮಾತ್ಸರ್ಯವೆಂಬೊಂದು ದೈವ ಮನೆಹೊಗುವುದನು
ಕಾಣರಲೆ! ಇವರರಿಯದಿರೆ ಅದಕೆ ಕೊರೆಯೇನು?
ಇವರ ಅನುಮತಿಗೆ ಕಾಯದೆಯೆ ಸಾರಿದ ಮಾರಿ
ತಾನಾಗಿ ಮನೆದೈವವಾಗುವುದು; ಇವರಿಂದ
ದಿನದಿನವು ಪೂಜೆಗೊಂಬುದು. ಹಿಂದೆ ಲೋಕದಲಿ
ಎಷ್ಟು ಸಾವಿರ ಬಾರಿ ಈ ಮಾರಿ ಬಾಳುಗಳ
ನುಂಗಿ ತೀರಿಸಿತೊ! ದಶರಥನ ಕತೆ ಸಾಲದೇ?
ತಂದೆ ನೋವನು ತಿಂದ ಪರಿಯ ಕಂಡೇ ರಾಮ
ಏಕಪತ್ನೀವ್ರತವ ಕೈಕೊಂಡನೆಂದೆನಗೆ
ತೋರುವುದು. ಮನದ ಕಶ್ಮಲ ತುಂಬಿಕೊಂಡಿದ್ದ
ಬೊಮ್ಮಲೆಗೆ ಲಕ್ಷ್ಮಲೆಯ ನುಡಿ ಸೂಲಗಿತಿಯಾಯ್ತು.
ಅವಳು ವಿಷವನು ಕಾರಿದಳು. "ನಿಮ್ಮ ಬುದ್ಧಿಯನು

ನಾನೇಕೆ ಕೆಡಿಸಲೆಂದವಳೆ ಸುಮ್ಮನೆ ಇದ್ದೆ.
ತಾನಾಗಿ ನಿಮಗೆ ಇದು ತೋರಿದುದು ಸಂತೋಷ.
ಈ ಪಟ್ಟದರಸಿ ಹೆಮ್ಮೆಯಲಿ ನಮ್ಮಿಬ್ಬರನು
ತನ್ನ ದಾದಿಯರೆಂದರೂ ಅರಸ ಕೇಳುತ್ತ,
ಸುಮ್ಮನಿದ್ದಾರು; ನಾನದಕೆ ಬೆಕ್ಕಸಪಡೆನು.
ಈ ಕೇಡು ಇಲ್ಲಿಗೇ ನಿಲ್ಲಬೇಕೆನೆ ನೀವು
ದೊರೆಗೆ ಎಚ್ಚರ ನುಡಿಯಬೇಕು." "ನುಡಿಯುವೆನೇನ?
ಇದುವರೆಗೆ ಆಗದುದು ಇಂದು ಆಯಿತು ಏನು?
ಎಂದು ದೊರೆ ಕೇಳಿದರೆ ಬರಿಮಾತಿನಲಿ ಅವರ
ಮನವನೊಪ್ಪಿಸಲಹುದೆ?" "ನಿಜ. ಇಷ್ಟರಲೆ ಇವರ
ಗುಡಿ ಮುಗಿಯುವಂತಿಹುದು. ನೀವು ಮನಮಾಡಿದರೆ
ಅದರೊಡನೆ ಇವರ ಹೆಮ್ಮೆಯನು ಮುಗಿಸಲುಬಹುದು."
"ಗುಡಿಯನಿವರದು ಎಂಬಿರಾ?" "ನಾನೆ ಎಂದವಳು?
ಊರೆಲ್ಲ ಎನ್ನುತಿದೆ. ಒಂದು ಗುಡಿ ಅರಸರದು
ಒಂದು ರಾಣಿಯದು. ಒಬ್ಬಳೆ ರಾಣಿ. ಇನ್ನಿರುವ
ಇಬ್ಬರನು ಜನ ರಾಣಿಯೆನುತಿಲ್ಲ." "ಬೊಮ್ಮಲಜಿ
ನಾನು ಮನಮಾಡಿ ಆಯಿತು. ಯಾವ ಸಂಧಾನ
ನಮ್ಮ ಹೀನಾಯವನು ಅಳಿಸುವುದೊ ಅದ ತಿಳಿಸಿ;
ಅದನು ಕೈಕೊಂಬ." ರಾಣಿಯರಿಂತು ಗುಪ್ತದಲಿ
ಹಿರಿಯರಾಣಿಯ ಅವನತಿಯ ಸಾಧಿಸುವ ಹಿರಿಯ
ಮಂತ್ರದಲಿ ತೊಡಗಿದರು. ಬಹು ಹೊತ್ತು ಕಳೆದಿರಲು
ಏನ ಗೆಯ್ಯುವುದೆಂದು ಮನಕೆ ನಿರ್ಧರವಾಗಿ
ಇವರು ಅಗಲಿದರು.

ಶಾಂತಾದೇವಿಗಿವರ ಈ
ದುರ್ಮಂತ್ರದರಿವಿಲ್ಲ. ದೇಗುಲದ ಕಟ್ಟಡ
ಮುಗಿದು ಕಂಬಗಳ ಹೊರಗಣ ಗೋಡೆಗಳ ಮೇಲೆ
ಸ್ಥಾಪನೆಯ ಶಾಸನಶ್ಲೋಕಗಳ ರೂವಾರಿ

ಕೊರೆಯುತಿರುವನು. ಜಕ್ಕಣಾಚಾರ್ಯ ಮೂರ್ತಿಯನು
ಇನ್ನೇನು ಮುಗಿಸುವನು. ಒಂದು ಸಂಜೆಯ ವೇಳೆ
ಕಿರಿಯ ರಾಣಿಯರು ಶಾಂತಲೆಯ ಸಮಯವ ತಿಳಿದು
ಬಳಿಗೆ ಬಂದರು. ಬೇರೆ ಸಲ್ಲಾಪವನು ನಟಿಸಿ
ಎಂತೇನೊ ಬಂದಂತೆ, ದೇವಪ್ರತಿಷ್ಠೆಗೆ
ದಿನವನಿರಿಸಿತೆ ಎಂದು, ಆ ದಿನಕೆ ಅಕ್ಕನಿಗೆ
ತಾವೇನು ಮರ್ಯಾದೆ ಮಾಡಲುಚಿತವೊ ಎಂದು,
ಮಾತನೆತ್ತಿದರು. "ಝು" ಏನು? ಈ ವಿಷಯದಲಿ
ಲಕ್ಷ್ಮಲೆಯ ಬುದ್ಧಿ ಅಸಿತೇನು ಹರಿತದ ಬುದ್ಧಿ
ಅಲ್ಲ. ಬೊಮ್ಮಲೆಯೆ ಮಾತನು ನಡೆಸುವಳು ; ಪ್ರೌಢೆ.
ಕುಟಿಲವೇನೊಂದನೂ ಶಂಕಿಸದೆ ಹಿರಿಯರಸಿ
ತುಂಬುಸಂತಸದಿಂದ, "ಇನ್ನೆಂಟು ಹತ್ತು ದಿನ,
ಬಹಳವೆಂದರೆ ಒಂದು ಪಕ್ಷದಲಿ, ಮೂರ್ತಿಯನು
ತಿದ್ದಿ ದೃಷ್ಟಿಯನಿರಿಸಿ ಮುಗಿಸುವರು ಆಚಾರ್ಯ.
ಆದರಾಚೆ ನಾಲ್ಕೈದು ದಿನಕೆ ಶುಭಲಗ್ನದಲಿ
ದೈವಪ್ರತಿಷ್ಠೆಯಾಗುವುದು. ತಂಗಿಯರಿಂದ
ತನಗೆ ಮರ್ಯಾದೆ ಬಹುದೇತರದು? ದೇಗುಲವ
ಮೂವರಲಿ ಹಿರಿಯಳಾದುದರಿಂದ ತಾ ಬೇಡಿ
ಕಟ್ಟಿಸಿರುವಳು ಹೊರತು, ತಮ್ಮ ಮೂರೂ ಜನದ
ಸೇವೆಯೆಂದೇ ಅದನು ಕಟ್ಟಿಸಿತು. ಅಂತೊಂದು
ಮರ್ಯಾದೆ ಉಚಿತವನು ಕೊಡಲೆಬೇಕೆಂಬುದಿರೆ
ಹಿರಿಯ ತನ್ನನು ಮುಂದೆ ನಿಲ್ಲಿಸಿದ ಕತದಿಂದ
ತಾನು ತಂಗಿಯರಿಗಾಶೀರ್ವಾದ ಪೂರ್ವಕ
ಬಾಗಿನವ ಕೊಡಬೇಕು" ಎಂದವರಿಗೊರೆದಳು.
ದೈವಪ್ರತಿಷ್ಠೆ ನಡೆಯುವ ಮುನ್ನ ಮೂರ್ತಿಯನು,
ಅಂತೆ ಗುಡಿಯನು, ಮೂವರೂ ಕೂಡಿ ಒಂದು ಸಲ
ನೋಡಿದರೆ ಚೆನ್ನೇನೊ ಎಂದು ಬೊಮ್ಮಲೆ ಕೇಳೆ

ಹಿರಿಯರಸಿ ಆಗಲೆಂದಳು.

ಪಕ್ಷ ಕಳೆದಿಹುದು ;

ಮೂರ್ತಿ ಇನ್ನೇನು ಸಿದ್ಧವೆ. ಅದನು ನೋಳ್ಪೆನೆನೆ
ನಾಳೆ ನೋಡುವುದು ಸರಿ, ಆ ಮೇಲೆ ಎರಡು ದಿನ
ಸ್ಥಪತಿ ಅದ ಹೊರಗೆ ತೋರದೆ ಮಾಳ್ಪ ಕೆಲಸವಿದೆ,
ಎಂದು ಶಾಂತಲೆಗೆ ಬೊಮ್ಮಲೆ ಹೇಳಿದಳು. ನೀವು
ನಾಳೆ ಬರುವೊಡೆ ಮೂವರೂ ದೇಗುಲಕೆ ಸಾರಿ
ನೋಡಿ ಬರಬಹುದೆಂದು ಅವಳು ನುಡಿದಳು. ಅಂತೆ
ಮರುದಿವಸ ರಾಣಿಯರು ಜೊತೆಯಾಗಿ ದೇಗುಲಕೆ
ಬಂದವರು ವಿಜಯನಾರಾಯಣನ ಪೂಜಿಸಿ
ಹೊಸಮೂರ್ತಿಯನು ನೋಡಬಂದಿಹರು. ಆಚಾರ್ಯ
ಅರಸಿತಿಯರಿಗೆ ದೇವಮೂರ್ತಿಯನು ತೋರಿಸುತ
ಇಂತೆಂದ : "ತಾಯದಿರು ರಾಜವಂಶವ ನಡಸೆ
ಗರ್ಭದಲಿ ಧರಿಸಬಹುದಾದ ಮಗುವಿಗೆ ಮಿಕ್ಕ
ಮಗು ನನ್ನ ಕೈಯಿಂದ ಇಂತು ಮಾಡಿಹ ದೈವ.
ನಶ್ವರದ ಮೆಯ್ಯಿಂದ ಬಹನು ರಾಜಕುಮಾರ ;
ಶಾಶ್ವತದ ದೈವ ಈ ಮೂರ್ತಿ." ಹಿಂದೊಮ್ಮೆ ಇದೆ
ಮಾತೊ, ಇಂಥದೆ ಮಾತೊ, ಹಿರಿಯ ರಾಣಿಯ ಕಿವಿಗೆ
ಬಿದ್ದುದುಂಟು. ಅಂದು ಅವಳದರ ಅನುಚಿತವ
ಅನಿತು ಗಣಿಸಳು. ಇಂದು ಜೊತೆಗೆ ಲಕ್ಷ್ಮಲೆ ಇರುತ
ಈ ಮಾತು ಎಳೆ ತಪ್ಪಿತೆಂದೆನಿಸಿತವಳಿಗೆ.
ಅದಕೆ ತಕ್ಕಂತೆ ಆ ಕ್ಷಣ ರಾಣಿ ಬೊಮ್ಮಲೆ
ಲಕ್ಷ್ಮಲೆಯ ನೋಡಿದುದು, ರಾಣಿ ಲಕ್ಷ್ಮಲೆ ಮತ್ತೆ
ಅವಳ ನೋಡಿದುದು, ಶಾಂತಲೆಗೆ ಕಂಡಿತು. ಅಯ್ಯೊ,
ರಾಣಿ ಲಕ್ಷ್ಮಲೆ ನೊಂದುಕೊಂಬಳೋ, ಎಂದುದೆ
ಶಾಂತಲೆಗೆ ಚಿಂತೆ ತೋರಿತು. ಶಿಲ್ಪಿ ಅದೆ ವೇಳೆ
ಮೂರ್ತಿಯಡಿಯಲಿ ಕೊರೆಯೆ ರಚಿಸಿದ್ದ ಅರ್ಪಣದ

ಶ್ಲೋಕವನು ವಚಿಸಿದನು: "ಮೂರು ಲೋಕದ ದೇವ
ಚೆನ್ನಕೇಶವನ ಈ ಮೂರ್ತಿಯನು ವಿಷ್ಣುವಿನ
ಪತ್ನಿ ಶಾಂತಾದೇವಿ ಗೆಯ್ಸಿ ನಿಲ್ಲಿಸಿದರು."
ಮಾತ ಜಕ್ಕಣ ವಚಿಸುವಂದು ಮೊದಲೆಂತಂತೆ
ಬೊಮ್ಮಲಾಲಕ್ಷ್ಮಲಾದೇವಿಯರು ತಂತಮ್ಮ
ನೋಡಿಕೊಂಡುದು ರಾಣಿ ಶಾಂತಲೆಗೆ ಕಂಡಿತು.
ತನ್ನೊಬ್ಬಳದೆ ಹೆಸರ ಬರೆಸಿದುದು ತಪ್ಪಾಯ್ತೊ,
ಎಂತೊ ಎಂದವಳು ಯೋಚಿಸುತ ಏನೇ ನುಡಿಯ
ನುಡಿಗುಡದೆ ಮುಂದೆನಡೆದಳು. ಜೊತೆಗೆ ಸವತಿಯರು
ನಡೆದು ಬಂದರು. ಒಂದು ಮಂದಿರದ ಮುಂಗಡೆಯ
ಮಹಿಷಾಸುರನ ಸದೆವ ಚಾಮುಂಡಿರೂಪವನು,
ಇನ್ನೊಂದು ಮಂದಿರದ ಗಜಲಕ್ಷ್ಮಿ ಮೂರ್ತಿಯನು,
ಶಿಲ್ಪಿ ಇವರಿಗೆ ತೋರಿದನು. ಕಿರಿಯ ರಾಣಿಯರು
ಕೆಮ್ಮನಿದ್ದರು. ಅಂತೆ ಮುಂದೆ ನಡೆದಿರೆ ಇಲ್ಲಿ
ಗೋಡೆಯಲಿ ಸೇರಿರುವ ಕಲ್ಲಿನಲಿ ಬರೆದಿರುವ
ಬರಹವನು ಓದಿ ಎಂದಳು ಬೊಮ್ಮಲಾದೇವಿ.
ಸ್ಥಪತಿ ತಾನೇ ಅದನು ಓದಿದನು: ದೇಗುಲವ
ರಾಣಿ ಶಾಂತಾದೇವಿ ನಿರ್ಮಿಸಿದಳೆಂದೊರೆವ
ವೃತ್ತ ಅವಳನು, ವಿಷ್ಣುವರ್ಧನಮನೋರಾಗ
ಸಾಗರವನಭಿವರ್ಧಿಸುವ ಚಂದ್ರಲೇಖೆ,
ಭರತಾಗಮುದ ತಿರುಳು, ಮಂಗಳಾಭ್ಯುದಯಕರ
ಲಕ್ಷಣಗಳಭಿರಾಮೆ, ಮುಂತಾಗಿ ಬಣ್ಣಿಸಿದೆ.
ಕೊನೆಕೊನೆಗೆ ಕೊರೆಯುತಿಹ ನುಡಿಗಳೀತೆರನಿಹವು:
"ವಿನಯದಿಂ ನಮಿಸುತಿಹ ರಾಜಪತ್ನೀಜನರ
ಲಂಬನೀಲಾಳಕಾಲಂಬಿಪದನಖಕಿರಣೆ....
ಸವತಿಗಂಧಹಸ್ತಿ...." ಅಂತೆನಲು ಏನಕ್ಕ
ಎಂದು ಕೇಳಿದಳು ಬೊಮ್ಮಲೆ. ಲಕ್ಷ್ಮಲಾದೇವಿ

"ಸವತಿ ಶಬ್ದವ ಕೇಳಿ ತಂಗಿ ಬೊಮ್ಮಲೆಯ ಕಿವಿ
ತನ್ನನೇನೆಂದೊ ಹೊಗಳಿಹರೆಂದು ತೆರೆಯಿತು"
ಎಂದುಸುರಿ ಎನಸೊ ನಕ್ಕಳು. ಅನಿತರಲೆ ಅಲ್ಲಿ
ರೂವಾರಿಗಳ ಕೆತ್ತನೆಯನು ಸರಿನೋಡುತಿಹ
ಪಂಡಿತರು ಬಂದು ನಿಂತರು   ಬೊಮ್ಮಲಾದೇವಿ
ಅವರ ಕಡೆ ತಿರುಗಿ ಈ ಶ್ಲೋಕದರ್ಥವನರುಹಿ
ಎಂದು ಬೆಸಸಿದಳು. ಪಂಡಿತರು ಆ ವೃತ್ತಗಳ
ಬಿಡಿಸಿ ವಿವರಿಸತೊಡಗಿದರು. ಪಟ್ಟದರಸಿಯರ
ಕಿರಿಯರಸಿಯರು ಓಲಗಿಸುವರೆನ್ನುವ ಹದನ
ವ್ಯಾವರ್ಣಿಸುತ ಅವರು ಮಲೆಯೆ ಹಿರಿಯರಸಿಯರು
ಮದ್ದಾನೆ ಎಂದು ನುಡಿಯಲು, ರಾಣಿ ಶಾಂತಲೆ
"ಒಳಿತು ಪಂಡಿತರೆ ಬಿಡಿ" ಎಂದು ಅವರನು ತಡೆದು
ಸ್ಥಪತಿಯನು ಕುರಿತು "ವೃತ್ತಗಳ ಕಡೆಯುವ ಕಾರ್ಯ
ಇಷ್ಟರಲೆ ನಿಂತಿರಲಿ; ಮುಂದೇನ ಬರೆಯುವುದು
ಆದ ತಿಳಿಸುವೆವು" ಎಂದು ಬೇಗನೆ ಪ್ರದಕ್ಷಿಣೆಯ
ಮುಗಿಸಿ ತಂಗಿಯರೊಡನೆ ಅರಮನೆಯ ಸೇರಿದಳು.
ಅರಮನೆಯ ಸಾರಿದರೆಗಳಿಗೆಯಲಿ ಬೊಮ್ಮಲೆ
ಹಿರಿಯರಸಿಯೆಡೆಗೈದಿ "ಲಕ್ಷ್ಮಲಾದೇವಿಯರು
ತುಂಬ ಕೋಪದೊಳಿಹರು. ಎನಿತೆನಲು ತೀರದು.
ಇವರೊಬ್ಬರೇ ಸರ್ವಮಂಗಳಸ್ಥಿತಿಯುತೆಯೆ?
ಮಂಗಳಾಭ್ಯುದಯಕರಲಕ್ಷಣಗಳಭಿರಾಮೆ
ರಾಜಪತ್ನಿಯೆ? ನಾವು ತೊತ್ತುಗಳೆ, ಮಲೆವವರೆ?
ನಾವು ಮಲೆತರೆ ಇವರು ನಮ್ಮನಡಗಿಸಿ ತುಳಿವ
ಮದ್ದಾನೆಯೆ? ಯಾವ ಮಾತು ಇದು? ನಾನಿನ್ನು
ಅರಮನೆಯಲಿರುತ ಬಾಳಲುಬಹುದೆ? ಬಹುದೆನಲು
ಹೆಸರು ಮಾತ್ರಕೆ ರಾಣಿಯೆನಿಸಿ, ಸತ್ಯಕೆ ತೊತ್ತು,
ಪಟ್ಟಮಹಿಷಿಯ ಕೈಗೆ ಕಾದು ಕೂಳುಣುವಾಕೆ,

ದಾಸಿ ಲಕುಮವ್ವನಾಗಿರಬಹುದು. ನಾನೊಲ್ಲೆ ಈ ಬಾಳ, ಎಂದು ಮೊರೆಯುತಲಿಹರು. ಇದಕೀಗ ಏನಗೆಯ್ವಿರಿ ಅಕ್ಕ" ಎಂದು ಕೇಳಿದಳು. ಹಾ ಎಂದು ಶಾಂತಲೆ ಅಂತೆ ಚಿಂತೆಯಲಿ ಮುಳುಗಿದಳು.

ಇನ್ನು ಅರಮನೆಯೊಳಾದಾಯೆಲ್ಲ ವಾದವನು ದಳಬಿಡಿಸಿ ನುಡಿಯಲೇತಕೆ? ರಾಜಸನ್ನಿಧಿಗೆ ಮುಟ್ಟದಿರಬಹುದೆ ಇಂತಹ ಮಾತು? ಅರಸನಿಗೆ ಹೊಸತೆ ಕೂಟಪ್ರಶ್ನೆಯಾಯಿತಿದು. ಶಾಂತಲೆಯ ಮನಕೆ ಈ ಮುನ್ನ ಎಂದೂ ತೋರದೊಂದು ಹೊಸ ಭೀತಿ ತೋರಿತು. ಮಲೆತ ಸವತಿಯರ ಮದ್ದಾನೆ ಎಂದು ಅವಳನು ವರ್ಣಿಸಿದ ಕವಿತೆ ಹೊಸತಲ್ಲ. ಈ ಮುನ್ನ ಅದೆ ನುಡಿಯು ಇವರವ್ವೆ ಮಾಚವ್ವೆ ಹಿರಿದಾಗಿ ಮಾಡಿ ಬೆಳುಗುಳದ ಊರಿನ ಮಧ್ಯೆ ಬಸತಿಯೊಂದನು ಕಟ್ಟಿಸಿದಳು. ಅದ ಕರೆವಂದು ಗಂಧವಾರಣಬಸತಿ ಎನಲು ಇದು ಯಾವುದೋ ಜಿನಮತಕೆ ಸಂಬಂಧಿಸಿದ ಒಂದು ಹೆಸರೆಂದು ಮಂದಿ ತಿಳಿದಿತ್ತು. ಶಾಂತಲೆ ಕೂಡ ತಾನೊಂದು ಮದ್ದಾನೆ, ಮಲೆವ ಸವತಿಯರ ಕಿತ್ತೊಗೆವಂಥ ಧೀರೆ, ಎಂಬ ಅಹಂಕೃತಿಯ ರಾಣಿಯೇನಲ್ಲ. ಇಂಥ ವರ್ಣನೆಯ ನುಡಿ ಬರೆವವನಿಗೇ ಬರಿಯ ನುಡಿ, ಅಷ್ಟೆ. ಇನ್ನು ಕೇಳುವ ಜನಕೆ ಎನಿತು ನಿಜ? ಇದು ಉಚಿತವೇ ಎಂದು ಅವಳು ಅಂದಿಗೆ ಮುನ್ನ ಯೋಚಿಸಿರಲಿಲ್ಲ. ರಾಣಿಯನಿಂಥ ಮದ್ದಾನೆ ಎಂದು ಬಣ್ಣಿಸಿದ ಅದೆ ಕವಿಚಕ್ರವರ್ತಿ ಅದೆ ಕವಿತೆಯಲಿ ಅವಳ ಸರ್ವಾಂಗ ಸೌಂದರ್ಯವನು ದಲವಿದಲಗಳ ಬಿಡಿಸಿ ವ್ಯಾವರ್ಣಿಸಿದನಹುದು. ಇಂತಕಡೆ ಶಬ್ದವನು ಅರ್ಥವನು ಹಿಡಿದು, ಇದು

ಎಂತು, ಎಂಬರೆ? ರವಿಗೆ ಕಾಣದುದ ಕವಿ ತಾನು
ಬಣ್ಣಿಸುವನೆಂಬುದಿಂಥಲ್ಲಿಯೇ. ತಾ ಬರೆದ
ಮಲೆವ ಸವತಿಯರ ಕುಲಕಿವಳೊಂದು ಮದ್ದಾನೆ
ಎಂಬಷ್ಟು ಶಬ್ದಮಾತ್ರದ ಅರ್ಥವನು ಎತ್ತಿ
ರಾಣಿಯರು ಕದನವಾಡುವರೆಂದು ಕವಿಯೇನು
ಕನಸಿನಲಿ ಕಂಡನೆ? ಇವನ ಕೃತಿಯಲಿ ಇಂಥ
ಶಬ್ದ ಇಹುದೆಂದು ಶಾಂತಾದೇವಿ ಕಂಡಳೆ?
ಎಂತೆ ಆದರು ಕಾವ್ಯ ಉದ್ದೇಶಿಸದೆ ಸೊರೆದ
ರಸ ಇಂದು ವಿಷವಾಗಿ ಅರಮನೆಯ ಬಾಳುವೆಯ
ಬಟ್ಟಲನು ತುಂಬಿ ಸಿಂತಿತು. ಲಕ್ಷ್ಮಲಾದೇವಿ
ಅತ್ತ ಬುಸುಗುಟ್ಟಿ ನಿಂತಂತೆ ಶಾಂತಲೆಯುಬ್ಬೆ
ಮಾಚವ್ವೆ ಇತ್ತ ಬುಸುಗುಟ್ಟಿದಳು. "ಮೂರು ದಿನ
ಮುಚ್ಚಟೆಯ ಬಾಳ ಬಾಳಿದ ಲಕ್ಷ್ಮಲೆಯದೇನು
ಇಷ್ಟು ಉದ್ದಂಡತನ? ಪಟ್ಟಮಹಿಷಿಯ ಪಟ್ಟ
ಸುಳ್ಳೇನು? ಆ ಪಟ್ಟ ಶಾಂತಲೆಯದಲ್ಲವೆ?
ಇನ್ನು ಪಟ್ಟದರಾಣಿ ಉಳಿದ ರಾಣಿಯದಿರನು
ಆಳುತಿಹಳೆನಲು ತಪ್ಪೇ? ಆಳುವವಳೊಮ್ಮೆ
ದಂಡಿಸುವಳೆನಲು ತಪ್ಪೇ? ಹೊಗಳಿ ಬರೆವವರು
ಇದನೊರೆವ ವೇಳೆ ನುಡಿ ಅರೆವೀಸ ಮುರಿವೀಸ
ಮಿಂಚಿತೆನೆ ಅಪರಾಧವೇ?" ಎಂದು ಮುಂತಾಗಿ
ಅವಳು ಚರ್ಚೆಯನು ಬೆಳೆಸಿದಳು. ಬೊಮ್ಮಲೆಗೆ ಇದೆ
ಬೇಕಾದ ಮಾತು. ಅವಳದನು ಹಿಗ್ಗಿಸಿ ಹರಡಿ
ಹಿರಿಯರಸಿ ಉಸಿರಿಂದ ಇರುವುದೇ ಲಕ್ಷ್ಮಲೆಗೆ
ಸರಿಹೋಗದಂತೆ ಮಾಡಿದಳು. ಕೊನೆಯಲಿ ವಾದ
ಇಂತು ಮುಗಿಯಿತು. ಇನ್ನು ಹಿರಿಯರಸಿ ಎಲ್ಲಿಹಳು
ಅಲ್ಲಿ ಲಕ್ಷ್ಮಲೆ ಇರುವಳಲ್ಲ. ಅರಸನ ಕುವರ
ನರಸಿಂಹನನು ಹಿರಿಯರಾಣಿ ಉಳಿಸುವಳೆಂದು

ನಂಬಲೊಲ್ಲದು ಅವಳ ಮನಸು. ಏನೋ ಮಾಡಿ
ಎಂತಾದರೂ ನೋಡಿ ರಾಣಿ ಶಾಂತಲೆ ಅವನ
ಇನಿತರಲೆ ಕೊಲುವುದೋ ಕೊಲಿಸುವುದೊ ನಿಶ್ಚಯ.
ರಾಜರಿದ ತಿಳಿದು ಮಗನನು ಬೇರೆ ಊರಿನಲಿ
ತಕ್ಕ ಕಾವಲನಿಟ್ಟು ರಕ್ಷಿಸಿದರೇ ಒಳಿತು.
ಇಲ್ಲವೇ ತಾನು ವಿಷವನು ತಿಂದು ಅವನಿಗೂ
ವಿಷವ ತಿನ್ನಿಸಿ ತಮ್ಮ ಬಾಳ್ವಿಗಳ ಮುಗಿಸುವಳು.
ಮಗ ಸಾಯುವುದೆ ಉಂಟು. ಮಲತಾಯಿ ವಿಷವಿಕ್ಕಿ
ಕೊಂದರೆ ವಿಶೇಷವೇನಂತೆ? ಹೆತ್ತರಸಿ ಆ
ವಿಷವ ಇಕ್ಕಿದರೆ ಆಗದೆ?

ರಾಣಿ ಶಾಂತಲೆ

ಬಾಳ ಭಂಗದ ಆಳ ಎನಿತು ಎಂಬುದನಾಗ
ಎರಡು ಮೂರೇ ದಿನದಿ ಅನುಭವಿಸಿ ತಿಳಿದಳು.
ಎಲ್ಲಕೂ ಮಿಗಿಲಾಗಿ ಅವಳಿಗಿದು ಬೇಸರ:
ಅರಮನೆಯ ಊಳಿಗದ ಮಾರ ಬೋರನ ಮನೆಯ
ಸವತಿಹೆಂಡಿರು ಕಾದಿ ನುಡಿವಂತೆ ಅರಮನೆಯ
ರಾಣಿಯರು ಕಾದಿನುಡಿಯುವ ಕಾಲ ಬಂದಿತೇ!
ತನ್ನ ಮನಸಿನೊಳಿಲ್ಲದಿಹ ಕೆಟ್ಟ ಎಣಿಕೆಯನು
ಸರಿಯ ಅರಸಿತಿ ಹುಟ್ಟುಹಾಕಿ ದೊಡ್ಡದು ಮಾಡಿ
ಅದರ ಮೇಗಡೆ ಇಂಥ ಕಳಸ ಗೋಪುರವಿಟ್ಟು
ಜಗಳಮಾಡೆಂದು ಕರೆಯುತಲಿಹಳು. ದೈವವೇ
ನಿನ್ನಿಚ್ಛೆಯೇನು? ಏನಿರಬಹುದು ನಿನ್ನಿಚ್ಛೆ?
ಇಂತು ತನ್ನಲೆ ಚಿಂತೆಮಾಡಿ ಲಕ್ಷ್ಮಲೆಯೆಡೆಗೆ
ತಾನಾಗಿ ಹೋಗಿ ಶಾಂತಲೆ, ತನ್ನ ತಪ್ಪುಗಳು
ಏನೇ ಇರಲಿ ಅದನು ನೀನು ಮನ್ನಿಸು ತಂಗಿ,
ಎಂದು ಬೇಡಿದಳು. ಲಕ್ಷ್ಮಲೆ ಅದಕೆ ಒಪ್ಪಳು.
ಹಿರಿಯರಸಿ ಅರಸನಲಿ ಸಂಗತಿಯ ಬಿನ್ನವಿಸಿ

ಏನಗೆಯ್ವುದು ಎಂದು ಕೇಳಿದಳು. ಅರಸನಿಗೆ
ಏನೆಂದು ಹೇಳಲೂ ತೋರದಿದ್ದಿತು. ಅವನು,
ರಾಣಿ ಲಕ್ಷ್ಮಲೆ ಬೇರೆ ಎಲ್ಲಿರಲು ಬಯಸುವಳೊ
ಅಲ್ಲಿಯೇ ಇರಬಾರದೇಕೆ, ಎಂದನು ಒಮ್ಮೆ.
ಇದಕೆ ಶಾಂತಲೆಯು ಮನ ಒಪ್ಪಲಾರದು. ಪಾಪ,
ಮಗನ ಹೆತ್ತವಳು ಮಗನೊಡನೆ ಬೇರೆಡೆಗೆಯ್ದಿ,
ಮಗನ ಹೆರದವಳು ತಾನರಸನೊಡನೆಯೆ ಇಹುದು,
ಅವಳಿಗೇತಕೊ ತಪ್ಪು ಎಂದು ತೋರಿತು. ಅಂದು
ರಾಮನನು ಕಾಡಿಗಟ್ಟಿದ ಕೈಕಯಿಾದೇವಿ
ರಾಮನಿಗೆ ಪ್ರತಿಯಾಗಿ ಭರತನನು ತೋರಿದಳು.
ಅದುವೆ ತಪ್ಪಾಯಿತೆನೆ ಇಂದು ಅರಗುವರನನು
ಮಗಬಂಜೆಯಾದವಳು ಕಾಡಿಗಟ್ಟುವ ಧಾಷ್ಟ್ಯ
ಜಗಕೆ ಇನ್ನೆನಿತು ಕೇಡೆನಿಸುವುದೊ! ಅದು ಜಗಕೆ
ಕೇಡೆನಿಸದಿರ್ದೊಡೆಯು ತನಗೆ ಕೇಡೇ ನಿಜಕೆ.
ಯಾವ ಕರ್ಮದ ಫಲವೊ ಈ ಜನ್ಮದಲಿ ತನಗೆ
ಮಗನೊಬ್ಬನಿಲ್ಲ. ಈ ಜನ್ಮದಲಿ ಆಣ್ಮನನು
ಮಗನಿಂದ ಬೇರೆಮಾಡಿಸಿ ತಾನು ಸೊಗಬಾಳೆ,
ಪುತ್ರಘಾತಿನಿಯು ಪಾತಕ ಹೊದ್ದು, ಬಹಬಾಳು
ಮತ್ತಾವ ರೀತಿಯಲಿ ಮತ್ತೆಂತು ಕೊಂಕುವುದೊ!
ಇಂತು ಯೋಚನೆಯೊಳಾಳ್ದಾರಯಿಸಿ ಹಗಲೊಂದು
ಇರುಳೊಂದ ಕಳೆದು ಹಿರಿಯರಸಿ, ಸತ್ಯವ ಕಂಡು,
ಕರಿಗಡಲ ನೀರಾಳದಿಂದ ಮುತ್ತನು ಎತ್ತಿ
ತರುವವನು ಕಟ್ಟಿದ್ದ ಉಸಿರಿಂದ ತೊಳಲಾಡಿ
ಮತ್ತೆ ಉಸಿರೆಳೆವಂತೆ, ಸತ್ಯವನೆ ನಡೆಯುವೆನು
ಎಂಬ ನಿಶ್ಚಯ ಬರುವವರೆಗು ತನ್ನಲೆ ತೊಳಲಿ
ಆ ನಿಶ್ಚಯವ ಮಾಡಿ ನಿರ್ವೃತಿಯ ಉಸಿರೆಳೆದು
ತನ್ನ ನಡತೆಯನು ನಿರ್ಧರಿಸಿದಳು. ಅರಸನನು

ಸಾರಿ "ಈ ವಿಷಯುದಲಿ ಎಂತು ನಡೆವುದು ತನಗೆ
ತೋರದಿದೆ; ಶಿವಗಂಗೆಯುಲಿ ಒಬ್ಬ ಗುರು ಇಹರು;
ಅವರ ಸಾನ್ನಿಧ್ಯವನು ಸೇರಿ ಕೆಲದಿನ ಅವರ
ಸೇವೆಯುಲಿ ನಿಂತಿರಲು ತೊಡಕುಗಳು ಬಿಡಬಹುದು.
ಅಲ್ಲಿ ಹೋಹೆನು" ಎಂದು ಅಪ್ಪಣೆಯು ಬೇಡಿದಳು.
ರಾಣಿ ಶಾಂತಲೆ ಅರಸನನು ಬಿಟ್ಟು, ಗುರು ದೈವ
ಯಾತ್ರೆಯೆಂದುದು ಇದಕೆ ಮುನ್ನ ಎಂದೂ ಇಲ್ಲ.
ಇಂದು ಅವಳೇ ಇಂತು ನುಡಿಯೆ ವಿಷ್ಣುನೃಪಾಲ
ಅಹುದೆಂದೆ ಬಗೆದನಾ ಸಲಹೆಯುನು. ಅರಗುವರ
ಅರಮನೆಯೊಳೇ ಇಹನು; ಅವನ ತಾಯೂ ಇಹಳು;
ರಾಣಿ ಶಾಂತಲೆ ಗುರುಗಳಲಿ ಸೇವೆಯೆಸಗುವಳು;
ಸುಲಭದಲೆ ಹರಿಯಿತು ಸಮಸ್ಯೆ. ಅವನಿಂತೆಂದ:
"ನಿನ್ನ ಯೋಚನೆ ಎಂದಿನಂತೆ ಒಳ್ಳಿತು. ಅಂತೆ
ಮಾಡು. ಇನಿತರಲೆ ದೈವಪ್ರತಿಷ್ಠೆಯು ಮುಗಿಸಿ
ಪ್ರಸ್ಥಾನಮಾಡಬಹುದೇ ಚೆನ್ನ ಆದೀತು."
ತಾನೆ ಮಾಡಿದ ಸಲಹೆ; ದೊರೆ ಒಪ್ಪಿದನು ಅಷ್ಟೆ.
ಆದರೂ ತನ್ನನಗಲುವ ನುಡಿಗೆ ಮನದನ್ನ
ಇಷ್ಟು ಸುಲಭದಲಿ ಒಪ್ಪಿದನೆಂಬುದನು ಕಂಡು
ರಾಣಿ ಶಾಂತಲೆಯು ಮನ ಖಿನ್ನವಾಯಿತು. ಗಂಡು
ಹರೆಯುದಲಿ, ಸತಿ ಎಲ್ಲೊ ಹೊರಟಿರಲು, ಹೋಗುವುದು
ಬೇಡ, ಎಂಬಂತೆ ಮುಪ್ಪಿನಲಿ ಎಂಬನೆ? ಒಬ್ಬೆ
ಹೆಂಡಿರಿರುವರು ಹೇಳಬಹುದೇನೊ? ಒಬ್ಬಳನು
ಕಳುಹಿಯೂ ಇನ್ನಿಬ್ಬರಿರುವ ಗಂಡಸು ಇಂತು
ಹೇಳಬೇಕೇ? ದೊರೆಯು ಸಾನ್ನಿಧ್ಯವನು ಬಿಟ್ಟು
ರಾಣಿ ಮನಕುಗ್ಗಿ ತನ್ನಯ ಮಾಡಕೈತಂದು
ಸ್ಥಪತಿಯುನು ಕರಸಿದಳು. ಅವನ ಒಳಗಡೆ ಕರೆದು
"ಆಚಾರ್ಯರೇ ನೀವು ನನಗೊಂದು ಉಪಕಾರ

ಮಾಡಿಕೊಡಬೇಕು" ಎಂದಳು. ಅವನು ವಿನಯದಲಿ,
"ನಾನು ಸೇವಕ, ಸನ್ನಿಧಿಗೆ ಏನ ಮಾಡಿದರು
ಅದು ಸೇವೆ ಹೊರತು ಉಪಕಾರ ಎನಿಸುವುದೆಂತು?
ಬೆಸಸಬೇಕು" ಎಂದು ಉಸುರಿದನು. "ನೀವೀಗ
ನಿರ್ಮಿಸಿಹ ಮೂರ್ತಿಯನು ರಾಣಿ ಲಕ್ಷ್ಮಲೆಗಾಗಿ
ನಿರ್ಮಿಸಿದಿರೆಂದೆಣಿಸಿ ಈ ಪ್ರತಿಷ್ಠೆಯನೀಗ
ಅವಳ ಹೆಸರಿಂದ ನಡೆಸುವರೆ ನಾ ಬಯಸಿಹೆನು.
ಶ್ಲೋಕವನು ತಿದ್ದಿ ತಿಳಿಸಿರಿ. ನಾನು ಅರಸರಿಗೆ
ಅದನು ಬಿನ್ನಯಿಸುವೆನು." ಸ್ಥಪತಿ ರಾಣಿಯ ಎದುರು
ತಲೆಬಾಗಿ ಕೈಮುಗಿದು ಮುಂಡೆಗಾನಿಸಿ ವಿನಯ
ರಸವಾಗಿ ಹರಿದಂತೆ ಮೆಲುನುಡಿಯ ನುಡಿದನು:
"ಸನ್ನಿಧಿಯ ನುಡಿಯ ಶಿರಸಾವಹಿಸುವುದೆ ನನ್ನ
ಕರ್ತವ್ಯ. ಆದರಿದು ನನ್ನಿಂದ ಆಗದೇ!
ಏನಗ್ಗೆಯಲಿ ನಾನು? ಒಬ್ಬ ಮಾತೆಯ ಗರ್ಭ
ಧರಿಸಿ ಬೆಳಸಿದ ಮಗುವ ಜನನವಾಗುವ ವೇಳೆ
ತೆಗೆದು ಬೇರೊಬ್ಬ ಮಾತೆಯ ಗರ್ಭದೊಳಗಿರಿಸೆ
ಸಾಧ್ಯವೆ? ಇದನು ಸನ್ನಿಧಿ ಮನದೊಳಾರಯಿಸಿ
ಬೆಸಸಿದೊಡೆ ಬದುಕುವೆನು." ರಾಣಿ ಎಂದಳು: "ಈಗ
ಅರಮನೆಯಲೆದ್ದಿರುವ ವಾದದಲಿ ಇದು ಒಂದು
ಹೊರತು ಬೇರೆಯ ದಾರಿ ಕಾಣದಿದೆ." ಎಂದೆನಲು
ಸ್ಥಪತಿ ಬಿನ್ನಯಿಸಿದನು: "ದೇವಿಯರೆ, ಕಲ್ಲಿನಲಿ
ಕೊಡೆಯುತಿಹ ಮೂರ್ತಿ ಉಳಿದವರಿಗೇನೋ ಕಲ್ಲೆ.
ಅದಕೆ ತಡೆಯಿಲ್ಲ. ಈ ನನಗೆ ಅದು ಕಲ್ಲಲ್ಲ.
ಜ್ಯೋತೀರಸವೆ ಘನಿಸಿ ಕಯ್ಕಾಲು ಖಂಡ ನರ
ಬಾಯ್ಮೊಗು ಕಣ್ಣು ಕಣ್ಣೆಮೆಯಾಗಿ ತಿದ್ದುತಿದೆ.
ನಿಮ್ಮ ಪಾವನಗರ್ಭದಲಿ ಬೆಳೆಯ ಬಂದೊಂದು
ಹಸುಳೆ ಅದು. ಗರ್ಭದಲಿ ವಿಶ್ವಕರ್ಮನ ಅಂಶ

ಕುಳ್ಳಿರುತ ಹಗಲೆಲ್ಲ ಇರುಳೆಲ್ಲ ನವಮಾಸ
ಹಸುಳೆಯನು ತಿದ್ದುವಂದಕೆ ನಾನು ಇದುವರೆಗೆ
ಕರ್ಮಶಾಲೆಯನು ತಾಯವರ ಗರ್ಭವ ಗೆತ್ತು
ಆದರೊಳಗೆ ರಚಿಸುತಿಹ ವಿಶ್ವಕರ್ಮನೆ ಆಗಿ
ಮೂರ್ತಿಯನು ತಿದ್ದುತಿದ್ದಿಹೆನು. ಅದ ಈ ದಿವಸ
ಬೇರೆ ಗರ್ಭಕೆ ಒಯ್ವೆನೆಂತು? ನನ್ನಿಚ್ಛೆ ಇದು,
ನನಗೆ ಒಲ್ಲದು, ಅಂತರಿಂದ ತಮ್ಮಿಚ್ಛೆಯನು
ನಡಸದಿಹೆನು, ಎಂದು ಎಣಿಸದಿರಿ. ದೇವಕಿಯ
ಗರ್ಭದಲಿ ಜನಿಸಿದೊಡೆ ಕಂಸ ಕೊಲ್ಲಲು ಬಹನು
ಎಂದು ತಿಳಿದೂ ಕೃಷ್ಣಮೂರ್ತಿ ಅಲ್ಲಿಯೆ ಹುಟ್ಟಿ
ಹುಟ್ಟಿದಾನಂತರ ಯಶೋದೆಯನು ಸಾರಿದನು.
ಚೆನ್ನಕೇಶವಮೂರ್ತಿ ಅವನೆ; ಮತ್ತೇನಲ್ಲ.
ಯಾವುದೇ ಕಷ್ಟ, ನಿಷ್ಠುರ ಯಾವುದೇ ಇರಲಿ,
ಗರ್ಭದಲಿ ಎಡೆಗೊಟ್ಟ ಮಾತೆ ಜನ್ಮವನಿತ್ತು
ಹಸುಳೆಯನು ಉಳಿಸಿ, ತಾಯಿ." ರಾಣಿ ಉಸುರಿದಳು:
"ಉಳಿಸಿ ಎನ್ನುವಿರೇಕೆ? ಲಕ್ಷ್ಮಲಾದೇವಿಯರ
ಹೆಸರಿನಕ್ಕರವ ಆ ಪೀಠದಲಿ ಕೆತ್ತಿದರೆ
ಮೂರ್ತಿ ಉಳಿಯದೆ? ನಿಮ್ಮ ನುಡಿಯೆಲ್ಲ ನಮಗೊಪ್ಪು.
ಆದರೂ ಈಗ ಬಂದಿರುವ ಸಂಕಟದಲ್ಲಿ
ಮತ್ತೇನನೂ ಮಾಡಲಾರದೀಬಗೆ ನಿಮ್ಮ
ಬೇಡುತಿರುವೆನು." ಶಿಲ್ಪಿ "ನಾನರಿಸಿದೆರಡು ನುಡಿ
ತಮ್ಮ ಮನವನು ಮುಟ್ಟದಿರೆ ನಾನು ಕೆಟ್ಟಂತೆ.
ಇನ್ನೆಷ್ಟೊ ಮೂರ್ತಿಯನು ಬಿಡಿಸಿ ಪೂಜೆಗೆ ನಿಲಿಸಿ
ಕೃತಕೃತ್ಯನಾಗುವೆನು ಎಂದೆ ನಾ ಬಗೆದಿದ್ದೆ.
ಅದು ಕೂಡದೆಂದು ದೈವೇಚ್ಛೆಯೋ ಎಂತೆಂದು
ನನಗೆ ಮನದಲಿ ಭೀತಿ ತೋರುತಿದೆ. ರಾಣಿಯರು
ಮತ್ತೆ ಯೋಚಿಸಿ ಕೊನೆಯ ನಿರ್ಧರವ ಬೆಸಸಿದರೆ

ಮುಂದೆ ನಾನೇನಗೆಯ್ವುದು ಎಂದು ದೇವರನು
ಕೇಳಿಕೊಂಬೆನು" ಎಂದ.

ಇಂತೆಂದು ಆಚಾರ್ಯ
ಕರ್ಮಶಾಲೆಗೆ ಸಾರಿದನು. ರಾಣಿ, ಅಂದೆಲ್ಲ
ಮತ್ತೆ ಚಿಂತೆಯೊಳದ್ದಿ ಮತ್ತೆ ತಾನಲ್ಲಿಂದ
ಹೊರಡುವುದೆ ಸರಿಯೆಂದು ಮನಕೆ ನಿಶ್ಚಯ ತೋರಿ,
ಮರುದಿವಸ ತಾಯ್ಸಹಿತ ಕೆಲವೆ ಸೇವಕರೊಡನೆ
ಶಿವಗಂಗೆಗೆಂದು ಹೊರಟಳು. ಹೋಹ ವೇಳೆಯಲಿ
ಲಕ್ಷ್ಮಲೆಯ ಬಳಿಸಾರಿ "ತಂಗಿ ನಾ ಕೆಲಕಾಲ
ಶಿವಗಂಗೆಯಲಿ ಗುರುವ ಪೂಜಿಸುವ ಸಲುವಾಗಿ
ಹೊರಡಲನುವಾಗಿಹೆನು. ಪೂಜೆಗಳ ಪೂರೈಸಿ
ಬರಲು ದಿನ ಕಳೆಯುವುದು. ಚೆನ್ನಕೇಶವ ಮೂರ್ತಿ
ಸಿದ್ಧವಾಗಿದೆ. ಅದಕೆ ನಿನ್ನ ಹೆಸರನು ಬರೆದು
ಮುಗಿಸಿಕೊಡಿರೆಂದು ಆಚಾರ್ಯರಿಗೆ ಒರೆದಿಹೆನು.
ಅದನು ನಿನ್ನತೆ ಹೆಸರಿನಲಿ ನಿಲಿಸಿ ಶುಭದಿವಸ
ಮೂರ್ತಿಪ್ರತಿಷ್ಠೆ ಮಾಡಿಸು. ನಿನ್ನ ಸಂತೋಷ
ನನ್ನ ಸಂತೋಷ. ನಿನ್ನನು ಬಿಟ್ಟು ನನಗಿನ್ನು
ಬೇರೆ ಸಂತೋಷವೆಂಬುದು ಇಲ್ಲ, ಕೇಳಕ್ಕ.
ಕುಲವ ಬೆಳಸುವ ಕರುಳು ಎಂದಿಗೂ ತಂಪಾಗಿ
ಸುಖದಿಂದ ಬಾಳು" ಎಂದಳು.

ರಾಣಿ ಶಾಂತಲೆ
ಅರಮನೆಯ ತೊರೆದೆ ಹೋದಳು ಎಂದು ಊರೂರೆ
ಮನದೊಳರಿಯಿತು, ಒಳಗೆ ಮಮ್ಮಲನೆ ಮರುಗಿತು.
ಅರಸನಿಗು ಕೊರಗೆ. ಲಕ್ಷ್ಮಲೆಗೆ ಏನೋ ತೆರದ
ಮೊದ್ದು ಸಂತಸ. ಬೊಮ್ಮಲೆಯ ಮನಕೆ ಹಿರಿಹಿಗ್ಗು.
ಮೂರ್ತಿಯನು ಹೆರಲಿದ್ದ ಹಿರಿಯರಸಿ ಅದ ತೊರೆದು
ಹೊರಟು ಹೋದುದು ತಿಳಿದು ಆಚಾರ್ಯ ಕುಗ್ಗಿದನು.

ಮರುದಿವಸ ರಾಣಿ ಬೊಮ್ಮಲೆ, ಅರಸನಿಗೆ ತಿಳಿಸಿ,
ಲಕ್ಷ್ಮಲೆಯ ಮುಂದಿಟ್ಟು ಕರ್ಮಶಾಲೆಗೆ ಬಂದು,
ಮೂರ್ತಿಯಡಿಯಕ್ಕರದಿ ಶಾಂತಯಾ ಎಂಬಲ್ಲಿ
ಬರಿದೆ ಲಕ್ಷ್ಮಾಸ್ತ್ರೀ ಎಂದು ತಿದ್ದಿ ಎಂದಳು. ಶಿಲ್ಪಿ
"ದೇವಿಯರೆ, ಈ ಮೂರ್ತಿ ಹಿರಿಯರಸಿಯರ ಹೊರತು
ಬೇರೆ ಯಾರದೆ ಗರ್ಭದಲಿ ಇನ್ನು ನಿಲತಗದು.
ಧರಿಸಿದ್ದ ತಾಯಿ ಕರುಳನು ಕಿತ್ತು ನಡೆದಿರಲು
ಇದರ ಹೊಕ್ಕುಳು ಗಾಯವಾಗಿಹುದು. ಈ ಮೂರ್ತಿ
ಧರಿಸಿದಾಕೆಯು ಬಿಟ್ಟು ಬಾಳಲಾಗದು ಇನ್ನು.
ತಾವೇ ಪರಾಂಬರಿಸಿ" ಎಂದು ಉಳಿಯನು ಎತ್ತಿ
ಚೆನ್ನಕೇಶವನ ಮೂರ್ತಿಯು ಹೊಕ್ಕುಳೆಡೆಯಿಕ್ಕಿ
ಪೆಟ್ಟ ಚಕ್ಕೆಯು ಹಾರಿಸಿದನು. ಇನ್ನೇನು, ಇಕೊ,
ಉಸಿರು ಬಂದಿತು, ಮೂರ್ತಿ ಮಾತನಾಡುವುದೇನೊ,
ಎಂಬಂತೆ ಕಣ್ಣ ಕರೆಯುತಲಿದ್ದ ವಿಗ್ರಹ
ಭಿನ್ನವಾಯಿತು; ಅದರ ಕಳೆ ಎಲ್ಲೊ ಹೋಯಿತು.
ಸ್ಥಪತಿಯಾದವನ ಮುಖ ಕೆಟ್ಟಿದ್ದ ರೀತಿಯನು
ಹೇಳುವುದು, ನೋಡುವುದು, ಬೇಡ. ಯಾವುದೊ ದುಃಖ
ಘನಿಸಿ ಹೊಳೆವಂತೆ ಕಂಡವು ಕಣ್ಣು. ದೇವರನು,
ಭ್ರೂಣವನು, ಕೊಂದವನ ಮುಖಭಾವ ಮಡುಗಟ್ಟಿ
ಆತ್ಮಹತ್ಯಕೆ ಮನವ ನಿಶ್ಚಯಿಸಿ ನಿಂದವನ
ವಿಹ್ವಲತೆ ಅವನ ಕವಿಯಿತು.
ರಾಣಿ ಶಾಂತಲೆ
ನಿರ್ಮಿಸಲು ಯೋಚಿಸಿದ ದೇಗುಲದ ಚಾರಿತ್ರ
ಕೊನೆಗಂಡಿತಿಂತು. ಹೊಕ್ಕುಳು ಹರಿದ ಚೆನ್ನಿಗ
ಎಂಬುದಕೆ ಅದನು ತೊಪ್ಪಳ ಚೆನ್ನಿಗನ ಮೂರ್ತಿ
ಎಂದು ಬೊಮ್ಮಲೆ ನುಡಿಯೆ ಚೇಟಿಯರು "ತೊಪ್ಪಳ"ನು
ತಪ್ಪಳೆ ಎಂದು ತಿಳಿದುದೆ ಮುರಿದ ವಿಗ್ರಹವ

ಕಪ್ಪೆ ಚೆನ್ನಿಗಮೂರ್ತಿ ಎಂದು ಕರೆದರು. ಜಕಣ,
ಇದು ಕೂಡ ಒಂದು ಹದನೆಂದು, ಆ ವಿಗ್ರಹದ
ಹೊಕ್ಕುಳೆಡೆ ಶಿಲೆ ದುಷ್ಟವಾಗಿದ್ದು ತನ್ನ ಮಗ
ಆ ಉದಯ ಬಂದವನು ಅದ ತನಗೆ ತಿಳಿಸಿದನು,
ಇರಬಹುದೆ ಎಂದು ಮೂರ್ತಿಯ ಹೊಕ್ಕುಳನು ಕೆತ್ತಿ
ನೋಡೆ ಅಂತೇ ಇದ್ದಿತೆಂದು ಕತೆ ಹರಡಿದನು.
ಅರಮನೆಯ ಜಗಳವನು ಬರುವೆಲ್ಲ ಕಾಲಕೂ
ನಿಲಿಸಲೇತಕೆ ಎಂದು ಮಂದಿ ಈ ಕತೆಯನೇ
ಭದ್ರಮಾಡಿತು.

ಇನ್ನು ಮೂರು ಮಾತಿನಲಿ ಕತೆ
ಮುಗಿಯುವುದು. ರಾಣಿ ಶಾಂತಲೆ ತನ್ನ ದೇವರಿಗೆ
ಆಚಾರ್ಯನಿಂದಾದ ಅಪಘಾತವನು ಕೇಳಿ
ಮನಮರುಗಿ ಮೆಯ್ಕುರಗಿ ನಾಲ್ಕುವರುಷದ ದಿವಸ
ನವೆದು ಬೇಲೂರ ಮತ್ತೊಮ್ಮೆ ಸಾರದೆ ಅಲ್ಲೆ,
ಶಿವಗಂಗೆಯಲೆ, ತನುವ ನೀಗಿದಳು. ಲಕ್ಷ್ಮಲೆಯ
ಕುವರ ಆ ಹಿರಿಯ ನರಸಿಹ್ಮ ಏನೋ ವ್ಯಾಧಿ
ತಟ್ಟಿ ಅನಿತರಲೆ ಅಳಿದಿರೆ, ರಾಜವಂಶವನು
ಉಳಿಸಿಕೊಡು ಎಂದು ಶಾಂತಲೆ ದೇವರನು ಬೇಡಿ
ವ್ರತಗಳನು ನಡಸಿದಳು. ಅವಳು ತೀರುವ ಮುನ್ನ
ಮತ್ತೊಬ್ಬ ಮಗನಾಗಲಿಲ್ಲ. ವತ್ಸರ ಎರಡು
ಕಳೆದಿರಲು, ವಿಷ್ಣುವರ್ಧನರಾಯ ಯಾವಂದು
ಬಂಕಾಪುರವ ಗೆಲಿದ, ಆ ದಿವಸ ಲಕ್ಷ್ಮಲೆ
ಮತ್ತೆ ಗಂಡೊಂದ ಹಡೆದಳು. ಅದೇ ಚರಿತೆಯಲಿ
ವಿಜಯನರಸಿಂಹ ಎಂಬಭಿಧಾನದಲಿ ಮುಂದೆ
ರಾಜ್ಯವಾಳಿದ ಕೂಸು. ವಿಗ್ರಹವ ಭಂಜಿಸಿದ
ಸ್ಥಪತಿ ತಾನಿನ್ನು ಮೂರ್ತಿಗಳ ನಿರ್ಮಿಸನೆಂದು
ಹುಟ್ಟೂರು ಕೈದಾಳವನು ಸಾರಿ ಕೆಲಕಾಲ

ಕ್ರೂರಪ್ರಾಯಶ್ಚಿತ್ತದಲಿ ಉಸಿರ ನೋಯಿಸುತ
ದುಃಖದೊಳಗಾಳಿದನು. ಕೆಲವು ವತ್ಸರ ಕಳೆದು,
ಮೂರ್ತಿಯನು ಭಂಜಿಸಿದ ಕ್ರಿಯೆಗೆ ನಿಷ್ಕ್ರಿಯೆ ಬೇರೆ
ಮೂರ್ತಿಯನು ರಚಿಸುವುದೆ ಎಂದು ಬಲ್ಲವರೊರೆಯೆ,
ತನ್ನ ಊರಿನಲೆ ಬೇರೊಂದು ಮೂರ್ತಿಯ ಮಾಡಿ
ನಿಲಿಸಿ ಶಾಂತಿಯನು ಪಡೆದನು. ರಾಣಿ ಶಾಂತಲೆ
ಬಯಸಿದ್ದ ಬಯಕೆ ನಡೆಯದೆ ನಿಂತಿತೇ ಎಂದು
ಕನಿಕರಿಸಿ ವಿಷ್ಣುವರ್ಧನರಾಯ ತನತೆಂಬ
ವಿಜಯನಾರಾಯಣನ ಮೂರ್ತಿಯನೆ ಎಲ್ಲರಲಿ
ಚೆನ್ನಕೇಶವನೆಂದು ಕರೆದು ಹೊಗಳಿದನಹುದು.
ದೊರೆಯ ಇಚ್ಛೆ ಇದೆಂದು ಊಹಿಸಿದ ಜನ ಅವನ
ಮನವನನುಸರಿಸಿ ಆ ಹೆಸರಿಂದಲೇ ಕರೆದು
ಬೇಲೂರ ದೇವರಿಗೆ ಚೆನ್ನಕೇಶವನೆಂದೆ
ಹೆಸರು ವಾಡಿಕೆಯಾಗಿಹುದು ಇಂದು. ಶುಭಮಸ್ತು.

* * *

ಈ ಕತೆಯ ಕೇಳಿ ಗೆಳೆಯರು ರಾಣಿ ಶಾಂತಲೆಯ
ಕೊಂಡಾಡುತಿರಲು, ಹಿರಿಯಣ್ಣ ಕತೆಯನು ಕುರಿತ
ತಮ್ಮ ಟೀಕೆಯಲಿ ತೊಡಗಿದರು. "ದಿನ ಬೆಳಗಾಗ
ಶಾಸನವನೋದುವುದೆ ಕೆಲಸವಾಗಿಹ ಗೆಳೆಯ
ಕೃಷ್ಣಮೂರ್ತಿಗೆ ತಕ್ಕ ಕಥೆ ಇದು. ಮಹಾಜನರು
ಅದು ಎಂದಿನಿಂದಲೋ, ಕಪ್ಪೆ ಚೆನ್ನಿಗಮೂರ್ತಿ
ಹೊಕ್ಕುಳಲಿ ಕಪ್ಪೆ ಇದ್ದುದರಿಂದ ಪೂಜಿಸಲು
ತಕ್ಕುದಲ್ಲದೆ ಹೋಗಿ ಶಿಲ್ಪಿ ಆದ ಕೆಡಿಸಿದನು,
ಎಂದೆ ನಂಬಿಹರು. ಮೂರ್ತಿಯನು ಜಕ್ಕಣಶಿಲ್ಪಿ
ಕೆಡಿಸೆ ಕಾರಣ ಬೇರೆ ಒಂದ ಊಹಿಸಿ ಗೆಳೆಯ
ಈ ಕತೆಯ ಕಟ್ಟಿಹರು. ಇದು ನಿಜವೆ ಅಲ್ಲವೆ
ಎಂಬ ಪ್ರಶ್ನೆಯೆ ಇಲ್ಲ. ನಿಜವಾಗಿ ನಡೆದುದನು

ಇತಿಹಾಸವೆನ್ನುವೆವು. ಕತೆ ಕತೆಯೆ. ಮೊತ್ತದಲಿ
ಇಂತು ನಡೆದಿರಬಹುದು ಎಂದು ನಂಬುವ ರೀತಿ
ಬೆಳೆಯಿತೇ ಅದೆ ಕತೆಗೆ ಹಿರಿಯ ಗುಣ. ಈ ಕತೆ
ಅಂತು ಬೆಳೆದಿದೆಯೆಂದು ನನಗೆ ತೋರುತಲಿಹುದು.
ರಾಣಿಶಾಂತಲೆ ಉದಾತ್ತ ಸ್ವಭಾವದ ಮಹಿಳೆ,
ವಿಷ್ಣುವರ್ಧನನ ಬಾಳನು ಆಳಿ, ವೈಭವದಿ
ಬಹುವರುಷ ಇದ್ದು, ಕೊನೆದಿನಕೆ ಶಿವಗಂಗೆಯಲಿ
ಉಸಿರ ನೀಗಿದಳೆಂದು ಶಾಸನದೊಳೊರೆದಿಹುದು.
ಕಪ್ಪೆಚೆನ್ನಿಗನ ಗುಡಿಯಲಿ ಕಲ್ಲ ಮೇಲಿರುವ
ಶಾಸನದ ನುಡಿ "ಸವತಿಗಂಧ ಹಸ್ತಿ" ಎಂಬ
ಶಬ್ದಗಳ ಮುಂದೆ ಒಂದೆರಡು ಪದದಲೆ ಮುಗಿದು
ಅರ್ಥದಲಿ ನಿಂತಿಹುದು. ಇನ್ನು ಊಹೆಗೆ ಬೇರೆ
ಏನೇನು ಆಧಾರ ಇರಬಹುದೊ ನೆನವಿಲ್ಲ.
ಅದು ಎಂತೆ ಇರಲಿ. ವಿಭವದಲಿ ಬಾಳಿದ ಅರಸಿ
ಹಿರಿಯ ಶಾಂತಲೆಯು—ಹಿರಿಯಳು ಈಕೆ; ಬೇರೊಬ್ಬ
ರಾಣಿಶಾಂತಲೆ ವಿಷ್ಣುವರ್ಧನನ ಬಾಳಿನಲಿ
ಆಮೇಲೆ ಕಾಣುವಳು; ಅವಳ ಮಗಳೂ ಒಬ್ಬ
ಶಾಂತಲೆಯೆ; ಚಿಕ್ಕಶಾಂತಲೆ;—ಹಿರಿಯ ಶಾಂತಲೆಯ
ಶೀಲಸ್ವಭಾವಗಳು ಎಂತು ಇದ್ದಿರಬಹುದು
ಎಂದು ಕತೆಗಾರ ಊಹಿಸಿದ ಪರಿಯನು ನೀವು
ಒಪ್ಪಿಕೊಂಡುದು ಕಾಣುತಿದೆ. ಇನ್ನು ಇದಕಿಂತ
ಹೆಚ್ಚು ಏನಿದೆ ನಾನು ಹೇಳುವುದು?''

ಹಿರಿಯಣ್ಣ

ಟೀಕೆಯನು ಮುಗಿಸಿರಲು ರಾಮು "ನಾಳೆಯ ದಿನ
ಕತೆಯ ಹೇಳುವ ಸರತಿ ಚಿಕ್ಕರಾಜನ ಪುರದ
ದೊಡ್ಡ ಸುಬ್ಬಯ್ಯನದು" ಎಂದ. "ಯಾರಯ್ಯ ಇದು"
ಎಂದು ಕೇಳಿದರೆ-ಸುಬ್ಬಯ್ಯನನು ತೋರಿದ.

ಸುಬ್ಬಯ್ಯ ತನ್ನ ಹೆಸರಿನ ಹಿಂದೆ ಬಳಸುತಿಹ
ಅಕ್ಷರದ ವಿವರ ಇದು ಎಂದು ತಿಳಿಯಿತು ಆಗ.
ಸುಬ್ಬಯ್ಯ ಮರುದಿವಸ "ನಾರದರ ಅನುಭವ"
ಎಂಬ ಕತೆಯನು ಹೇಳಿದರು: ಮುಂದೆ ಇದೆ ಅದು.

# ನಾರದರ ಅನುಭವ

ಕತೆಗಿತೆಯನೆಂದೆ ಆಗಲಿ ಹೇಳದವನಿಂದ
ಒಂದು ಕತೆ ಹೇಳಿಸುವೆನೆಂದು ದೀಕ್ಷೆಯ ತಳೆದು
ರಾಮಣ್ಣ ನನ್ನ ಹಿಡಿದಿಹರು; ಒಳ್ಳಿತು; ಇರಲಿ.
ಬೋನಿನಲಿ ಸಿಕ್ಕಿರುವ ಇಲಿ ಸಲಾಕಿಯ ಕಡಿದು
ಹೊತ್ತು ಕಳೆವಂತೆ ನನ್ನಿಂದಾದ ರೀತಿಯಲಿ
ಇವರ ಮಾತನು ನಡೆಸಿ ಮುಗಿಸುವೆನು.
ಒಂದು ದಿನ
ನಾರದಮಹರ್ಷಿ ಶ್ರೀಕೃಷ್ಣನನು ನೋಡುವರೆ
ದ್ವಾರಕೆಗೆ ಬಂದು ಸೇರಿದರು. ಯದುನಾಥನಿಗೆ
ಇವರ ಕಂಡರೆ ವಿಲಕ್ಷಣಪ್ರೇಮ. ನಾರದರೊ
ಕೃಷ್ಣನನು ಎಲ್ಲರಿಗು ಮೊದಲು ಯೋಗೇಶ್ವರ
ಎಂದು ಕರೆದವರು. "ಭೋಗದ ಐದು ಅಗ್ನಿಗಳ
ಮಧ್ಯದಲಿ ನಿಂತು ಕಾವನು ಕಾಣದವನಯ್ಯ
ನೀನು, ಕೃಷ್ಣ," ಎಂದು ಅವರವನ ಹೊಗಳುವರು.
ಕೃಷ್ಣನಿಂತಹ ನುಡಿಗೆ ಉಂ ಎನನು, ಉಹು ಎನನು.
ಆ ದಿವಸ ನಾರದರು ಬರುತಿರಲು ಶ್ರೀಕೃಷ್ಣ
ಎದುರಿಗೈತಂದು ವಂದಿಸಿ, ನಗೆಯ ಮುಖದಿಂದ
ಸ್ವಾಗತವ ನುಡಿದು, ಅಂತಃಪುರದ ಏಕಾಂತ
ಮಂದಿರಕೆ ಕರೆದೊಯ್ದು ಶಯ್ಯಾಸನದ ಮೇಲೆ
ಕುಳ್ಳಿರಿಸಿ, ಎಲ್ಲಿಂದ ಬಿಜಮಾಡಿದಿರಿ, ಎಂದು
ಕೇಳಿದನು. ದೇವರ್ಷಿ ತಕ್ಕ ಉತ್ತರವಿತ್ತು
ಇಂತು ನುಡಿದರು: "ಕೃಷ್ಣ, ಇಂದ್ರಲೋಕದೊಳೀಗ
ಮೂರುದಿವಸದ ಹಿಂದೆ ಯಾವುದೋ ಮಾತಿನಲಿ,
ಹಲ ಹೆಂಡಿರನು ಪಡೆದು ಎಲ್ಲರೊಳು ನಗೆಯಾಡಿ
ಕಲಹವಿಲ್ಲದೆ ಇಹನು ಶ್ರೀಕೃಷ್ಣ ಹೊರತಾಗಿ
ಲೋಕದಲಿ ಯಾವನೂ ಇಲ್ಲ, ಎಂದರು. ಇದು

ನಿಜವೆಂದು ನನಗೆ ಕಂಡಿತು ಕಂಡೆಯಾ? ಅಂದು
ನಿನ್ನೆಡೆಗೆ ಬಂದು ಇದರಾಂತರ್ಯವೇನೆಂದು
ತಿಳಿಯ ಬಯಸಿದೆನು. ಇಕೊ, ಬಂದಿಹೆನು. ದೇವ ಋಷಿ,
ಬ್ರಹ್ಮಮಾನಸಪುತ್ರ, ಎಲ್ಲವನು ಬಲ್ಲವನೆ
ನಿಜ, ನಾನು : ಆದರೂ ನಿನ್ನ ಬಲ್ಲವನೆಂದು
ಹೇಳುವಂತಿಲ್ಲ. ಯೋಗಗಳರಸು ನೀ ನಡೆವ
ನಡೆ ನೋಡೆ ಬಹು ಚೆನ್ನ, ತಿಳಿಯುವರೆ ಅಳವಲ್ಲ.''
ಶ್ರೀಕೃಷ್ಣ ನಕ್ಕ : "ಋಷಿಗಳೆ, ನೀವು ಕಾಣದಿಹ
ಬ್ರಹ್ಮವಿದ್ಯೆಯೆ? ಹೆಣ್ಣು ಮನ ಸರಳ. ಒಲವಿಂದ
ಒಮ್ಮೆ ನೋಡಿದರೆ, ಆದ ಆರುವಾರದ ದಿವಸ
ನೆನೆಯುತ್ತ ಕಾಲಕಳೆಯುವುದು. ನಾನಾದರೂ
ನೀವಾವುದನು ಯೋಗವೆಂಬಿರೋ ಆದರಿಂದ,
ಆಗಾಗ ಒಂದುದಿನ ಎರಡುದಿನ ಮೂರುದಿನ,
ಒಟ್ಟನಲಿ ಎಲ್ಲ ಇವರೊಡನೆ ಆಟದೊಳಿದ್ದು
ಮನಗಳನು ತಣಿಸುವೆನು. ಸತ್ಯಭಾಮೆಯ ಹೊರತು
ಉಳಿದವರು ಇದನೊಪ್ಪಿ ಸಂತೋಷದಿಂದಿಹರು.''
ನಾರದಮಹರ್ಷಿ, "ಕೃಷ್ಣಾ, ನೀನು ಯೋಗದಲಿ
ಇವರೆಲ್ಲರೊಡನೆ ಸರಸದೊಳಿರುವ ಪರಿಯೆಂತು
ನೋಡಲೆನಗಾಸೆಯಾಗಿದೆ ; ನೋಡಬಹುದೇನು ? ''
ಎಂದು ಕೇಳಿದರು. ಶ್ರೀಕೃಷ್ಣ, "ಓ ಅದಕೇನು ?
ಇಂದೆ ನೋಡುವಿರಂತೆ,'' ಎಂದು ಅಷ್ಟರೊಳಲ್ಲಿ
ರುಕ್ಮಿಣೀದೇವಿ ಬರೆ, "ನಾರದ ಮಹರ್ಷಿಗಳ
ಸತ್ಕರಿಸು ; ನಾನು ಅವರೊಡನೆ ನಿಮ್ಮೆಲ್ಲರೆಡೆ
ಇಕೊ ಈಗ ಬರುವವನು,'' ಎಂದು ನುಡಿದನು. ದೇವಿ
ಸೇವಕಿಯರನು ಕರೆದು ಅತಿಥಿಪೂಜೆಯ ವಸ್ತು
ಎಲ್ಲವನು ತರಹೇಳಿ, ಅಂತೆ ಅರಸರು ಇಂದು
ಎಲ್ಲ ರಾಣಿಯರ ಕಾಣುವರೆಂದು ತಿಳಿಸೆಂದು

ಆಣತಿಯ ಮಾಡಿ, ತಾವೂ ಭಕ್ತಿಭಾವದಲಿ
ಋಷಿಯ ಪೂಜೆಗೆ ಉಪಸ್ಕರಣಗಳನಣಿಮಾಡಿ
ಬಂದು ನಿಂತರು. ದೇವಿ ನೀರೆರೆಯೆ, ಶ್ರೀಕೃಷ್ಣ
ತುಂಬ ಗೌರವದಿಂದ ಹೊನ್ನತಾಂಬಾಳದಲಿ
ನಾರದರ ಪಾದಗಳ ತನ್ನ ಕೈಯಿಂದಲೇ
ತೊಳೆದು, ವಸ್ತ್ರಗಳಿಂದ ಮೆಲ್ಲಮೆಲ್ಲನೆ ಒತ್ತಿ,
ಅವರ ಕರೆತಂದು ಭೋಜನಪೀಠದೊಳಗಿರಿಸಿ
ವರ್ಣಿಸಲು ಬಾರದಾದರದಿಂದ ಬಹುತೆರದ
ಉಣಿಸುಗಳ ಹಣ್ಣುಗಳ ಹಾಲ ಎಟುಕಿಸಿಕೊಟ್ಟು
ಔತಣವ ನಡೆಸಿದನು. ರುಕ್ಮಿಣೀದೇವಿಯರು
ಇದರೊಳೆಲ್ಲವು ತನ್ನ ದೊರೆಯೊಡನೆ ಸಹಕರಿಸಿ
ಗೃಹಿಣಿಯಾನಂದದಲಿ ಆಳಿದರು. ಸತ್ಕಾರ
ಮುಗಿದಿರಲು ದಂಪತಿಗಳತಿಥಿಯನು ಮತ್ತೆ ಆ
ಶಯ್ಯಾಸನಕೆ ತಂದು ಕುಳ್ಳಿರಿಸಿ, ಬಳಿಯಲೇ
ಇಬ್ಬರೂ ಕುಳಿತು, ಅದು ಏನು ಮಾತೋ ಏನೊ,
ಆತನಿಗೆ ರುಚಿಸುವಂದದ ನಾಲ್ಕು ಸಂಗತಿಯ
ಎತ್ತಿ ನಾಲ್ಕಾರು ಮಾತನು ಆಡಿ, ನಾಲಗೆಗೆ
ಔತಣದೊಳಾದ ಸವಿಗೂ ಮಿಕ್ಕ ಸವಿಯೊಂದ
ಋಷಿಯ ಮನದಲಿ ಮೂಡಿಸಿದರು. ಕೆಲ ಹೊತ್ತಿಂತು
ಜೊತೆಗಿದ್ದು ದೇವಿ ಏನೋ ಕೆಲಸವಿಹುದೆಂದು
ಒಳಗಡೆಗೆ ಸಾರೆ, ಶ್ರೀಕೃಷ್ಣ, "ಋಷಿಗಳೆ, ಇನ್ನು
ಸತ್ಯಭಾಮೆಯ ಬಳಿಗೆ ಹೋಗೋಣವೇ," ಎಂದು
ಕೇಳಿದನು. ಅವರು ಆಗಲಿ ಎನಲು, ಜೊತೆಯಾಗಿ
ಭಾಮೆಯಾಲಯಕೆ ಸಾರಿದರಿವರು. ಬಾಗಿಲಲಿ
ಶ್ರೀಕೃಷ್ಣ ಜೊತೆಯಲೇ ನಡೆಯುತಿರುವುದು ಋಷಿಗೆ
ಕಾಣುತಿದೆ. ಬಾಗಿಲಲಿ ನಿಂತು ಒಳಕಡೆ ನೋಡೆ,
ಸತ್ಯಭಾಮೆಯ ಮುಂದೆ ನಿಂತು ಗಲ್ಲವ ಹಿಡಿದು

ಹಣೆಯ ತಿಲಕವ ತಿದ್ದುತಿಹನು. ಪೂರ್ವಕ್ಷಣಕೆ
ತನ್ನ ಬದಿಗಿದ್ದ ಶ್ರೀಕೃಷ್ಣ ಈಕ್ಷಣ ಅಲ್ಲಿ ;
ಪತ್ನಿಯನು ಆರಾಧಿಸುವ ಕ್ರಿಯೆಯ ಮಧ್ಯದಲಿ ;
ನಾರದರ ಆಗತಾನೇ ಕಂಡವೊಲು ನಮಿಸಿ
"ನೋಡು, ಭಾವಾ, ಮಹರ್ಷಿಗಳು ದಯೆಗೆಯ್ದಿಹರು"
ಎಂದು ನುಡಿದನು. ಸತ್ಯಭಾಮೆ, ಈ ಹೊತ್ತಿನಲಿ
ಇವರು ಏತಕೆ ಬಂದರೋ ಎಂದು ಮನಸಿನಲಿ
ಬೇಸರವನನುಭವಿಸಿ, ಇಸಿಸ ಮುಖದಲಿ ತೋರಿ,
ಇನಿಯನೊಂದಿಗೆ ನಾರದರ ಸಮ್ಮುಖಕೆ ಬಂದು
ಅವರ ಕರೆದೊಯ್ದು ಕುಳ್ಳಿರಿಸಿ, ಎರಡೋ ಮೂರೊ
ಮಾತುಗಳ ನುಡಿದು ಸುಮ್ಮನೆ ಇಹಳು. ಶ್ರೀಕೃಷ್ಣ
ವಿಶ್ವಾಸದೊಂದೆರೆಡು ಮಾತುಗಳ ತಾ ನುಡಿದು
ಬಾಗಿಲಲಿ ಬಿಟ್ಟುಬಹೆನೆಂದು ಭಾಮೆಗೆ ಹೇಳಿ
ನಾರದರ ಜೊತೆಗೆ ಹೊರಟನು. ಜಾಂಬವತಿಯ ಮನೆ
ಆ ಮುಂದೆ. ಅಲ್ಲಿಯೂ ಇವರು ಹೊಸ್ತಿಲವರೆಗೆ
ಜೊತೆಯಲೇ ನಡೆದಿಹರು. ಅದ ಸೋಕಿದೊಡನೆಯೇ
ನಾರದರ ಕಣ್ಗೆ ಬದಿಯಲಿ ಇದ್ದ ಶ್ರೀಕೃಷ್ಣ
ಮರೆಯಾಗಿ ಒಳಗೆ ಜಾಂಬವತಿಯ ಸಂಗಡ ಆವನು
ಚತುರಂಗದಾಟದಲಿ ಕುಳಿತಿಹುದು ಕಂಡಿತು.
ಅಲ್ಲಿಯೂ ಅಂತೆ ಮರ್ಯಾದೆಗಳು. ಜಾಂಬವತಿ
ನಾರದರ ನಿಜದ ಆದರದಿಂದ ಸ್ವಾಗತಿಸಿ
ಭಕ್ತಿಯಲಿ ನಮಿಸಿ ಹಣ್ಣೇನು ಹಾಲೇನೆಂದು
ಸಡಗರಿಸತೊಡಗಿದಳು, ದೇವರ್ಷಿ, "ಆಗಳೇ
ಆತಿಥ್ಯ ನಡೆದಿಹುದು ; ಇನ್ನು ಸುಮ್ಮನೆ ನೀವು
ಕ್ಲೇಶಪಡುವುದು ಬೇಡ," ಎನೆ ಒಪ್ಪಿ ಅಲ್ಲಿಯೇ
ತನ್ನರಸನೆದುರು ಕುಳಿತಳು. ಕೃಷ್ಣ, "ಋಷಿಗಳೇ,
ನೀವು ಬಂದುದು ಒಳ್ಳಿತಾಯ್ತು. ಈ ಆಟದಲಿ

ಒಮ್ಮೆ ಕಾಯನು ನಡೆಸಿ ಅದು, ಇಲ್ಲ ಬೇರೊಂದು
ಕಾಯಿ, ಕಷ್ಟಕೆ ಸಿಕ್ಕಿಕೊಳ್ಳಬಹುದೋ ಎಂದು
ಭೀತಿ ತೋರಿದ ಒಡನೆ ಅದನು ಹಿಂದಕೆ ಎಳೆದು
ಜಾಂಬವತಿ ಆಡುತಿಹ ಆಟದನ್ಯಾಯವನು
ನೀವಾದರೂ ತಡೆದು ನಿಲ್ಲಿಸಿರಿ. ಹೆಂಗಸರ
ಚತುರಂಗದಾಟದಲಿ ಕಾಯಿ, ಆನೆ ಪದಾತಿ
ಒಂಟೆ ಕುದುರೆ ಇವೆಲ್ಲ, ಮುಂದೆ ನಡೆವುದಕಿಂತ
ಹೆಚ್ಚಾಗಿ ಹಿಂದು ಹಿಂದಕೆ ನಡೆವುವೆಂದೆನಗೆ
ತೋರುತಿದೆ," ಎಂದು ನಕ್ಕನು. ಜಾಂಬವತಿ ಅದಕೆ,
"ಇದರೊಳನ್ಯಾಯವೇನಂತೆ? ಇದನಿಲ್ಲಿ ಇಡೆ
ಏನಾಗುವುದೊ ಎಂದು ನೋಡಿ, ತೊಂದರೆ ಎಂದು
ತೋಚಿದರೆ ಅದನು ಹಿಂದಕೆ ಎಳೆಯುವುದು ತಪ್ಪೆ?
ಗಂಡಸರ ಚತುರಂಗ ಎಂತಹದು? ಎದುರವರ
ಆನೆಯನು ಕೊಲ್ಲಬೇಕೆಂದು ಮನಮಾಡಿ ಅದು
ನಡೆವುದಕೆ ನೇರದಾರಿಯ ಬಿಟ್ಟು, ಅವರೊಂಟೆ
ಅದು ಏನೊ ಆಗುವುದು ಎಂಬಂತೆ ಆದರಲೇ
ಕಣ್ಣಿಕ್ಕಿ ಎದುರಾಳಿಯನು ಬೆಳ್ಳಿಸುವುದಲ್ಲ?
ನಾರದರು ಇದ ನೋಡಿ ನ್ಯಾಯ ಅನ್ಯಾಯವನು
ಹೇಳುವುದು ನನಗೆ ಸಮ್ಮತ" ಎಂದು ನುಡಿದಳು.
ಶ್ರೀಕೃಷ್ಣ ನಕ್ಕು ನುಡಿದನು: "ನೋಡಿ, ನಾರದರೆ,
ಆಡುವರು ತಮ್ಮ ಕಾಯಲಿ ತಾವು ಕಣ್ಣಿಟ್ಟು
ಮುಂದೆ ಯೋಚಿಸಿ ಕಾಯ ನಡಸುವುದು ಸಮ. ಇದನು
ಬಿಟ್ಟು ನಾನೆಲ್ಲಿ ಏನನು ನೋಡುತಿಹೆನೆಂದು
ತಮ್ಮ ಬುದ್ಧಿಯ ಬಳಸದಿಡಲು ನನ್ನದೆ ತಪ್ಪೆ?
ನೀವು ಬಲ್ಲಿರಿ, ನನಗೆ ಚಿಕ್ಕಂದಿನಿಂದಲೂ
ಕಣ್ಣುಗಳು ಒಮ್ಮೊಮ್ಮೆ ಮೆಳ್ಳೆಗಣ್ಣಾಗುವುವು.
ಆನೆಯನೆ ನೋಡುತಿರುವೆನು; ನೋಡುವರ ಕಣ್ಗೆ

ಒಂಟಿಯನು ನೋಡುತಿಹೆನೆಂಬಂತೆ ತೋರುವುದು.
ಇದಕೆ ನಾನೇನು ಮಾಡುವುದು," ಎಂದನು. ಋಷಿ
"ಗಂಡಹೆಂಡಿರ ಜಗಳದಲಿ ನ್ಯಾಯಮಾಡೆಂದು
ನನ್ನ ಕರೆಯದಿರಿ. ಗೊಡ್ಡು ಬ್ರಹ್ಮಚಾರಿಗಳು,
ಸಂಸಾರದಲಿ ಏನು ಸರಿಯೊ, ಯಾವುದು ತಪ್ಪೊ,
ಎಂತು ಬಲ್ಲೆವು? ಹತ್ತು ಸಲ ಇಲ್ಲಿ ಬರುವವನು
ಗಂಡಹೆಂಡಿರ ಮಧ್ಯೆ ಪಂಚಾಯಿತಿಗೆ ನಿಂತು
ಯಾರದೆ ವಿರೋಧವನು ಕಟ್ಟಿಕೊಂಬುದು ತಪ್ಪು,"
ಎಂದು ನುಡಿದರು. ಇಂತು ಇವರು ಸಲ್ಲಾಪದಲಿ
ಕೆಲನಿಮಿಷ ಕಳೆದಿರಲು ಶ್ರೀಕೃಷ್ಣ ಪ್ರೇಯಸಿಗೆ
"ಬಾಗಿಲಿನ ವರೆಗೆ ಹೋಗಿದ್ದು ಬರುವೆನು ಮತ್ತೆ"
ಎಂದು ಇವರೊಡನೆ ಹೊರಟನು. ಇಂತು ಈರ್ವರೂ
ಮನೆಯಿಂದ ಮನೆಗೆ ನಡೆದರು. ಎಲ್ಲ ಮನೆಯಲೂ
ಇವರು ಐತರುವ ವೇಳೆಗೆ ಕೃಷ್ಣ ಆ ಮುನ್ನ
ಅದು ಎಷ್ಟೊ ಹೊತ್ತಿಂದ ಅಲ್ಲೆ ಇದ್ದವನಂತೆ,
ಇಲ್ಲಿ ವೀಣೆಯನು ನುಡಿಸುತ, ಇಲ್ಲಿ ಪ್ರೇಯಸಿ
ಸಾರಂಗಿಯನು ನುಡಿಸುತಿರೆ ಅದಕೆ ಕಿವಿಗೊಡುತ,
ಇಲ್ಲಿ ನೃತ್ಯವನು ನೋಡುತ, ಇಲ್ಲಿ ಚಿತ್ರವನು
ನಿರ್ಮಿಸುತ, ಇಲ್ಲಿ ನಿರ್ಮಿಸುತಿಹುದ ದೃಷ್ಟಿಸುತ,
ಪ್ರಿಯೆಯ ಕೊರಳಿಗೆ ಇಲ್ಲಿ ಮಾಲೆಯನು ಹಾಕುತ್ತ,
ಇಲ್ಲಿ ಪ್ರಿಯೆ ತನಗೆ ನೀಡಿದ ಸರವ ಕೊಳ್ಳುತ್ತ,
ಅವರ ಸಂತೋಷಪಡಿಸುತಲಿಹುದ ನಾರದರು
ಕಂಡು ಅಚ್ಚರಿಯೊಳಾಳಿದರು. ನಡೆವಂದೆಲ್ಲ
ಶ್ರೀಕೃಷ್ಣ ಜೊತೆಯಲೇ ನಡೆಯುವನು. ಅಂತೆಯೇ
ಎಲ್ಲ ಮಂದಿರದ ಹೊಸ್ತಿಲಲಿ ಕಣ್ಮರೆಯಾಗಿ
ಒಳಗಿದ್ದು ಕಾಣುವನು. ಹೊಸ್ತಿಲಿಗೆ ಹಿಂದಿರುಗಿ
ಬಂದಂದು ಮೂರ್ತಿ ಹೊರಗಡೆ ಒಂದು ಬಂದಂತೆ

ಒಳಗಡೆಗೆ ಒಂದು ನಡೆವುದನು ಋಷಿ ಕಾಣರು.
ಇಂತು ಹತ್ತಾರು ಮನೆಯನು ಸುತ್ತಿ ದೇವರ್ಷಿ,
"ಕೃಷ್ಣ, ನಿನ್ನ ಅಪಾರ ಮಹಿಮೆ ಇದು ಎನಿತೆಂದು
ಹೇಳಲಳವಲ್ಲವೆನಲೇಕೆ, ಇದ ತಿಳಿವುದೂ
ನನಗೆ ನಿಜಕೆ ಅಸಾಧ್ಯ. ಇದ ನೋಡಿದುದು ಇನ್ನು
ಸಾಕು. ಇಕೊ ಸಂಜೆಯಾಗುತಲಿಹುದು. ಹೊತ್ತಿಹುದೆ
ಊರಾಚೆ ಸಾರಿ ಸರಸಿಯಲಿ ಮೀಯುವೆನೆಂದು
ತೋರುತಿದೆ. ನೀನು ಬರಲಾಗುವುದೆ" ಎಂದರು.
ಕೃಷ್ಣ "ಆಗದೆ ಏನು? ನೀವನುಷ್ಠಾನದಲಿ
ತೊಡಗಿರಲು, ನಾನು ಅಚ್ಯೋದಕವ ನೋಡುತ್ತ
ಕಣ್ಣ ತಣಿಸುವೆನು, ಬನ್ನಿರಿ" ಎಂದು ನುಡಿದನು.
ದೇವರ್ಷಿ, ಅವತಾರ ಪುರುಷ, ಇಂತಿಬ್ಬರೂ
ಸ್ನಾನದ ಸರೋವರವ ಕುರಿತು ನಡೆಯುತಲಿಹರು.

ದಾರಿಯಲಿ ನಾರದರು, "ಕೃಷ್ಣ, ನಿನ್ನರಸಿಯರು
ಒಬ್ಬೊಬ್ಬರೊಂದೊಂದು ತೆರನಿರಲು ನೀನವರು
ಎಲ್ಲರಿಗು ಸರಿಯಾಗಿ ನಡೆಯುವುದು ಬಹು ಚೆನ್ನು,"
ಎಂದು ಹೇಳಿದರು. ಶ್ರೀಕೃಷ್ಣ, "ನಾ ನಡೆಯುವುದು
ಇದರೊಳೇನೂ ಇಲ್ಲ, ಋಷಿಗಳೇ. ನಡೆವವರು
ಅವರವರೆ. ಅವರವರು ತಮ್ಮ ಇಚ್ಛೆಯ ಹಿಡಿದು
ತಮ್ಮ ಸುಖಕಾಗಿ ನಡೆಯುವರು. ನಾನವರಂತೆ
ಅನುಸರಿಸಿ ನಡೆಯುವೆನು. ಇಷ್ಟು ಜನ ಹೆಂಡಿರಲಿ
ಒರ್ವ ರುಕ್ಮಿಣಿ, ತನ್ನ ಇಷ್ಟವನು ಯೋಚಿಸದೆ,
ನನ್ನಿಷ್ಟವೇನು ಇರಬಹುದೆಂದು ಊಹಿಸಿ
ನನ್ನಂತೆ ನಡೆಯುವಳು. ಇನಿತೆಲ್ಲ ಹೆಂಡಿರನು
ಅವಳೆ ತಂದವಳು; ಇಲ್ಲಿರಿಸಿ ಸಾಕುತಲಿಹಳು.
ಉಳಿದೆಲ್ಲ ಕಡೆ ನಾನು ಅಸ್ವತಂತ್ರನೆ; ಆಕೆ

ಇರುವ ಒಂದೆಡೆಯೇ ಸ್ವತಂತ್ರ," ಎಂದನು.

ಋಷಿ

ಕೃಷ್ಣನೊರೆದುದ ಕುರಿತು ಚಿಂತಿಸುತ ನಡೆದರು.
ಅಂದು ನೋಡಿದ ಚೆಲುವ, ಒಲವ, ಸರಸದ, ನಲವ,
ಅಂದ ಚಕ್ಕಂದ ಚಂದದ ಬಾಳ ನೆನವಿಂದ
ಅವರ ಮನದೊಳಗೆಲ್ಲೊ ಅಡಗಿ ಒಣಗದೆ ಇದ್ದ
ವೃತ್ತಿ ಮುಖವಿಟ್ಟುಕೊಂಡಿತು. ರುಕ್ಮಿಣಿಯ ನಿಷ್ಠೆ,
ಸತ್ಯಭಾಮೆಯ ಛಲದ ಸರಸ, ಜಾಂಬವಸುತೆಯ
ಅಕುಟಿಲ ಮನೋಭಾವ, ಇನ್ನೆಲ್ಲ ಕಡೆ ಕಂಡ
ಉಳಿದ ಭವ್ಯಾನುಭಾವವ ಸವಿಯಬಲ್ಲವನು
ಸುಖಿಯೆ ಸರಿ, ಪುಣ್ಯಶಾಲಿಯೆ, ಧನ್ಯನೇ ಸರಿ,
ಎಂದವರು ಮನಸಿನಲಿ ಆಳೋಚಿಸುತಲಿಹರು.
ಆಳೋಚಿಸಿದರೆನಲು ಬಯಸಿದರು ಎಂದಲ್ಲ;
ಬ್ರಹ್ಮಮಾನಸಪುತ್ರ ದೇವರ್ಷಿ ನಾರದರು
ಸಂಸಾರಸುಖವ ಬಯಸಿದರೆ? ನಿಜದಲಿ ಬಯಕೆ
ಮೂಡಿದರೆ ಅದನು ನಿಗ್ರಹಿಸಬಲ್ಲರು ಅವರು.
ಬಯಕೆ ಮೂಡದು; ಬಯಕೆ ಆಗಬಹುದಾದೊಂದು
ಮನದ ನೆರಳಿನ ನೆರಳು ಏನೆಂತೊ ಚಲಿಸಿತು.
ಕೃಷ್ಣ ಇದ ತಿಳಿದುಕೊಂಡನು. ಅಯ್ಯೊ ಪಾಪವೇ,
ಇಂತ ಚೇತನದಲೂ ಇಂತಪ್ಪ ಹಸಿಯಿಹುದೆ,
ಎಂದು ಕನಿಕರಿಸಿದನು; ಇದನು ಬೇಗನೆ ಬಿಡಿಸಿ
ಇವರ ಸಲಹುವೆನೆಂದು ನಿಶ್ಚಯವ ಮಾಡಿದನು.

ಕೆಲಹೊತ್ತಿನಲಿ ಇಬ್ಬರೂ ಸರೋವರದೆಡೆಗೆ
ಬಂದು ಸೇರಿದರು. ನಾರದರು ನೀರಿನೊಳಿಳಿಯೆ
ಕೃಷ್ಣ ತಾನೂ ಮೀವೆನೆಂದವನು ಅವರೊಡನೆ
ನೀರಿಗಿಳಿದನು. ಸಂಜೆ ಬಹು ಅಂದವಾಗಿಹುದು.

ಸುತ್ತ ಉದ್ಯಾನ; ಗಾಳಿಯಲಿ ಹೂವಿನ ಕಂಪು
ಇಂಪಾಗಿ ತುಂಬಿಹುದು; ಬರುವ ಇರುಳಿನ ಶಾಂತಿ
ಸಂಚಕಾರದಲಿ ಲೋಕವನು ಒಳಕೊಳುತಿಹುದು.
ಕೃಷ್ಣನೂ ಋಷಿಗಳೂ ಪಕ್ಕ ಪಕ್ಕದಿ ನಿಂತು,
ಋಷಿ ದೈವವನು ನೆನೆದು ಒಮ್ಮೆ ಮುಳುಗಿದ್ದೆದ್ದು
ಮತ್ತೆ ಮುಳುಗನು ಹಾಕಿದರು. ಕೃಷ್ಣ ಆಕ್ಷಣ
ಅವರು ನೀರಿಂದ ತಲೆಯನು ಎತ್ತದಂದದಲಿ
ಅವುಕಿ ಹಿಡಿದನು. ಉಸಿರುಕಟ್ಟಿ ನಾರದರ ಮನ
ಏನೊ ಆಯಿತು. ಏನೊ ಆದಾ ಕ್ಷಣಾರ್ಧದಲಿ
ಅವರಿಗನುಭವವಾಯಿತಿಂತು.

ತಾನೆಲ್ಲಿಯೋ
ನಡೆಯುತಿರುವರು; ಎದುರಿಗೊಂದು ಹಿರಿದಹ ನಗರ;
ನೋಡುತಿರುವಂತೆ ಅದು ಬಹು ಹತ್ತಿರದೊಳಿಹುದು:
ತಾವದರ ದೊಡ್ಡ ಬಾಗಿಲ ಬಳಿಗೆ ನಡೆದಿಹರು.
ಯಾವ ಊರೋ ಎಂದು ಇವರು ಚಿಂತಿಸುತಿರಲು
ನಗರದೊಳಗಿಂದ ಯಾವುದೊ ಉತ್ಸವದ ವಾದ್ಯ
ಕೇಳಬಂದಿತು. ಉತ್ತರಕ್ಷಣಕೆ ಓಲಗದ
ವಿಭವದಲಿ ಜನದ ಒತ್ತಡದೊಂದು ಮೆರವಣಿಗೆ
ಹೊರಗಡೆಗೆ ಸಾರಿ ತಂದಿತು ಸಂದಣಿಯ ಮಧ್ಯೆ
ಶೃಂಗಾರವಾಗಿರುವ ಆನೆ; ಅದು ಹೊತ್ತಿರುವ
ಅಂಬಾರಿಯಲಿ ಒಬ್ಬ ಚೆಲುವೆ ಕುಳಿತಿರುವಳು.
ಏನು ಸಂಗತಿಯೊ ಎಂದುದೆ ಈತ ಒಂದು ಕಡೆ
ಸರಿದು ಸುಮ್ಮನೆ ನಿಂತಿಹರು. ಜನದ ಮೆರೆವಣಿಗೆ
ಇದ್ದುದಿದ್ದಂತೆ ಇವರನು ಕುರಿತೆ ಹರಿಯಿತು.
ಇವರು ಏನೊಂದನೂ ಗೆಯ್ಯುಬಹ ಮುನ್ನವೇ
ಆನೆ ಇವರೆದುರು ನಿಂತಿತು. ಅದರ ಸೊಂಡಿಲಲಿ
ಒಂದು ಹೂಮಾಲೆ ಇದೆ. ಆನೆ ಅದ ನಾರದರ

ಕೊರಳೊಳಿಕ್ಕಿತು. ಆನೆಯೇರಿದ್ದ ಎಳೆಹೆಣ್ಣು
ಕೆಳಗಿಳಿದು ಇವರ ಎದುರಲಿ ಬಂದು ನಿಂತಳು.
ಬದಿಯ ಹಿರಿಯುವನೊಬ್ಬ, "ಈಕೆ ನಮ್ಮರಸರಿಗೆ
ಒಬ್ಬರೇ ಮಗಳು. ಅರಸರು ನಿನ್ನೆ ತಾವಿನ್ನು
ತಪಕೆ ಸಾರುವುದೆಂದು ನಿಶ್ಚಯಿಸಿ, ಓ ಮಗುವೆ
ತಕ್ಕ ವರನನು ವರಿಸಿ ಕರೆದು ತಾ, ರಾಜ್ಯವನು
ನಿಮಗಿತ್ತು ನಾನು ವನವನು ಸಾರುವೆನು, ಎಂದು
ಇವರಿಗೊರೆದರು. ಇಂದು ಶುಭದಿವಸ ಎಂದರಿತು
ಆನೆ ಯಾರಿಗೆ ಮಾಲೆ ಹಾಕುವುದೊ ಅವರನೇ
ದೈವ ಆರಿಸಿತೆಂದು ತಿಳಿಯುವುದು ಎಂದವರು
ಈಗ ಹೊರಟರು. ಆನೆ ತಮ್ಮ ವರಿಸಿತು ಅಹುದು.
ಒಳಗೆ ಬಿಜಮಾಡಿ ಅರಗುವರಿಯರ ಕೈಹಿಡಿದು
ರಾಜ್ಯದಧಿಕಾರವನು ಕೊಳಬೇಕು," ಎಂದನು.
ಈತನಿಗೆ ಇದು ಇಷ್ಟವಿಲ್ಲ; ಆದರೆ ಎದುರು
ಮೆಯ್ಯಾಂತ ಚೆಲುವಾಗಿ ಅರಗುವರಿ ನಿಂದಿಹಳು;
ಅಧಿಕಾರ ಬೇರೆ ಕಾದಿದೆ; ವೃದ್ಧ ಕೈಮುಗಿದು
ಬಹು ನಮ್ರನಾಗಿ ಯಾಚಿಸುತಿಹನು. ವಿಧಿ ಇಲ್ಲ,
ಒಪ್ಪಬೇಕಲ್ಲವೇ ಎಂದುದೀತನ ಮನಸು.
ಬಾಯಿ ಆಗಲಿ ಎನ್ನಲಿಲ್ಲ. ಅಭಿಮತವರಿತು
ವೃದ್ಧ, ಆ ಓಲಗದ ಜನರನು ವಿಜೃಂಭಿಸಲು
ಬೆಸಸಿ, ಮೊದಲೀತನನು ಹಿಂದೆ ಅರಗುವರಿಯನು
ಆನೆಯನು ಏರಿ ಅಂಬಾರಿಯಲಿ ಕುಳ್ಳಿರಲು
ಬೇಡಿ, ಇವರಂತೆಸಗೆ ಮೆರವಣಿಗೆಯನು ಮರಳಿ
ನಗರದೆಡೆ ತಿರುಹಿದನು.

ಮದುವೆಯಾಯಿತು. ರಾಜ್ಯ
ಇವರದಾಯಿತು. ಮಾವ ವನದತ್ತ ಸಾರಿದರು.
ಹೊಸಹರೆಯ, ಹೊಸರಾಜ್ಯ, ಪಕ್ಕದಲಿ ಹೊಸತಾಗಿ

ಹಸೆನಿಂದ ಚೆಲ್ಲಗಂಗಳ ಚೆಲುವೆ; ಈತನಿಗೆ
ಸಂಸಾರ ತುಂಬು ಸುಖದಿಂಬು ಎಂದೆನ್ನಿಸಿತು.
ಎರಡೆರಡು ವರುಷ ಕಳೆದಿರೆ ಈತನಿಗೆ ಮೂರು
ಮಕ್ಕಳಾದುವು. ಗಂಡು, ಹೆಣ್ಣು, ಗಂಡು. ರಾಣಿ
ಅನುಕೂಲೆಯಾಗಿ ನಡೆಯುತಲಿಹಳು. ಮಂತ್ರಿಗಳು
ಸಮ್ಮತರು; ಕೋಶತುಂಬಿದೆ; ಕಾಲವೊ ಸುಭಿಕ್ಷ;
ಜನತೆ ನೆಮ್ಮದಿಯಾಗಿ ಬಾಳುತಿರೆ ಹೊಸರಾಜ
ಇದುವೆ ಇಹಸಂಸಾರಸೌಖ್ಯದ ಪರಾಕಾಷ್ಠೆ,
ಇದುವೆ ಬ್ರಹ್ಮಾನಂದ, ಎಂದು ತನ್ನನೆ ತಾನು
ಮರೆತಂತೆ ಇಹನು. ಒಂದುದಿನ ನಾಡಿನ ಗಡಿಯ
ಕಾವಲವರೈತಂದು ಹಗೆಯಾವನೋ ಬಂದು
ನಾಡಿನಲಿ ದಾಳಿಮಾಡುವ ಸುದ್ದಿ ಇರುವುದನು
ಅರುಹಿದರು. ರಾಜ ಆಕಡೆಗೆ ಸೈನ್ಯವನಟ್ಟಿ
ಹಿಂದೆಯೇ ಸಾರಿದನು. ತಂಡೋಪತಂಡದಲಿ
ದಾಳಿಯಿಡಬಂದ ಹಗೆಯೊಡನೆ ಈ ಸೈನ್ಯಕೆ
ಬಹುಕದನ ನಡೆದು ಸೋಲಾಯ್ತು. ಕೊನೆಯಲಿ ರಾಜ
ಮೂಲಬಲವನು ನಡಸಿ ತಾನೆ ಹಗೆಯನು ತಾಗಿ
ಶಕ್ತಿಯನು ಮೀರಿ ಹೆಣಗಿದನು. ದುಷ್ಟ ಅದೃಷ್ಟ
ಮತ್ತೆ ಸೋಲನೆ ತರಲು, ಇವನು ಸೈನ್ಯವನುಳಿಸಿ
ಹಗೆಯ ಕೈಯಿಂದ ತಪ್ಪಿಸಿಕೊಂಡು ನಗರಿಗೆ
ಬಳಸುದಾರಿಯಲಿ ಬಂದನು. ಬಳಸಿದುದೆ ತಪ್ಪು
ಎಂದು ತೋರಿತು. ಇಲ್ಲಿ ಹಗೆ ಆಗಲೇ ಬಂದು
ನಗರವನು ಮುತ್ತಿ ಲಗ್ಗೆಯಲಿ ಅದರೊಳಹೊಕ್ಕು
ಮನೆಗಳನು ಸುಟ್ಟು, ಜನರನು ಕೊಂದು ಮಗು ಹೆಣ್ಣು
ಎಂಬ ಕನಿಕರವ ತೋರದೆ ಹಿಂಸೆಯಲಿ ನಲಿದು
ಅರಮನೆಯ ಹಿಡಿದು ನಿಂತಿಹನು. ರಾಣಿಯ ಗತಿ?
ಅವಳು ಅಗ್ನಿಯ ಹೊಕ್ಕು ಸತ್ತಳೆಂದರು ಯಾರೊ.

ಮಕ್ಕಳು ? ಎರಡು ಏನಾದವೋ ತಿಳಿಯದು.
ಒಂದು ಮಗುವನು ಯಾರೊ ಕೊಂದರು. ಎಲಾ ಪಾಪಿ
ಎಳೆಗೂಸ ಕೊಂದರೇ ! ಅಯ್ಯೊ, ಅಯ್ಯೋ, ತಾನು
ಏಕೆ ಈ ಸಂಸಾರದಲಿ ಸಿಕ್ಕಿಕೊಂಡೆನೋ !
ದಾರಿ ನಡೆವನ ತಂದು ಮಾರಿ ಎದುರಲಿ ನಿಲಿಸಿ
ಬಲಿಯಿಕ್ಕಿತೇ ಬಾಳು ? ಎಲ್ಲಿಯೋ ಹೋಗುವನ
ಓಡಿತಂದು ಬೇಯಿಸುವ ಎಂದೆ ಆದಿನ ತನಗೆ
ತನ್ನರಸಿ ವರಣಮಾಲೆಯ ಹಾಕಿಸಿದಳೇನೊ ?
ಅಕಟಕಟ, ಸಾಕು, ಕೃಷ್ಣಾ, ಸಾಕು ; ಸಂಸಾರ"
ಎಂದು ಕೂಗಿದನೀತ.

ಶ್ರೀಕೃಷ್ಣ ತಾನಿವನ
ನೀರಿನಲಿ ಅವುಕಿ ಹಿಡಿದಿದ್ದ ಕೈಯಿಂದಲೇ
ತಲೆಯ ನೀರಿಂದ ಮೇಲಕೆ ಎತ್ತಿ ನಿಲಿಸಿದನು.
ನಾರದನ ಸಂಸಾರಸುಖದ ಅನುಭವ ಆಗ
ಕೊನೆಯ ಮುಟ್ಟಿತು. ನಿಟ್ಟುಸಿರ ಬಿಟ್ಟು ದೇವರ್ಷಿ
ಕೃಷ್ಣನನು ನೋಡಿದರು. ಶ್ರೀಕೃಷ್ಣ ನಾರದರ
ಮನಸುಗಳು ಬೇರೆ ಬೇರೆಯವಲ್ಲ ; ಈ ಮನದ
ಪರಿಯ ಆ ಮನ, ಅದರ ಪರಿಯನಿದು, ಬಲ್ಲವು.
ಇವರಿವರ ಮಧ್ಯೆ ಸಂಕೋಚ ಕಪಟಗಳಿಲ್ಲ ;
ಅರೆಯಿಲ್ಲ ; ಮರೆಯಿಲ್ಲ. ತನ್ನ ತಿದ್ದುವ ಎಂದೆ
ಶ್ರೀಕೃಷ್ಣ ಇಂತು ಮಾಡಿದನೆಂದು ನಾರದರು
ತಿಳಿದುಕೊಂಡರು. ಕೃಷ್ಣ ಅವರ ನೋಟಕೆ ತನ್ನ
ತಿಳಿನೋಟವನು ಬೆರಸಿ ನೋಡಿದನು. ನಾರದರು,
"ಕೃಷ್ಣ, ಈ ತೆರದ ಈಟಿಯ ಇರಿತವಿಲ್ಲದೆ
ಮನುಜನೆದೆ ಸತ್ಯವನು ಒಪ್ಪದೇ ?" ಎಂದರು.
ಶ್ರೀಕೃಷ್ಣ, "ನಾರದರೆ, ನಿಮ್ಮ ಪಕ್ಷಕೆ ಇಂತು
ಕಷ್ಟವೆಂಬುದರೊಂದು ಯುಗ ಒಂದು ನಿಮಿಷದಲಿ

ಕನಸಾಗಿ ಬಂದು ಹೋಗುವುದು. ಬಾಳಿಗೆ ಬಂದು
ಅದರಲೇ ನಡೆಯಬೇಕಾದ ನಮ್ಮನ್ನರಿಗೆ
ನಿಮ್ಮ ಈ ಶಾಂತಿ ಕನಸಂತೆ ಸಿವಿುಷಾರ್ಧ್ಯರ್ಧ
ಬಂದು ಹೋಗುವುದು. ಈ ಕನಸಿನಂದದ ಇರಿತ
ನಿಜವಾಗುವುದು, ನಿರಂತರ ಇರಿಯುತಿರುವುದು.
ನಾನು ಹೆಂಡಿರಲಿ ಸುಖದಿಂದಿಹುದ ನೋಡಿದಿರಿ.
ಮಕ್ಕಳಲಿ ನಂಟರಲಿ ಸುಖದ ಲವಲೇಶವೇ?
ಸತಿಯರಲಿ ನಾನಿಂತು ಆಡುವುದು ಈ ಜಗದ
ವ್ಯಾಪಾರವನು ಮರೆಯೆ ಮನುಜ ಮದ್ದನು ಮೆದ್ದ
ರೀತಿ ಎಂದೇ ಹೇಳಬೇಕು," ಎಂದನು. ಋಷಿಗೆ
ಆ ಕ್ಷಣಕೆ ಈ ಮಾತು ನಿಜವೆಂದೆ ತೋರಿತು;
ಕೃಷ್ಣನನು ನೋಡಿ ಕನಿಕರವಾಯ್ತು. ಸ್ನಾನವನು
ಮುಗಿಸಿ ಅವರಿಬ್ಬರೂ ತಡಿಗೈದಿ ದ್ವಾರಕೆಯ
ಸಾರಿದರು. ನಾರದ ಮಹರ್ಷಿ ಅಂದಲ್ಲಿದ್ದು
ಮರುದಿವಸ ಮತ್ತೆ ಸಂಚರಿಸೆ ಹೊರವಂಟರು.

* * * *

ಸುಬ್ಬಯ್ಯ ಕತೆ ಹೇಳಿ ಮುಗಿಸಿರಲು ಹಿರಿಯಣ್ಣ
ಇಂತು ಟೀಕೆಯನು ನುಡಿದರು: "ಸಂಪ್ರದಾಯದಲಿ
ನಾರದರು ಭಕ್ತಿಪಂಥದ ಆದ್ಯರೊಳಗಿಹರು.
ಭಾಗವತದಲಿ ಇವರು ತಮ್ಮ ಚರಿತೆಯ ತಾವೆ
ಹೇಳಿದಂತಿದೆ. ಚೆಲುವೆ ಒಬ್ಬರಿವರನು ಕಂಡು
ಬಯಸಿದಳು; ಇವರು ಒಲ್ಲರು; ಅವಳು ಖತಿಗೊಂಡು
ಋಷಿಗೆ, ನೀ ಒಂದು ಕಡೆ ಇರದೆ ಎಲ್ಲಾ ಹೊತ್ತು
ಸುತ್ತಾಡುತಿರು, ಎಂದು ಶಾಪ ನೀಡಿದಳಂತೆ.
ಭಾಗವತವೇ ಒಂದು ಆಧುನಿಕ ಕೃತಿ. ಅದರ
ಈಚೆ ನಾರದರು ಎಂತೆಂತವರ ಕೈಗಳಲೊ
ಸಿಕ್ಕಿ ಅತಿಶಯ ವಿಚಿತ್ರವ್ಯಕ್ತಿಯಾಗಿಹರು.

ಶ್ರೀಮತಿಯ ಚರಿತೆಯಲಿ ಇವರು, ಜೊತೆಯೊಬ್ಬಋಷಿ,
ನಡೆವ ಪರಿ, ಋಷಿಗಳಿಗೆ ಏಕೆ, ಮಾನವಕುಲದ
ಅತಿ ಅಲ್ಪ ಜೀವಿಗಳಿಗೂ ತಗದು, ಅಂತಿಹುದು.
ಇದು ನಮ್ಮ ಅದ್ಯತನ ಕಥನಕಾರರು ತಮ್ಮ
ಆದಿನದ ಜನರ ಮೆಚ್ಚಿಸಲು ಮಾಡಿದ ಕೃತ್ಯ.
ಇಂದು ಸುಬ್ಬಯ್ಯ ಹೇಳಿದ ಕತೆಯಲೂ ಋಷಿ
ತಕ್ಕಷ್ಟು ದಡ್ಡರಾಗಿಹರು. ಆದರೆ ತೀರ
ಶ್ರೀಮತಿಯ ಚರಿತೆಯಂದದ ಹುಚ್ಚರಾಗಿಲ್ಲ.
ಇರಲಿ. ಈ ಕತೆ ನಾರದರ ಕುರಿತು ಏನನೇ
ಹೇಳಿದರು, ಹೇಳದಿದ್ದರು, ಅದರ ತತ್ತ್ವಾರ್ಥ
ತುಂಬ ಒಳಿತಾಗಿಹುದು. ಒಬ್ಬೊಬ್ಬ ಮಾನವನ
ಚರಿತ ಅವನನುಭವವೆ, ಬೇರೆ ಏನೂ ಅಲ್ಲ.
ಕಾಲವೆಂಬುದು ಒಂದು, ದೇಶವೆಂಬುದು ಒಂದು,
ಕಾಲದೇಶದೊಳೊಂದು ಇನ್ನೊಂದು ಸಂಗತಿಯು
ನಾವು ಬಾಳಿದೆವೆನ್ನುವುದು, ಎಲ್ಲ ಅನುಭವವೆ.
ಪರಮಹಂಸರು ಒಮ್ಮೆ, ಕನಸಿನಲಿ ಪಡುವ ಸುಖ
ಬಾಳ ಸುಖದಷ್ಟೆ ನಿಜ ಎಂದು, ಇನ್ನೊಂದು ಸಲ
ಬಾಳಿನಲಿ ಬಹ ದುಃಖ ಕನಸದುಃಖವೆ ಸರಿ
ಎಂದು, ಎರಡೂ ರೀತಿಯಲಿ ನುಡಿದರಂತೆ: ಇದು
ಅವರ ಸೂಕ್ತಿಯಲಿ ಕಾಣುವುದು. ಬ್ರಹ್ಮಜ್ಞಾನಿ
ಬಾಳು ಕನಸೆಂದು ನಿರ್ಲಕ್ಷ್ಯದಲಿ ನಡೆಯುವನು;
ಅವನಿಗಿದು ಸಾಧ್ಯ, ತಕ್ಕದು. ಉಳಿದ ಜನ ಇದನು
ಬರಿಯ ಬಾಯಲಿ ಹೇಳಿ ಫಲವಿಲ್ಲ. ಬಾಳೆಂತು,
ಅಂತೆ ಕನಸೂ ನಮಗೆ ಪರಮಾರ್ಥ. ಎರಡರಲು
ನಮ್ಮ ಜೀವಗಳು ಸಂತೋಷದಲಿ ಕೆಲೆಯುವುವು;
ನೊಂದು ಗೋಳಾಡುವುವು. ಅಂದು ನಾರದರೆಂತು
ಅಂತೆ ನಾನೀಗ ಕಾಲದ ನೀರಿನಲಿ ಮುಳುಗಿ

ಈಗ ನಡೆಯುತಲಿರುವ ಈ ಎಲ್ಲವನು ಒಂದು
ಕನಸಿನಲೆ ಕಾಣುತಿರಬಹುದು. ಸುಬ್ಬಯ್ಯ ಕತೆ
ಹೇಳುವುದು ನಾನದನು ಕೇಳುವುದು ಅದ ಕೇಳಿ
ಸಂತೋಷ ಪಡುವೆನೆಂಬುದು ಎಲ್ಲವೂ ಕನಸೆ.
ತತ್ವದಲಿ. ತತ್ವದಲಿ ಏನಾದರೇನಂತೆ?
ಸತ್ಯದಲಿ ಎಂತು? ಅನುಭವವೆಂಬುವೇ ಸತ್ಯ,
ಸಾಮಾನ್ಯ ಜೀವರಿಗೆ. ಸುಖ ದುಃಖ ಸಮವೆಂಬ
ನಿಲುವು ಚೆನ್ನೆಂಬವರು ಆ ಗುರಿಗೆ ನಡೆಯುವುದು
ಸರಿ. ಉಳಿದ ಮಂದಿ ಈ ಕನಸಿನಲಿ, ಕೆಟ್ಟುದನು
ಯೋಚಿಸದೆ ನುಡಿದು ಆಡದೆ ಮಾಡದಿರುವುದೇ
ಕ್ಷೇಮ. ಇಂತಿರೆ ಬಾಳ ಕನಸಿನಲಿ ಬಹ ನಿಜದ
ಕನಸು ಒಳ್ಳಿತೆ ಆಗುವುದು. ಎಲ್ಲರೂ ಇಂತು
ಮನವ ಶೋಧಿಸಿಕೊಂಬುದೊಳಿತು. ಬಾಳಿನ ಕಷ್ಟ
ಇದ್ದೆ ಇದೆ. ಅದಕೆ ಕನಸಿನ ಕಷ್ಟವನು ಬೆರಸಿ
ಮತ್ತಷ್ಟು ಕಹಿಯಾಗಲೇಕೆ? ಕನಸನು ನಾವು
ತಿದ್ದಲಾಗುವುದೆ? ಆಗುವುದು. ಅಲ್ಪಸ್ವಲ್ಪ.
ದೈವ ಕಾಪಾಡುತಿದೆ ಎಂಬ ಧೈರ್ಯದಿ ಬಾಳಿ
ದೇವರೇ ಕಾಪಾಡು ಎಂದು ಪ್ರಾರ್ಥಿಸಿ ಮನುಜ
ನಿದ್ರೆಗಿಳಿದರೆ ಮನದ ಕದಡು ತಿಳಿಯಾಗುವುದು.
ನನಸಂತೆ ಕನಸಾದರೂ ಶುದ್ಧವಾಗುವುದು.
ಕತೆಯು ಶ್ರೀ ಕೃಷ್ಣ ಸೃಷ್ಟಿಯ ಎಲ್ಲ ಜೀವಕೂ
ಜೊತೆಯಾಗಿ ಇದ್ದು ಎಲ್ಲರ ಒಲವ ಪಡೆದಿರುವ
ಆಯಾಯ ವಸ್ತು ಎಂಬೊಂದು ತತ್ವಾರ್ಥವೂ
ಕತೆಯೊಳಿದೆ. ಬಾಳು ಕನಸೆಂಬ ತತ್ವದ ತೆರನೆ,
ಇದು ಕೂಡ ನುಡಿಯುವರೆ ಸುಲಭ, ನಡೆವೆನೆ ಕಷ್ಟ.
ಕತೆಗಿತೆಯ ಹೇಳಿ ವಾಡಿಕೆ ಇಲ್ಲವೆಂದರೂ
ಸುಬ್ಬಯ್ಯ ಕತೆಯ ಹೇಳಿದ ರೀತಿ ಉಳಿದವರ

ರೀತಿಯೇ ಇಹುದು; ನಾವೆಲ್ಲ ಎಳೆತನದಿಂದ
ಕತೆ ಹೇಳಿ ಕತೆ ಕೇಳಿ ನಮ್ಮ ನಾವರಿಯದೆಯೆ
ಕಥನ ಕಲೆಯನು ಕಲಿಯುವೆವು. ಅದರ ಇತಿಮಿತಿ
ತನಗೆ ತಾನೇ ನಮಗೆ ಬಂದಿಹುದು. ರಾಮಣ್ಣ,
ನಾಳೆ?" ರಾಮಣ್ಣ "ನಾಳೆಯ ಸರತಿ ಗ್ರೀಕರದು"
ಎಂದು ಒರೆದನು. ಗ್ರೀಕರೆನೆ ಗೆಳೆಯ ಕೌಶಿಕ.
ಅವನು "ಅಪರಂಜಿ ಆರಿಗ" ಎಂಬ ಹೆಸರಿಂದ
ಕತೆಯೊಂದ ಹೇಳಿದನು; ಅದ ಮುಂದೆ ಬರೆದಿದೆ.

# ಅಪರಂಜಿ ಆರಿಗ

ನಾನು ಗ್ರೀಕ್ ಬಲ್ಲ ಕಾರಣದಿಂದ ರಾಮಣ್ಣ
ಗ್ರೀಕ್ ಜನದ ಕತೆಯೊಂದ ಹೇಳು ಎಂದಿಹರೆನಗೆ.
ಗ್ರೀಸ್ ಜನರ ಕತೆಯೇನು, ಉಳಿದವರ ಕತೆಯೇನು?
ಎಂದೊ ಯಾರೋ ಇದ್ದ ರೀತಿಯೆಂದೆನಲು ಕತೆ
ಗ್ರೀಸ್ ಜನದ ಕತೆ ಎನಿಸುವುದು; ಇಂದು ನಮ್ಮೆದುರು
ಯಾರೊ ಬಾಳುವುದ ಬಣ್ಣಿಸುವೆನೆನೆ ಇಂದಿನದು.
ನಾನು ಇಂದಿನದೆ ಕತೆಯೊಂದ ಒರೆದರೆ ನಮ್ಮ
ರಾಮಣ್ಣ ನನ್ನ ಮನ್ನಿಸಬೇಕು.
ನಾವಿರುವ
ವಿಸ್ತರಣದಾಚೆ ಗುಡ್ಡದ ಪಕ್ಕದಲಿ ಒಂದು
ತಗ್ಗಾದ ಹೊಲ ಇಹುದು. ಅದರಲೀ ನಾಲ್ಕೈದು
ವರುಷದಿಂದೀಚೆ ಯಾರೋ ಒಂದು ಜನ ಬಂದು
ಗುಡಿಲುಗಳ ಕಟ್ಟಿಕೊಂಡವರು ವಾಸಿಸುತಿಹರು.
ಇವರ ಜಾತಿಯನು ನಾ ಕೇಳಿಲ್ಲ. ಇತ್ತೀಚೆ
ಯಾರನಾಗಲಿ ನಿಮ್ಮ ಜಾತಿ ಯಾವುದು ಎಂದು
ಕೇಳಬಾರದು ಎಂದು ಶಪಥ ಮಾಡಿಹೆ ನಾನು.
ಎಲ್ಲಿಂದಲೋ ಬಂದು ಪಾಳೆಯವ ಹಾಕಿರುವ
ಈ ಮಂದಿ ಕೆರೆಬಾವಿ ಕಟ್ಟಡದ ಕೆಲಸವನು
ಮಾಡುವರು. ನಮ್ಮ ಮನೆಯಲಿ ಒಂದು ಬಾವಿಯನು
ತೆಗೆಸಬೇಕಾಗಿರಲು ಇವರ ಹಟ್ಟಿಗೆ ನಾನು
ಹಲಬಾರಿ ಹೋಗಬೇಕಾಯ್ತು. ಇಂತಿರೆ ಒಮ್ಮೆ
ಪಾಳೆಯದಲೊಂದು ಸಂಗತಿ ನಡೆದು ಈ ಜನದ
ಬಾಳ ಪರಿ ಇನಿಸು ತಿಳಿಯಿತು ನನಗೆ. ಅದನೀಗ
ಗೆಳೆಯರಲಿ ಹೇಳುವೆನು.

ಈ ಜನರ ನಯನೀತಿ
ಹಲವು ವಿವರದಲಿ ನಮ್ಮಿಂದ ಬೇರೆಯು ರೀತಿ.
ಆದರವುಗಳಲೊಂದು ನೇಮವಿದೆ, ನಿಷ್ಠೆ ಇದೆ.
ಇವರ ಜನ ತಕ್ಕಷ್ಟು ಸಂಖ್ಯೆಯಲಿ ಪಾಪಸಿ
ಲೆವ್ಯಾಸಿ ಅಥಣಿ ಎಂಬಲಿ ಇಹರು. (ಈ ಅಥಣಿ
ಬೆಳಗಾಂ ಬಿಜಾಪುರದ ಹತ್ತಿರದ ಊರಲ್ಲ;
ಬೇರೆ.) ಈ ಎಲ್ಲ ಊರಿನ ಇವರ ಜನರೆಲ್ಲ
ಒಂದೆ ದೇವರ ಮನೆಗೆ ನಡೆದುಕೊಂಬರು. ಅವನ
ಹೆಸರು ವೆಂಕಟರಮಣ. ಕುಲವೆಲ್ಲ ಈ ಒಂದು
ದೈವವನೆ ಪೂಜೆ ಮಾಡುವುದು; ಯಾರದೆ ಮನೆಗೆ
ಬೇರೆ ದೇವರು ಇಲ್ಲ. ಈ ದೇವರನು ಹೊರತು
ಬೇರೆ ಇವರಲಿ ದೇವರಿಲ್ಲ. ಇದರಿಂದ ಈ
ದೇವರಲಿ ಯಾವನರ್ಚಕನಾಗಿ ನಿಲ್ಲುವನು
ಅವನು ಈ ಜನಕೆಲ್ಲ ಯಜಮಾನನಾಗುವನು.
ಜನವೆಲ್ಲ ಅವನ ಅಪ್ಪಾ ಎಂದು ಕರೆಯುವುದು.
ಇವರಿಲ್ಲಿ ಬರುವುದಕೆ ಬಹುಹಿಂದೆ ಈ ಜನಕೆ
ಕ್ರೋನಜ್ಜ ಎಂಬ ಯಜಮಾನ ಇದ್ದನು. (ಇವರು
ವೃದ್ಧರಾದವರ ಹೆಸರುಗಳ ಕೊನೆಯಲಿ ಅಜ್ಜ
ಎಂದು, ಹಿರಿಯರ ಹೆಸರುಗಳ ಕೊನೆಗೆ ಅಣ್ಣಯ್ಯ
ಎಂದು, ಕಿರಿಯವರ ಹೆಸರಿನ ಕೊನೆಗೆ ಗ, ಅಚ್ಚ,
ಎಂದು, ತುಣುಕನು ಸೇರಿಸುವರು. ಹೆಣ್ಮಕ್ಕಳಲಿ
ಹಿರಿಯರನು ಅಕ್ಕ ಎನ್ನುವರು; ಉಳಿದಾಕೆಯರ
ಹೆಸರಷ್ಟರಿಂದ ಕರೆಯುವರು.) ಕ್ರೋನಜ್ಜನಿಗೆ
ಒಬ್ಬ ಮಗ. ಅವನ ಜೂಸಣ್ಣ ಎಂಬರು. ಕ್ರೋನ
ದೇವರರ್ಚಕನಾಗಿ ಬಹುಕಾಲ ಈ ಜನವ
ಆಳಿದ್ದನಂತೆ. ಜೂಸಣ್ಣನಿಗೆ ಪ್ರಾಯ ಬರೆ,
ದೇವರನು ಪೂಜಿಸುವ ಕೆಲಸ ನನಗಿರಲೆಂದು

ಆವನು ಕೇಳಿದನು ; ಅಂತೆನಲು ಯಜಮಾನಿಕೆ
ತನಗಿರಲಿ ಎಂದು. ಕ್ರೋನಜ್ಜ ಒಪ್ಪದೆ ಇರಲು
ಒಂದು ದಿನ ಇವನು ತಂದೆಯನು ಕೇಳದೆ ಗುಡಿಗೆ
ಹೋಗಿ ಅಲ್ಲಿಯೆ ಕುಳಿತು, ಯಾರು ಬಂದರು ಸರಿಯೆ
ನಾನು ಈ ಸ್ಥಳವ ಬಿಡುವವನಲ್ಲ, ಎಂದನು.
ಕ್ರೋನಜ್ಜ ಮುದುಕ; ಜೂಸಣ್ಣ ಹರೆಯದ ಆಳು.
ಪಾಳೆಯದ ಬಹುಮಂದಿ, ಎಷ್ಟು ದಿನಕೂ ಮುದುಕ
ಕ್ರೋನಜ್ಜನೇಯೇಕೆ, ಜೂಸಣ್ಣ ಇರಲೇಳು,
ಎಂದು ಯೋಚನೆ ಮಾಡಿದರು. ಎಲ್ಲೊ ಒಬ್ಬಿಬ್ಬ,
ಹಿರಿಯವನು ಇರಲಾಗಿ ಕಿರಿಯವನ ಮಾತೇಕೆ,
ಎಂದು ಕ್ರೋನಜ್ಜನನು ಹಿಡಿದು ವಾದಿಸಿದರು.
ಜೂಸಣ್ಣ, "ತಂದೆ ಜೀವಂತನಾಗಿರಬೇಕೆ
ತನಗೆ ಯಜಮಾನಿಕೆಯ ಕೊಟ್ಟು ಜೀವದೊಳಿರಲಿ;
ಇಲ್ಲದಿರೆ ತಾನವನ ಏನ ಮಾಡುವುದಕೂ
ಹಿಂತೆಗೆವನಲ್ಲ. ತನ್ನನು ಬೇಡವೆಂಬವರು
ತನ್ನನಲ್ಲಿಯೆ ಕೊಂದ ಹೊರತು, ತಾ ದೇವರನು
ಬಿಟ್ಟು ಕೊಡುವವನಲ್ಲ," ಎಂದು ಗರ್ಜಿಸಿದನು.
ತುಂಬ ವಾದವಿವಾದ ನಡೆದು ಕೊನೆಯಲಿ ಕ್ರೋನ
ಯಜಮಾನಿಕೆಯನು ತೊರೆದನು. ಜೂಸ ಅದುಮೊದಲು
ಯಜಮಾನನಾಗಿ ನಿಂತನು. ಇದೆಲ್ಲಾ ನಡೆದು
ಬಹು ವರ್ಷವಾಗಿಹುದು. ನಮ್ಮ ವಿಸ್ತರಣದೆಡೆ
ಇವರು ಬಹವೇಳೆ ಜೂಸಣ್ಣನೇ ಯಜಮಾನ.
ಯಾವ ಮಾತಿಗು ಜೂಸ ಮಾಡಿದುದೆ ಕಟ್ಟಳೆ ;
ಗುಂಪೆಲ್ಲ ಒಂದು ಮನೆಯಂತೆ ಜೂಸನ ಮಾತ
ನಡೆಸುವುದು. ಹೊರಗಿನವರೊಡನೆ ಯಾವುದೆ ವಿಷಯ
ಯಾವುದೇ ಒಪ್ಪಂದ ಮಾಡುವುದು ಜೂಸನೇ.
ಯಾವ ಕೆರೆ, ಎಲ್ಲಿ ಕೊಳ, ಯಾವ ಕಟ್ಟಡ, ಎಲ್ಲಿ,

ಕೂಲಿ ಕಂಬಳವೆಷ್ಟು, ಕೆಲಸ ತೊಡಗುವುದೆಂದು,
ಯಾವ ಕೆಲಸಕೆ ಯಾರು ಹೋಗುವುದು, ಹೋದವರ
ನೋಡಿಕೊಂಬರು ಯಾರು, ಈ ಎಲ್ಲ ವಿವರವೂ
ಜೂಸಣ್ಣನಾಣತಿಯನನುಸರಿಸಿ ನಡೆಯುವುದು.
ಯಾವನೇ ಇರಲಿ ತನಗಿದಿರು ನುಡಿದರೆ ಜೂಸ
ಸಿಂಹ ಗರ್ಜಿಸುವಂತೆ ಒಮ್ಮೆ ಗರ್ಜಿಸುವನು.
ಅದ ಕೇಳಿದೊಡನೆ ಪಾಳೆಯ ಪಾಳೆಯುವೆ ನಡುಗಿ
ತಣ್ಣಗಾಗುವುದು.

ಜೂಸಣ್ಣ ಎಳೆತನದಿಂದ
ತಕ್ಕಷ್ಟು ಆಟವಾಡಿದ ಜೀವ. ಈ ಜನಕೆ
ಹೆಣ್ಣುಗಂಡಿನ ಬಳಕೆಯಲಿ ಬಹಳ ಎಗ್ಗಿಲ್ಲ.
(ಎನಲು ಈ ಜನರ ನಡತೆಯ ನಾನು ಕೀಳೆಂದು
ದೂರುತಿಹೆನೆಂದು ಗೆಳೆಯರು ತಿಳಿಯುವುದು ಬೇಡ.
ತಾನು ಸಂಸ್ಕೃತವೆಂದು ಹೆಮ್ಮೆಪಡುವ ಸಮಾಜ
ಹೆಣ್ಣುಗಂಡಿನ ಬಳಕೆಯನು ಕುರಿತು ಮಾಡಿರುವ
ಎಲ್ಲ ಕಟ್ಟಲೆಯು ಒಳಿತೆಂದು ನನಗೆನಿಸದು.)
ಹೆಣ್ಣೊಲಿದು ಗಂಡು ಬೇಕೆಂದು ಬಯಸಿದ ವೇಳೆ
ಹತ್ತುಮಂದಿಗೆ ತಿಳಿಸಿ ಜೊತೆಯಾಗುವುದು ಇವರ
ಪದ್ಧತಿಯ ನಡೆ. ಒಲಿದವಳು ಮದುವೆ ಆದವಳೆ,
ಇವಳು ಗಂಡನ ಬಿಟ್ಟು ಬೇರೆಯವರನು ಸೇರೆ,
ತೆರವಿತ್ತು ಕೈಹಿಡಿದ ಆತನೊಪ್ಪಿಗೆ ಬೇಕು;
ಹೊಸಗಂಡ ಹಿಂದಿನವನಿಗೆ ಅವನು ತೆತ್ತಿದ್ದ
ತೆರದ ಬಳುವಳಿಯ ಬೆಲೆ ಕೊಟ್ಟು ತೀರಿಸಬೇಕು;
ಅಂತೆ ಬಳಗಕೆ ಒಂದು ಉಡಿಕೆ ಔತಣ ಹಾಕಿ
ಕುಲದ ದೈವಕೆ ಒಂದು ದಂಡವನು ತೆರಬೇಕು.
ಎನಲು ಇಂತಪ್ಪ ಸಂಗತಿ ಇವರ ಮನೆಗಳಲಿ
ಬಹಳ ನಡೆಯುತಲಿದ್ದವೆಂದಲ್ಲ. ಎಲ್ಲಿಯೋ

ಒಮ್ಮೆ ನಡೆದರೆ ಬಹಳ ಗದ್ದಲಕೆ ಎಡೆಗುಡದೆ
ಇಂತು ಅದ ಹರಿಸುವರು. ಜೂಸಣ್ಣ ದೊರೆಯಾದ—
ಇವರು ಯಜಮಾನನನು ಒಮ್ಮೊಮ್ಮೆ ದೊರೆಯೆಂದು
ಕರೆಯುವರು ; ಇದು ಇವರೆ ಬೇರೆ ಬಾಳುತಲಿದ್ದ
ದಿನದ ನೆನವೆಂದು ನಾ ತಿಳಿಯುವೆನು ;—ದೊರೆಯಾದ
ತರುಣದಲಿ ಇವನು ಹೀರಾ ಎಂಬ ಚೆಲುವೆಯನು
ಮದುವೆಯಾದನು. ಅವಳು ಮಾವೆಯಲಿ ಈತನಿಗೆ
ಮಗಳಂತೆ. ಯೂರೊ ಯಜಮಾನ ಮಗಳನೆ ಎಂತು
ಮದುವೆಯಾಗುವನೆನಲು, ಇವನು, " ನಾವೆಲ್ಲರೂ
ಒಬ್ಬ ದೇವರ ಮಕ್ಕಳಲ್ಲವೆ? ಯಾವನೂ
ಮಾವೆಯನು ನೋಡಿದರೆ ಅಜ್ಜಿಯನೊ ಮಗಳನೊ
ತಾಯನೋ ತಂಗಿಯನೊ ಮದುವೆಯಪ್ಪನು ಹೊರತು
ಮಾವೆಯಲಿ ಹೆಂಡಿರಾದವಳ ಹಸೆಸಿಲಲಿಲ್ಲ.
ಜನವೆಲ್ಲ ನನ್ನ ಅಪ್ಪಾ ಎಂಬಿರಲ್ಲವೇ ?
ಎಲ್ಲ ಹೆಣ್ಣೂ ನನಗೆ ಮಗಳೆ. ಯಜಮಾನನಿಗೆ
ಹೆಂಡಿರೇ ಬೇಡವೇ ?" ಎಂದವರ ಗದರಿದನು.
ಮದುವೆ ನಡೆಯಿತು. ಇವರು ಸುಖದಿಂದ ಬಾಳಿದರು.
ಜೂಸಣ್ಣನಿಗೆ ಹೀರೆಯಲಿ ಒಬ್ಬಮಗ ; ಅವನ
ಹೆಸರು ಆರಿಗ. ಲ್ಯಾತೆ ಎಂಬ ಒಲಿದೊಬ್ಬಳಲಿ
ಅಪ್ಪೋಡು ಎಂಬ ಮಗನೊಬ್ಬ ; ದೇವನಿ ಎಂಬ
ಮತ್ತೊಬ್ಬ ಒಲಿದ ಹೆಂಗಸು ಹೆತ್ತ ಹೆಣ್ಣುಮಗು
ಅಪರಂಜಿ; ಮೇಟಿ ಎಂಬಿನ್ನೊಬ್ಬ ಒಲಿದಾಕೆ
ಅತ್ತನಿ ಎಂಬ ಹೆಣ್ಣನು ಹೆತ್ತು ಸತ್ತಳು.
ಸದ್ಯದಲಿ ಜೂಸಣ್ಣನಿಗೆ ಹೀರ ಒಬ್ಬಳೇ
ಹೆಂಡಿರಾಗಿಹಳು. ಉಳಿದವರೊಲವು ಬರಿನೆನವು.
ಅವರ ನೆನೆಸುತ ಭುಜಕೆ ಸರಿಯಾಗಿ ಬೆಳೆದಿರುವ
ಇವರು ಮಕ್ಕಳು. ಈಗ ಸಂಸಾರ ತಕ್ಕಷ್ಟು

ಸುಖವಾಗಿಯೇ ಇಹುದು. ಜೂಸಣ್ಣ ಲ್ಯಾತೆಯನು
ಒಲಿದ ಕಾಲದಲಿ ಹೆಂಡತಿ ಹೀರೆ ಕೋಪಿಸಿ
ಲ್ಯಾತೆ ಊರನು ಬಿಟ್ಟು ತೊಲಗಬೇಕಾಯ್ತೆಂದು
ನಾನು ಕೇಳಿದೆನು. ದಿನ ಕಳೆದು ಈ ಮಕ್ಕಳೂ
ಬೆಳೆದಿರಲು ಹೆಂಡಿರಾದವಳು ಹಿಂದನು ಮರೆತು
ಎಲ್ಲರೂ ಒಂದಾಗಿ ಬಾಳುತಿರುವರು. ಮನೆಯ
ಹೆಸರ ನಿಲ್ಲಿಸುವ ಮಗ ಆರಿಗನ ಚರಿತೆಯನು
ಹೊಗಳುವಂತಿರಲಿಲ್ಲ. ಇಂಥ ತಂದೆಗೆ ಇಂಥ
ಮಗನೆ ಎಂಬಂತೆ ತೀರಾ ಧೂರ್ತನಂತಿಹನು.
ಒರಟು ನಡೆ, ಒರಟು ನುಡಿ; ಎಲ್ಲರೊಡನೆಯು ಕಲಹ.
ಉಳಿದ ಮಕ್ಕಳು ತಂದೆ ಜೂಸಣ್ಣನಂದದಲಿ
ತಕ್ಕಷ್ಟು ಗುಣವಂತರಾಗಿಹರು; ರೂಪಿನಲಿ
ಚೆಲುವಾದ ಮೂರ್ತಿಗಳು. ನಾನು ನೋಡುವ ದಿನಕೆ
ಅಪ್ಪೋಡು ಒಳ್ಳೆ ಹರೆಯದ ತರುಣ, ಕಡು ಚೆಲುವ.
ಅಪರಂಜಿಯೂ ತುಂಬ ಚೆಲುವೆ. ಎಲ್ಲರ ಜೊತೆಗೆ
ಇವಳು ಕೆಲಸಕೆ ಹೋಗದಂತೆ ಮನೆಯಲಿ ಇದ್ದು
ಬೆಳೆದು ಮೈ ಕೈ ತುಂಬಿ ಕಳಿತ ಹಣ್ಣೆಂಬಂತೆ
ನೋಡುವರ ಕಣ್ಣ ಕರೆಯುವಳು. ಎರಡನೆ ಹುಡುಗಿ
ಅಕ್ಕನಂದಕೆ ತುಂಬ ಚೆಲುವೆ ಎಂಬಂತಿಲ್ಲ;
ಆದರೂ ನೋಡುವರೆ ಚೆನ್ನವಾಗಿಯೆ ಇಹಳು.
ಅಕ್ಕನದು ಚೆಲ್ಲ; ತಂಗಿಯ ಮುಖ್ಯಗುಣ ಚದುರು.
ದೇಗುಲದ ಕೆಲಸದಲಿ ಇವಳೆ ತಂದೆಗೆ ನೆರವು.
ಇಂತಿರುತ ಇವರು ಈ ಹಿರಿಯ ಊರಲಿ ತುಂಬ
ಕೆಲಸ ದೊರೆಯುವುದೆಂದು ಈ ಕಡೆಗೆ ವಲಸೆಯಲಿ
ಸಾರಿಬಂದರು.

ಬರುವ ಮೊದಲಲೇ ಜೂಸಣ್ಣ
ಅಪರಂಜಿಯನು ತನ್ನ ಅಳಿಯನಂಟನ ತರುಣ

ಹೇಪಚ್ಚನಿಗೆ ಮದುವೆಮಾಡಿದನು. ಹೇಪಚ್ಚ
ಕುಂಟ; ಆದರೆ ಕುಂಟು ಎಂಬ ದೋಷದ ಹೊರತು
ಬೇರೆ ದೋಷವೆ ಅವನೊಳಿಲ್ಲ. ಹಣವೊಂದಿಗ.
ಇವರು ಮಾಡುವ ಕೆಲಸದಲಿ, ಹಗ್ಗಗಿಗ್ಗಗಳ
ಕುಣಿಕೆಗಳ ಗಂಟುಗಳ ಸಂಗತಿಯೊಳಿವನಿಗೆ
ಬೇರೆ ಯಾರಿಗು ತೋರದಿಹ ಯುಕ್ತಿ ತೋರುವುವು.
ಮನೆಯೊಳಗೆ ನಾಯಿ ಬರದಂತೆ, ತಾವಿರುವೆಡೆಗೆ
ರಾತ್ರಿಯಲಿ ಯಾವನೂ ಬರದಂತೆ, ಕಾಡಿನಲಿ
ಎಲ್ಲಿಯೋ ನಡೆಯುತಿಹ ಕೋಳಿ ಮೊಲ ಸೆರೆಯಾಗಿ
ಇವರ ಊಟಕೆ ಸಿಕ್ಕುವಂತೆ, ಇವನೆಂತವೋ
ಸಿಡಿಗಳನು ಹೂಡುವನು. ಆದರೇನಂತೆ? ಸಿಡಿ
ಏನೇನನೋ ಹಿಡಿದರೂ ಇವನು ಕೈಹಿಡಿದ
ಹೆಣ್ಣಮನಸನು ಹಿಡಿಯಲಿಲ್ಲ ಅಪರಂಜಿಗೆ
ಇವನ ಕಂಡರೆ ಒಲವೆ ಇಲ್ಲ. ಇವನನು ಕುಂಟ
ಎಂದು ಹಾಸ್ಯದಲಿ ನುಡಿವಳು ಅವಳು. ಒಲವೆಲ್ಲ
ಅರಿಗನ ಮೇಲಿತ್ತು. (ಅಣ್ಣತಂಗಿಯರೆಂಬ
ಸಂಬಂಧ ಇವರಿಬ್ಬರಿಗೆ ಅಡ್ಡಿ ಬರಲಿಲ್ಲ.
ತಾಯದಿರು ಬೇರೆ. ಅಪರಂಜಿಯು ಹೆತ್ತವಳು
ಮದುವೆಯಾದವಳಲ್ಲ.) ಮದುವೆಗೂ ಮುಂದಾಗಿ
ಇವರಿವರು ಅತಿಸರಸಮಾಡಿದುದ ಹತ್ತು ಜನ
ನೋಡಿದ್ದುದುಂಟು. ಜೂಸಣ್ಣನಿಗು ಈ ಮಾತು
ಕಿವಿಗೆ ಬಿದ್ದಿದ್ದಿತೊಂದೊಮ್ಮೆ. ಆದರೆ ಅವನು
ಅದನು ಲಕ್ಷಿಸಲಿಲ್ಲ. ಮಕ್ಕಳಾಟದ ಮಾತು,
ಮದುವೆಯಾದರೆ ತಾನೆ ಸರಿಹೋಗುವುದು ಎಂದೊ,
ಮತ್ತೆ ಏತಕೊ, ಸುಮ್ಮನಿಹನು. ಹೇಪಚ್ಚನಿಗೆ
ಇದರ ಸಂಗತಿ ಸ್ವಲ್ಪ ಗೊತ್ತು. ಅವನೂ ಅದನು
ಮದುವೆಯಾಗದ ಹುಡುಗಿಯಾಟ ಎಂದೇ ಬಗೆದು

ಮಾತನಾಡದೆ ಇದ್ದನಹುದು. ಆದರೆ ಸರಸ
ಮದುವೆಯಾಯಿತು ಎಂದು ನಿಲಲಿಲ್ಲ. ಇದೆ ನಮ್ಮ
ಕತೆಯ ಮುಖ್ಯ ವಿಚಾರ.

ಪಾಳೆಯದ ಮಧ್ಯದಲಿ
ಜೂಸಣ್ಣನವು ಮೂರು ಗುಡಿಸಲಿವೆ. ಅವುಗಳಲಿ
ಒಂದು ದೇವರ ಮನೆ; ಒಂದು ಮಕ್ಕಳ ಮನೆ.
ಒಂದು ಹೀರಾಜೂಸ ಇರುವ ಮನೆ. ಇದರಲ್ಲಿ
ಎಲ್ಲರೂ ಊಟ ಮಾಡುವರು. ಆ ಪಕ್ಕದಲೆ
ಜೂಸಣ್ಣನಾದ ತರುವಾಯ ಬಳಗಕೆ ಹಿರಿಯ
ಪಸದಣ್ಣ ಇರುವ ಗುಡಿಸಲು. ಅದರ ಎದುರು ಬದಿ
ಹೇಪಚ್ಚನದು. ಪಾಳೆಯದ ಹಿರಿಯ ಜನವೆಲ್ಲ
ಬೆಳಗಿನೂಟವ ಮುಗಿಸಿ ಕೆಲಸದೆಡೆಗಳ ಕುರಿತು
ಸಾರುವರು; ಜೂಸಣ್ಣ ಕೆಲಸಗಳ ಹಿಡಿವುದಕೆ
ಹೋಗುವನು ಹೊರತು, ದಿನದಿನದ ಕೆಲಸವ ನೋಡಿ
ನಡೆಸುವರೆ ಹೋಗುತಿರಲಿಲ್ಲ. ಅಲ್ಲದೆ ಅವನು
ಆಗಾಗ ದೇವರನು ಕೊಂಡು ಪಾಪಸಿ ಅಥಣಿ
ಲೆವ್ನಾಸಿಯತ್ತ ಹೋಗುವುದುಂಟು. ಆರಿಗ,
ತಂದೆಯೊಂದಿಗೆ ಜಗಳವಾಡಿ, ಪಸದಣ್ಣನಿಗೆ
ಅವನ ಮಗನನು ಕುರಿತು ಒಮ್ಮೆ ಕೆಡುನುಡಿಯಾಡಿ,
ಮಾತನಾಡುವ ಮೊದಲು ಹೊಡೆಯುವುದು ಬಡಿಯುವುದು
ಎಂಬ ಸೂತ್ರವ ಹಿಡಿದು, ಎಲ್ಲರಿಗು ಹಗೆಯಾಗಿ
ಕೆಲಸ ಯಾವುದಕು ಹೋಗದೆ ಪಾಳೆಯದೊಳಿಹನು.
ಹೇಪಚ್ಚ ಎಲ್ಲರಂತೆಯೆ ತನ್ನ ಕೆಲಸದೆಡೆ
ಸಾರಿರಲು ಇಲ್ಲಿ ಅಪರಂಜಿ ಆರಿಗನೊಡನೆ
ಮರ್ಯಾದೆಯನೆ ಮರೆತು ಇಚ್ಛೆ ಬಂದಂದದಲಿ
ಆಡುವಳು. ಯಾರಾದರೂ ಕಂಡು ಇದು ಏನೆ

ಎನೆ, ಅಣ್ಣನೊಡನೆ ನಕ್ಕರೆ ಆದ ತಪ್ಪೇನು,
ಮರ್ಯಾದೆ ತಿಳಿಯುವುದು ನಿಮಗೆ ಮಾತ್ರವೊ, ಎಂದು
ಅವರ ಬಾಯನು ಬಡಿಯುವಳು.
ಒಂದು ಮಧ್ಯಾಹ್ನ
ಹೇಪಚ್ಚ ಶಾಳೆಯಕೆ ಬಂದು ಇವರಿಬ್ಬರೂ
ಒಂದು ಕಡೆ ಕುಳಿತು ಕೆಲೆದಾಡುತಿರುವುದ ಕಂಡು
ಕೂಗಾಡಿ ಮಾವ ಜೂಸಣ್ಣನಿಗೆ ಈ ಹದನ
ತಿಳಿಸಿ, ಆರಿಗನ ಬೇರೆಲ್ಲಿಗಾದರು ಕಳುಹು,
ಇಲ್ಲವೇ ತಾನು ಹೆಂಡಿರ ಜೊತೆಗೆ ಬೇರೆ ಕಡೆ
ಸಾರುವೆನು, ಎಂದು ಹೇಳಿದನು. ಜೂಸಣ್ಣನಿಗೆ
ಅಪರಂಜಿಯನು ದೂರ ಕಳಿಸುವರೆ ಮನಸಿಲ್ಲ.
ಆರಿಗನ ಮಾತು ಅವನಿಗು ಬೇಸರೇ. ಅವನು
ಆರಿಗನ ಬಳಿಗೆ ಕರೆದನು ; ತುಂಬ ಗದರಿದನು ;
ನೀ ತೊಲಗಿ ಒಡನೆಯೇ ಎತ್ತಲಾದರು ಹೋಗು
ಇತ್ತ ಕಡೆ ಬರಬೇಡ ಎಂದಾಜ್ಞೆ ಮಾಡಿದನು.
ತಡೆಯಲಾರದ ಕೋಪದಿಂದ ಆರಿಗ ತನ್ನ
ತಂದೆಯನು ದುರುಗುಟ್ಟಿ ನೋಡಿ ಅದು ಎತ್ತಲೋ
ಹೊರಟು ಹೋದನು. ಅವನು ಹೋದಂದು ಅಪರಂಜಿ
ತುಂಬ ಅತ್ತಳು ; ತುಂಬ ಗಂಡನನು ಹಳಿದಳು ;
"ಕೈಕಾಲು ಚೆನ್ನವಾಗಿಹ ಯಾರನೂ ನಾನು
ಮಾತನಾಡಿಸಬಾರದೆಂದು ನಿನ್ನಿಚ್ಛೆಯೇ ?
ಒಂದು ಮನೆಯಲಿ ಹುಟ್ಟಿಬೆಳೆದ ಆರಿಗನೊಡನೆ
ನಾನು ನಕ್ಕರೆ ನಿನ್ನ ಕಣ್ಣಿಗದು ಬೇನೆಯೇ ?
ಅಂತು ಇಂತುಂತೆ"ಂದು ಎನಿತೊ ನುಡಿ ನುಡಿದಳು.
ಶಾಳೆಯದ ಜನವೆಲ್ಲ ಬಲ್ಲದು, ಇದೆಲ್ಲವೂ
ಇನಿಯನಾದವನು ಎತ್ತಲೊ ಹೋದನೇ ಎಂದು
ಅವಳು ಮಾಡುವ ರಂಪು ಎಂದು. ಹೇಪಚ್ಚನಿಗೆ,

ಇವಳು ಆರಿಗನೊಡನೆ ಬರಿಯ ಮಾತಿನ ಸರಸ
ಎಷ್ಟೊ ಅಷ್ಟನೆ ಆಡಬಹುದೇನೊ, ನಾನಿದಕೆ
ಸುಮ್ಮನೆಯೆ ಶಂಕಿಸುವೆನೋ, ಎಂದು ಸಂದೇಹ.
ಇಂತು ಕೆಲಕಾಲ ಕಳೆಯಿತು.

ಒಮ್ಮೆ ಜೂಸಣ್ಣ
ಅಥಣಿಯಲಿ ಆವರ್ಷ ನಡೆಯಬೇಕಾಗಿದ್ದ
ಪೂಜೆಯನು ನಡಸೆ ದೇವರನು ಅಲ್ಲಿಗೆ ಒಯ್ದು
ಹೋಗಿಹನು. ಪಾಳೆಯವ ನೋಡಿಕೊಳ್ಳುವ ಕೆಲಸ
ಪಸದಣ್ಣನದು.

ಆ ಸುಮಾರಿನಲಿ ಒಂದು ದಿನ
ಪಾಳೆಯದ ಬದಿಯ ಗುಡ್ಡದ ಮೇಲುಗಡೆ ಇರುವ
ಮಂಟಪದ ಬಳಿ ಇವರ ಹೀಲಯ್ಯ ನಡೆಯುತಿರೆ
ಅಪರಂಜಿ ಅದರ ಒಳಗಡೆಯಿಂದ ಬಂದಳು.
ಇವಳು ಇದರಲಿ ಏನು ಮಾಡುತಿರುವಳೊ ಎಂದು
ಹೀಲ ಬಾಗಿಲೊಳಿಣಿಕಿ ನೋಡೆ ಆರಿಗ ಇದ್ದ;
"ಯಾರು ಅದು" ಎಂದು ಒದರಿದ. ಹೀಲ ಪ್ರತಿಯಾಗಿ
ಮಾತನಾಡದೆ ದೂರ ಸರಿದ; ಬಳಗದ ಹಿರಿಯ
ಪಸದಣ್ಣನಿಗೆ ತಾನು ಕಂಡುದನು ತಿಳಿಸಿದ.
ಪಸದಣ್ಣ ತುಂಬ ಅನುಭವಶಾಲಿ; ಬಹು ದಕ್ಷ.
ಆದರೂ ಬಹುತಾಳ್ಮೆಯಾತ. (ಆರಿಗ ಒಂದು
ಜಗಳದಲಿ ಇವನ ಮಗನನು ಕೈಗೆ ಬಂದಂತೆ
ಬಡಿದು ಆ ಪೆಟ್ಟಿಂದ ಮಗ ಸತ್ತುಹೋಗಿದ್ದ.
ಆದರೂ ಪಸದಣ್ಣ, "ಹುಡುಗ ಹುಡುಗರ ಮಾತು;
ಯಾರು ಮೊದಲಲಿ ಜಗಳ ತೆಗೆದರೋ ಅದ ನಾವು
ಕಾಣೆವಲ್ಲ; ಸತ್ತವನು ಸತ್ತ; ಇರುವವನ
ನಿಜವನರಿಯದೆ ನಾವು ಗಳಹುವುದು ಸರಿಯಲ್ಲ"
ಎಂದು ತಾನೇ ಸಮಾಧಾನವನು ತಾಳಿದನು.)

ಇಂದು ಆರಿಗ ಮತ್ತೆ ಪಾಳೆಯದ ಬಳಿಗೈದಿ
ತನ್ನ ತುಂಟಾಟವನು ಮತ್ತೆ ತೊಡಗಿದನೆನಲು
ಪಸದಣ್ಣ, ದೊರೆಯು ಮನೆಮಾತು, ಸಿಕ್ಕಿದ ಮಂದಿ
ಇದರ ತಂಟೆಗೆ ಹೋಗಬೇಡ, ಸುಮ್ಮನೆ ಇರಿ,
ಎಂದು ಹೇಳಿದನು. ಇಂತಿವನು ಹೇಳಲು ಒಂದು
ದೊಡ್ಡ ಕಾರಣ, ಆಗ ಜೂಸಣ್ಣ ಅಲ್ಲಿಲ್ಲ
ಎಂಬುದೇ. ಆದರೂ ಇವನಂತೆ ಉಳಿದ ಜನ
ಸುಮ್ಮನಿರುವರೆ? ಪಾಳೆಯದ ಜನರ ಗುಜುಗುಂಪು
ನಡೆದೆ ನಡೆಯಿತು. ಆರಿಗನ ಬೇರೆ ಜನ ಕಂಡು
ಅವನು ಬಂದಿಹುದು ನಿಜವೆಂದು ನಿರ್ಧರಿಸಿತು.
ಮತ್ತೆ ಅಪರಂಜಿ ಆರಿಗ ಪಾಳೆಯದ ಕೊನೆಗೆ
ಬರಿದಾಗಿ ಇದ್ದ ಗುಡಿಸಲು ಒಂದರಲಿ ದಿನಾ
ಸೇರುತಿರುವುದ ಎಲ್ಲ ಪಾಳೆಯವೆ ಕಂಡಿತು.
ಇಷ್ಟಾದ ಮೇಲೆ ಈ ಮಾತು ಹೇಪಚ್ಚನಿಗೆ
ಕೇಳಬಂದಿತು. ಅವನು ಅಪರಂಜಿಯನು ಕರೆದು,
"ನಿನಗೆ ಆರಿಗನ ಜೊತೆ ಅನಿತು ಬೇಕೆನಿಸಿರಲು
ನನ್ನ ಬಿಡು, ಅವನೊಡನೆ ಹೋಗು, ಈ ಸಂಗಾತ
ನನಗೆ ಬೇಡಲೆ ಬೇಡ," ಎಂದು ನುಡಿದನು. ಅವಳು
"ನಾನು ಆರಿಗನೊಡನೆ ಕೂಡಿ ಮಾತಾಡುವುದು
ನಿಜ. ಅವನು ಅಣ್ಣ, ನಾ ತಂಗಿ. ಎಳೆತನದಿಂದ
ನಾವು ಬಹು ಸರಸದಲಿ ಬೆಳೆದಿಹೆವು. ಅದರಿಂದ
ನಾನು ಅವನೊಡನೆ ನುಡಿಯದೆ ಬಾಳಲಾರೆನು.
ಆದರೂ ಇದ ನೀನು ನಂಬು. ಏಕಾಂತದಲೆ
ಸೇರಿದ್ದರೂ ನಾವು ಒಡಲುಗಳ ಬೆರೆಸಿಲ್ಲ.
ಇಷ್ಟು ಹೇಳಿದ ಮೇಲೆಯೂ ನೀನು ಬಹುಗಂಡು
ನಾನು ಬರಿ ಹೆಣ್ಣೆಂದು ನೀನು ಬಿಡುಗಡೆ ಬಯಸೆ
ನಾ ಬೇಡವೆಂಬಳಲ್ಲ," ಎಂದು ಹೇಳಿದಳು.

"ಸತ್ಯವಂತರು, ಅಣ್ಣ ತಂಗಿಯರು, ಮಾತಾಡೆ
ಬೇರೆ ಯಾವುದೊ ಗುಡಿಸಲೇಕೆ; ಮಂಟಪವೇಕೆ;
ಈ ನಮ್ಮ ಗುಡಿಸಲಲೆ ಮಾತಾಡಿ; ಅಪರಂಜಿ
ಹೇಪಚ್ಚನಿಗೆ ಮೋಸಮಾಡಿ ಆರಿಗನೊಡನೆ
ಆಡುತಿರುವಳು ಎಂಬ ಅಪವಾದ ತಪ್ಪುವುದು;
ಜನರಾಡಿಕೊಂಬುದನು ಕೇಳದಂದಕೆ ನಾನು
ತಲೆಯು ತಗ್ಗಿಸಿಕೊಂಡು ನಡೆಯುವುದು ತಪ್ಪುವುದು."
ಎಂದೆನಲು ಹೇಪಚ್ಚ ಅದುಮೊದಲು ಅಪರಂಜಿ
ಆರಿಗನ ತನ್ನ ಮನೆಗೇ ಕರೆದುತಂದಳು.
ಹೇಪಚ್ಚನಿಲ್ಲದಿಹ ವೇಳೆ ಆ ಪ್ರಿಯನೊಡನೆ
ಇಚ್ಛೆ ಬಂದಂತೆ ಇರಬಹುದೆಂದು ಬಗೆದಳು.

ಅಪರಂಜಿ ಆರಿಗನ ತಮ್ಮ ಮನೆಗೇ ಕರೆದು
ಅಲ್ಲಿ ಅವನೊಡನೆ ಆಡುವ ರೀತಿಗೆಯ್ವಂದು
ಹೇಪಚ್ಚನುದ್ದೇಶ ಬೇರೆ. ಏನೆಂದರೂ
ತಾವು ಒಡಲೊಡಲ ಸಂಬಂಧವನು ಬೆಳಸಿಲ್ಲ
ಎಂದಿವಳು ಸಾಧಿಸುತಲಿಹಳು. ಈ ಸಂಬಂಧ
ಇವರು ಬೆಳಸದೆ ಬಿಟ್ಟುದಲ್ಲ. ಆದರೆ ಇದನು
ಹೇಳಿದರೆ ಜನರು ಒಪ್ಪರು. ಇವಳು ದೊರೆಮಗಳು.
ಆದರಿಂದ ಇವರ ಸಂಬಂಧ ಎಂತಹದೆಂದು
ತೋರಿಯೇ ಇವಳಿಂದ ಬಿಡಿಸಿಕೊಂಬುದು ಸಮ,
ಎಂದವನು ಆಲೋಚಿಸಿದನು. ಇದ ಸಾಧಿಸುವ
ತೆರನ ಆರಯಿಸಿದನು. ಕುಣಿಕೆಗಳ ಗಂಟುಗಳ
ತನ್ನ ತಿಳಿವನು ಬಳಸಿ ಅಪರಂಜಿ ಪವಡಿಸುವ
ಹಾಸಿನಡಿಯಲಿ ಕಣ್ಗೆ ಕಾಣದಂದಕೆ ಹಲವು
ಅಡ್ಡ ದಾರವ ಹಾಕಿ ಕೊನೆಯ ಹೊರಗಡೆಗಿಟ್ಟು,
ಎಂದಾದರೂ ಒಮ್ಮೆ ಇವರು ಆ ಹಾಸಿನಲಿ

ಪವಡಿಸಿದ ವೇಳೆ ಅದನೆಳೆಯುವುದು, ಅಪ್ಪಿರುವ ಇವರು ಅಪ್ಪಿರುವಂತೆ ಹಿರಿಯರಿಗೆ ತೋರುವುದು, ಎಂದು ಹವಣಿಕೆ ಮಾಡ್ಡಿದನು. ಕುಣಿಕೆ ಸರಿಯಾಗಿ ಬೀಳುವುದು ಎಂದು ನಿಶ್ಚಯಮಾಡಿಕೊಂಡುದೇ ತನ್ನ ನಚ್ಚಿನ ಗೆಳೆಯ ಹೀಲಯ್ಯನನು ಕರೆದು ತನ್ನಿಚ್ಛೆಯೇನೆಂದು ತಿಳಿಸಿ, ಅದನೆಳೆಯುವುದ ಕಲಿಸಿ, ತಾನೇನೊ ಕೆಲಸಕೆ ಸಿಂದಿ ಎಂಬವರ ಬೇರೆ ಊರಿಗೆ ಹೋಗಲಿಹೆನೆಂದು ಪಾಳೆಯದಿ ಮಾತ ಹರಡಿದನು. ಹೀಲಯ್ಯನಿಗೆ, "ನಾ ಈಗ ಹೋದಂತೆ ಮಾಡುವೆನು; ಎಂದು ಆರಿಗ ಬಂದು ಇವರು ಒಳಗಡೆ ಸೇರುವರು ಆಗ ನೀ ಹೊರಗೆ ನಿಂತಿದ್ದು ಕುಣಿಕೆಯನು ಎಳೆ; ಸಿಕ್ಕಿಕೊಳ್ಳುವರು; ಇನಿತೆನಗೆ ಉಪಕಾರ ಮಾಡು," ಎಂದನು. ಗೆಳೆಯ ಇದಕೆ ಒಪ್ಪಿರಲು ಅದೆ ದಿನ ಎಲ್ಲರಿದುರಿನಲಿ ಹೋಗಿ ಬರುವವನೆಂದು ತಿಳಿಸಿ ಹೊರಹೊರಟನು.

ಅದರ ಮಾರನೆ ದಿವಸ ಪಾಳೆಯದ ಹಿರಿಯುವರು ಅವರವರ ಕೆಲಸದೆಡೆ ಸಾರಿರಲು ಆರಿಗ ಅಪರಂಜಿಯತ್ತ ಬಂದನು. ಒಬ್ಬ ಹೀಲಯ್ಯ ತನಗೆ ಮೈಯಲಿ ಅನುಕವೆಂದು ಪಾಳೆಯದಲೇ ನಿಂತಿಹುದನಿವನು ಕಾಣನು. ಆರಿಗನ ಜೊತೆಗೆ ಅಪರಂಜಿ ಒಳಗೆ ಕೆಲಹೊತ್ತು ಮಾತಾಡಿದುದು ಹೀಲಯ್ಯನಿಗೆ ಕೇಳಿಸಿತು. ಸ್ವಲ್ಪ ವೇಳೆಯಲಿ ಇವರು ಗುಡಿಸಿಲ ಬಾಗಿಲನು ಸರಿಸಿದುದನಿವನು ನೋಡಿದನು. ಜನ ಕಾಣದಂತೆ ಮೆಲ್ಲನೆ ಬಂದು ಕುಣಿಕೆಗಳ ಕೊನೆಯ ಬಳಿ ಸೂರಿನಡಿ ಕರಿದಾದ ಕಂಬಳಿಯ ಹೊದೆದಡ್ಡ ಮಲಗಿದನು. ಗುಡಿಸಲಲಿ

ಅಪರಂಜಿ ಆರಿಗರ ಚಕ್ಕಂದ ನಡೆದಿತ್ತು.
ಅಪರಂಜಿ ಅಂಥ ಚಚ್ಚರದ ಹೆಣ್ಣೇನಲ್ಲ.
ತಕ್ಕಷ್ಟು ವ್ಯೆಮರೆತು ನಡೆವವಳೆ. ಆದರೂ
ಹಗಲಿನಲಿ ಪಾಳಿಯದ ನಡುವೆ ಇದೆ ಗುಡಿಸಿಲಲಿ
ಹಾಸಿಗೆಯ ಸೇರುವುದು ಬೇಡ ಎಂದಳು ಅವಳು.
ಆರಿಗನ ಆಸೆ ಈ ಸಾವಕಾಶವ ತಡೆವ
ಜಳ್ಳಾಸೆಯಲ್ಲ. ಅಲ್ಲದೆ ಅವನ ಚೇತನಕೆ
ಸಾಹಸದಲೇ ಸೌಖ್ಯ. ಸುಲಭದಲಿ ಸುಖ ದೊರೆಯೆ
ಆದರ ಜೊತೆಯಲಿ ಇನಿಸು ಸಾಹಸವ ಬೆರಸಿಯೇ
ಅದನು ಸವಿಯುವ ಮನೋಧರ್ಮ. ಅಪರಂಜಿಯನು
ಅವನು ಬಲವಂತಪಡಿಸಿದನು. ಇಂತೆಸಗುವುದು
ತೀರದ ಅಜಾಗ್ರತೆಯ ನಡೆಯೆಂದು ತಿಳಿತಿಳಿದು
ಅವಳು ಒಪ್ಪಿದಳು; ಶಯ್ಯೆಗೆ ಅವನನೊಯ್ದಳು.

ತಿನ್ನಬಾರದ ಹಣ್ಣು ಬಹಳ ರುಚಿ. ಅಪರಂಜಿ
ಆರಿಗರು ಒಲಿದ ಚೇತನವೆರಡು. ಎರಡೆಂತು ?
ಒಂದೆ ಸರಿ. ತಮ್ಮ ಸುಖದಲಿ ಇವರು ಮೆಯ್ಮರೆತು
ಒಂದೆ ಉಸಿರಾಗಿರಲು ಹೊರಗಿಂದ ಹೀಲಯ್ಯ
ಕುಣಿಕೆಗಳ ಸರ್‍ರನೆಳೆದನು. ಏನೊ ದಾರಗಳು
ತಲೆಕೊರಳು, ಎದೆ ಸೊಂಟ, ಹೊಟ್ಟೆ ತೊಡೆ ಕೈಕಾಲ,
ಒತ್ತಿದಂತಾಗಿ ಇವರೊಬ್ಬರೊಬ್ಬರ ಬಿಟ್ಟು
ಏಳನೋಡಿದರು. ಒಬ್ಬರನು ಒಬ್ಬರು ಬಿಡಲು
ಎಡೆ ಇಲ್ಲ. ಕೂಡಿ ಬಿದ್ದಿರುವಂತೆ ಬಿದ್ದೇ
ಇರಬೇಕು. ಏನಾಯಿತೆಂದು ತಲೆಯನು ಎನಸೊ
ತಿರುಗಿ ನೋಡಿದರೆ ಯಾವುದೊ ಒಂದು ಬಲೆ ತಮ್ಮ
ಸುತ್ತಿಕೊಂಡಿಹುದು. ಅಪರಂಜಿ ಇದು ಹೇಪಚ್ಚ
ತಪ್ಪಿನಲಿ ತಮ್ಮ ಹಿಡಿವುದಕೆ ಮಾಡಿದ ತಂತ್ರ
ಎಂದು ತಿಳಿದಳು; ಸಿಕ್ಕಿಕೊಂಡೆನೇ ಎಂಬೊಂದು

ಬೇಸರದ ಜೊತೆಗೆ ಹೇಪಚ್ಚ ತೋರಿದ ಜಾಣ
ಕುರಿತು ಮೆಚ್ಚಿಗೆಯನನುಭವಿಸಿದಳು. ಎಲಎಲಾ,
ಬುದ್ಧಿವಂತನ ಕೈಗೆ, ಬೆಳೆದ ಮನುಜರು ಕೂಡ
ಕಾಡ ಮೊಲಕೋಳಿಯೇ ಹೊರತು ಹೆಚ್ಚೇನಲ್ಲ,
ಎಂದು ನೆನೆದಳು; ತೆಕ್ಕೆಬಿದ್ದಿರುವ ಆರಿಗನ
ಒಂದು ಮೊಲ ಬರಿದೊಂದು ಕೋಳಿ ಎಂದೆಣಿಸಿದುದೆ
ತಡೆಯಲಾರದೆ ಒಂದು ಮೆಲುನಗೆಯ ನಕ್ಕಳು
ಸರಿಯಾದೆವೆಂದರಿತು ಆರಿಗನ ಮನಸಿನಲಿ
ತುಂಬ ಬೇಸರ. ಏನು ನಗುತಿರುವೆ ಎಂದವನು
ಕೇಳಿದನು. ಇವಳು "ಏನೂ ಇಲ್ಲ. ಈವರೆಗೆ
ಅಣ್ಣತಂಗಿಯರೆಂದು ಪಾಳೆಯುವ ಬಾಯ್ಬಡಿದು
ಬಾಳಿದೆನು. ಇನ್ನಿಂತು ಹೇಳುವರೆ ಎಡೆಯಿಲ್ಲ
ಎಂದು ಯೋಚಿಸಿದೆ," ಎಂದಳು

ಹೊರಗೆ ಹೀಲಯ್ಯ
ಹುಯಿಲು ಹಾಕಿದನು ಹೇಪಚ್ಚ ಹತ್ತಿರದೊಂದು
ಹಾಳುಮಂಟಪದೊಳವಿತಿದ್ದವನು ಇದ ಕೇಳಿ
ಪಾಳೆಯಕೆ ಬಂದು ಸೇರಿದನು. ಬಾಗಿಲ ತೆರೆದು
ಇವರು ಬಿದ್ದಿಹ ಪರಿಯ ಇನಿಸೆ ಕಣ್ಣಲಿ ನೋಡಿ
ಮತ್ತೆ ಅದ ಹಚ್ಚಿ ಕಾವಲು ಅಲ್ಲೆ ಕುಳಿತನು.
ಸಂಜೆಯಾಯಿತು. ಮಂದಿ ಬಂದಂತೆ ಹೇಪಚ್ಚ
"ಎಲ್ಲ ಬನ್ನಿರಿ ಇಲ್ಲಿ; ನನ್ನ ಹೆಂಡಿರು ನನಗೆ
ಅನ್ಯಾಯ ಮಾಡಿಹುದ ನಿಮ್ಮ ಕಣ್ಣಲೆ ನೋಡಿ;
ಪಸದಣ್ಣ ಬರಲಿ; ಅವನೇ ನ್ಯಾಯ ತೀರಿಸಲಿ;"
ಎಂದು ಹೇಳಿದನು. ಎಲ್ಲಾ ಮಂದಿ ನೆರೆಯಿತು.
ಹೊರಗಿಂದಲೇ ತಲೆಯ ಹಾಕಿ ಇವರಿಹ ಪರಿಯ
ನೋಡಿ ಸಂಕೋಚದಲಿ ಹಿಂಜರಿದು ಬಂದಿತು.
ಪಸದಣ್ಣ ಬಂದ; ಅವನೊಡನೆಯೇ ಅಪ್ಪೋಡು,

ಜೊತೆಗೆ ಭರಮುಚ್ಚ ಎನ್ನುವ ತರುಣ, ಉಳಿದೆಲ್ಲ
ಹಿರಿಯರೂ ಕಿರಿಯರೂ ಹೇಪಚ್ಚನಿರುವೆಡೆಗೆ
ಬಂದು ಸೇರಿದರು. ಹೇಪಚ್ಚ ಕೂಗಾಡಿದನು :
"ಸೋದರದ ನಂಟೆಂದು ಜೂಸಣ್ಣ ಈ ಮಗಳ
ಮದುವೆಯಾಗೆಂದು ನನ್ನನು ಕೇಳಿದನು. ನಾನು
ಕುಂಟ. ಹೆಂಗಸರು ನನ್ನನು ನೋಡಿ ಒಲಿವಂತ
ಚೆಲುವನೇನಲ್ಲ. ಆದರೆ ಮಾವ ಹೇಳಿದನು,
ಹುಡುಗಿಯೂ ಒಲ್ಲೆ ಎನಲಿಲ್ಲ, ಎಂದುದೆ ನಾನು
ಮದುವೆಯಾದೆನು. ನೆಂಟನಾದರೂ ಕುಲದವರು
ಕೊಡುವಂತೆ, ವಾಡಿಕೆಯು ತೆರಕೆ ಹೆಚ್ಚಿನ ತೆರವ
ಚೆಲುವೆ ದೊರೆಮಗಳೆಂದು ಇವಳ ಸಲು ತೆತ್ತೆನು.
ಮದುವೆಯಾದವು ಅಷ್ಟೆ, ನನ್ನ ಒಲ್ಲದೆ ಇವಳು
ತನ್ನಂತೆ ಇದ್ದಿಹಳು ನನಗಿಂತ ಆರಿಗನು
ಕಟ್ಟುಮುಟ್ಟಾಳೆಂದು ಅವನೊಡನೆ ಬಳಕೆಯನು
ಬೆಳಸಿದಳು. ನಿನಗೆ ಅವನೇ ಬೇಕು ಎನಿಸಿದರೆ
ನಾನು ಬಿಡುವೆನು, ನೀನು ಅವನೊಡನೆ ಹೋಗೆಂದು
ನಾನು ಇವಳಿಗೆ ಹೇಳಿದೆನು. ಇವಳು ಕೇಳಳು.
ದೊರೆಮನೆಗೆ ಇಂತ ನಡೆ ತಗದೆಂದು, ಜೂಸಣ್ಣ
ಕೋಪಿಸುವನೆಂದು, ಇರಬೇಕು : ಸುಳ್ಳಾಡಿದಳು ;
ಅಣ್ಣತಂಗಿಯರಾಟವೆಂದು ಬೆಳ್ಳಿಸಿದಳು ;
ಇಕೊ, ನೀವೆ ನೋಡಿ, ಇವರಾಡುತಿಹ ಈ ಆಟ
ಅದು ಎಂತ ದನಕರುವಿನಣ್ಣತಂಗಿಯರಾಟ.
ಜೂಸಣ್ಣ ಬರಲಿ; ನಾ ತೆತ್ತ ತೆರಗಳನೆಲ್ಲ
ನನಗೆ ಹಿಂದಿರುಗಿಸಲಿ. ಅದುವರೆಗೆ ಇವರಿಲ್ಲಿ
ಹೀಗೆಯೇ ಬಲೆಯೊಳಗೆ ಬಿದ್ದಿರಲಿ," ಎಂದನು.

ಪಾಳೆಯದ ಹೆಣ್ಣುಮಕ್ಕಳು ಗಂಡಸರ ಎದುರು
ತಲೆಯಿಡಲು ನಾಚಿ ಅವರವರವರ ಗುಡಿಸಿಲಲಿ

ಮರೆಯಾಗಿ ಕುಳಿತು ಪಿಸುಮಾತನಾಡುತಲಿಹರು.
ಪಸದಣ್ಣ ಹತ್ತು ಮಂದಿಯ ಮಧ್ಯದಲಿ ಕುಳಿತು
ಹೇಪಚ್ಚನೆಂದುದೆಲ್ಲವ ಕೇಳಿ, "ಜೂಸಣ್ಣ
ಈಗ ಇಲ್ಲಿಲ್ಲ. ಇಂದೋ ನಾಳೆಯೋ ಅವನು
ಬರಬೇಕು ನಿಜ. ಆದರವನು ಐತಂದು ತೆರ
ಎಲ್ಲವನು ಹಿಂದಿರುಗಿಸುವವರೆಗೆ ನೀನಿವರ
ಬಲೆಯುಲಿಟ್ಟಿರುವೆನೆಂಬುದು ನನಗೆ ಒಪ್ಪಲ್ಲ
ಅಪರಂಜಿ ಮಾಡಿದುದು ತಪ್ಪು. ಆರಿಗ ಅವಳ
ಕೂಡಿದುದು ತಪ್ಪು. ಇದರದು ದಂಡವೇನಿದೆ
ಅದನು ಆರಿಗನೆ ಕೊಡುವನು ನಿನಗೆ. ಅವನಿಂದ
ಇದಕೆ ಒಪ್ಪಿಗೆ ಕೊಡಿಸುವೆನು," ಎಂದು ಹೇಳಿದನು.
ಅಣ್ಣ ಆರಿಗ ತಂಗಿ ಅಪರಂಜಿಯರಿಗಾದ
ತೊಂದರೆಯುದೆಂತು ಹರಿವುದೊ ಎಂದು ಅಪ್ಪೋಡು
ಒಂದು ಕಡೆ ಕುಳಿತಿಹನು. ಸುತ್ತ ತರುಣರು ಇಹರು.
ಭರಮುಚ್ಚ ಅಪ್ಪೋಡುವನು ಕುರಿತು, "ನಿಮಗೆ ಇದು
ತುಂಬ ಬೇಸರವಾಗಬೇಕು. ಆದರೆ ನನಗೆ
ಹೇಪಚ್ಚ ಮಾಡಿದುದು ಸರಿಯೆಂದು ತೋರುತಿದೆ.
ಆರಿಗನ ಗತಿ ಯಾರಿಗೂ ಬೇಡ," ಎಂದನು.
ಅಪ್ಪೋಡು "ಗತಿಯೇನೊ? ಅಂಥ ಬೇಡದ ಗತಿ?
ನಮ್ಮ ಅಪರಂಜಿ ಒಪ್ಪಿದರೆ ಆರಿಗನಂತೆ
ಯಾರೆ ಆದರು ಅವಳ ಕೂಡುವುದು ನಿಶ್ಚಯು.
ಅವಮಾನಪಟ್ಟರೂ ದಂಡವನು ತೆತ್ತರೂ
ಅವಳೊಡನೆ ಅಣ್ಣ ಮಲಗಿರುವಂತೆ ಮಲಗಿರಲು
ನೀ ಒಲ್ಲೆನೆನ್ನುವೆಯ?" ಎಂದು ನುಡಿದನು. ಭರಮು
"ಎಂಥ ಮಾತನು ಕೇಳಿಬಿಟ್ಟೆಯೋ, ಅಪ್ಪೋಡು!
ನಿಜ; ಲೋಕ ಇಂಥ ಸಮಯದಲಿ ವಾಡಿಕೆಯಾಗಿ
ನುಡಿವ ಮಾತನು ನಾನು ನುಡಿದೆನು. ಮಹಾಗತಿಯೆ

ಆರಿಗನ ಗತಿ? ನಿನ್ನ ತಂಗಿ ಅಪರಂಜಿಯನು
ಒಮ್ಮೆ ತೋಳಿನ ಮಧ್ಯೆ ಹಿಡಿದು ಅವುಕುವ ಪುಣ್ಯ
ದೊರಕಬಹುದೆನೆ ಇದರ ಹತ್ತರಷ್ಟರ ದಂಡ
ಹತ್ತರಷ್ಟವಮಾನವನು ಸಹಿಸಿಕೊಂಡೇನು,"
ಎಂದು ಮರುನುಡಿದು ನಕ್ಕನು. ತರುಣರೆಲ್ಲರೂ
ಘೊಳ್ಳೆಂದು ಜೊತೆಗೆ ನಕ್ಕರು. ಇವರ ಈ ಮಾತ
ಪಸದಣ್ಣ ಕೇಳುತಿರುವನು. ಆದರೂ ಹಿರಿಯ,
ನಗುವುದಾಗದು. ನಗದೆ ಬೇರೆ ಮಾತಾಡುತ್ತ
ಕೊನೆಯ ಮಾತಾಗಿ ಹೇಪಚ್ಚನನು ಒಪ್ಪಿಸಲು
"ಆರಿಗನ ಕೈಯಿಂದ ದಂಡವನು ಕೊಡಿಸುವುದು
ನನ್ನ ಮೇಲಿರಲಿ" ಎಂದನು ಅದಕೆ ಹೇಪಚ್ಚ
"ಶತಪೋಲಿ ಆರಿಗನ ಕೈಯಿಂದ ದಂಡವನು
ಕಕ್ಕಿಸುವ ಹೊಣೆಯನೇತಕೆ ಹೊರುವೆ ಪಸದಣ್ಣ?
ನಾನು ಕಾಣದ ಸತ್ಯವಂತನೇ ಆರಿಗ?
ನೀನು ಕಾಣೆಯ ಅವನ ಸತ್ಯವನು? ಶತಪೋಲಿ
ಅವನು ಕೊಡಲಿಲ್ಲವೆನ್ನೋಣ, ಹೊಣೆ ನಿಂತವನು
ನೀನು ಕೊಡು ಎಂದು ನಿನ್ನನು ಕೇಳಲಾಗುವುದೆ?
ಕೇಳಿದರೆ ಮುಂದಿ ತರವೆನ್ನುವುದೆ? ಆ ಮಾತು
ಬೇರೆಯಾಯಿತು. ಬಿಟ್ಟುಬಿಡು ಎಂದು ಬಳಗದಲಿ
ಹಿರಿಯನಾದವನು ಅಪ್ಪಣೆಮಾಡುತಿರೆ ನಾನು
ಬಿಡಲಾರೆನೆನ್ನುವುದು ತಗದು. ದಂಡವೊ ತೆರವೊ,
ಬಂದಿತೇ ಬರಲಿ, ಬರಲಿಲ್ಲವೇ ಹೋಗಲಿ.
ಹಿರಿಯನಾಡಿದ ಮಾತ ನಡೆಸುವೆನು," ಎಂದನು.
ಇಂತೆಂದು ಹೇಪಚ್ಚ ಕುಣಿಕೆದಾರದ ಕೊನೆಯ
ಕುಚ್ಚ ಹಿಡಿದದರ ಅವುದೊ ಒಂದು ದಾರವನು
ಸೆಳೆದು ಹೀಲಯ್ಯನಿಗೆ ಕೊಟ್ಟು, ಇದ ಸುತ್ತೆಂದು
ಬೆಸಸಿದನು. ಹೀಲಯ್ಯ ಸರಸರನೆ ಅದ ಸುತ್ತಿ

ಎಳೆದಿರಲು ಗುಡಿಸಲಲಿ ಅಪರಂಜಿ ಆರಿಗರ
ಹಿಡಿದಿದ್ದ ಬಲೆ ಸಡಿಲವಾಯ್ತು. ಹಾಸಿಗೆಯಿಂದ
ಎದ್ದು ಅವರಿಬ್ಬರೂ ಹೊರಗೆ ಬಂದರು. ಮೊದಲು
ಅಪರಂಜಿ, ಹಿಂದೆ ಆರಿಗ. ಎಂಥ ಅಪಮಾನ
ಆದರೂ ಅಪರಂಜಿ ಹೊರಗಡೆಗೆ ಬಂದಾಗ
ಹಿಂದೆ ಎಂದೂ ಇಲ್ಲದೊಂದು ನಾಚಿಕೆಯಿಂದ
ಹೊಸದೊಂದು ಚಂದವನು ತೋರಿದಳು. ಹೇಪಚ್ಚ
ಹೊರಟುಹೋಗುವ ಅವಳ ನೋಡಿ ಹಟ್ಟಿಯುಲಕ್ಕಿ
ಹೋದಳಲ್ಲಾ ಎಂದು ಕೋಪದಲೆ ನೊಂದನು.
ಆರಿಗನ ಮುಖ ನೋಡಬೇಡ; ಕಂದಿದ ಬದನೆ.
ಎಡಬಲಕೆ ಕಣ್ಣು ಹಾಕದೆ ಅವನು ಕೋಪದಲಿ
ಬುಸುಗುಟ್ಟುತಿರುವ ಹಾವಂತೆ ಹೊರಹರಿದನು.
ಆ ಮೇಲೆ ಅವನು ತೇರಸಿಗೆ ಸಾರಿದನೆಂದು
ಕಂಡವರು ಹೇಳಿದರು. ಅಪರಂಜಿ ಒಂದು ದಿನ
ಪಾಳೆಯುದೊಳಿದ್ದು ಮರುದಿವಸ ಪಾಪಸಿಯುತ್ತ
ಹೊರಟುಹೋದಳು. ಇತ್ತ ಹೇಪಚ್ಚ, ತೆರ ಬರಲಿ
ಬರದಿರಲಿ, ಇವಳ ಹೆಂಡಿರು ಎನ್ನುವುದು ನನಗೆ
ಸಾಕು, ಎಂದುದೆ ತಮ್ಮ ಮದುವೆಯನು ಮುರಿಸಿದನು.

ಅಪರಂಜಿ ಪಾಪಸಿಯ ಸೇರುವಂದಿಗೆ ಅಲ್ಲಿ
ಈ ಸುದ್ದಿ ಮುಟ್ಟಿ ಅವಳಿಗೆ ಗೆಳತಿ ಐದೆಯರು,
ಮದುವೆ ಹರಿದುದರ ಸಲುವಾಗಿ, ಮಲ್ಲಿಗೆ ಜಾಜಿ
ಮರುಗದವನದ ಎಣ್ಣೆಯನು ಒತ್ತಿ, ಚಂದನದ
ಕದಡು ತಿಳಿದಿಹ ಬಿಸಿಯನೀರ ಮಾಣವ ಮಾಸಿ,
ಹೊಸ ಉಡುಗೆಯನು ಉಡಿಸಿ ಹೊಸ ತೊಡುಗೆಯನು ಹಾಕಿ
ಅಪರಂಜಿ ಮತ್ತೆ ಹೊಸ ಹೆಣ್ಣೆಂದು ಸಂಭ್ರಮಿಸಿ,
ಅಪ್ಸರೆಗೆ ಎಂತಂತು ಒಸಗೆಯನು ಹಾಡಿದರು.

*  *  *  *

ಹಿರಿಯಣ್ಣ ಟೀಕೆಯಲಿ ತೊಡಗಿದರು: "ಕೌಶಿಕರು
ನಮ್ಮ ಸೀಮೆಯದೆಂಬ ರೀತಿಯಲಿ ಹೇಳಿರುವ
ಈ ಕತೆಯ ನೀವೆಲ್ಲ ಗ್ರೀಕ್ ಜನರ ಕತೆಯೆಂದು
ಮೊದಲಲೇ ಗುರುತು ಹಿಡಿದಿರಬೇಕು. ಕ್ರೋನಜ್ಜ
ಎಂದಾಗಲೇ ನನಗೆ ಸಂದೇಹ. ಜೂಸಣ್ಣ
ಬಂದೊಡನೆ ಇವನು ಗ್ರೀಕರ ಜ್ಯೂಸ್, ಒಲಿಂಪಸಿನ
ಉದ್ದಾಮ ದೈವವೆಂಬುದು ಸಿದ್ಧವಾಯಿತು.
ಆ ಮೇಲೆ ಬಂದ ವಿವರಗಳು, ಜ್ಯೂಸನ ಮಗಳು
ಅಪ್ರೋಡಿಟೆ, ಅವನ ಹಿರಿಯ ಮಗ ಏರಿಯೋಸ್ —
ಅವಳು ಒಲಿದೊಬ್ಬ ಹೆಣ್ಣಿನ ಮಗಳು, ಕೈಹಿಡಿದ
ಹೆಣ್ಣ ಮಗನೀತ,—ಇವರೊಲವ ಹೋಮರ್ ತನ್ನ
ಒಡಿಸ್ಸಿ ಕಾವ್ಯದಲಿ ವರ್ಣಿಸಿದ ಕತೆಯೆ ಇದು
ಎಂಬುದನು ತೋರಿದುವು. ಬಾಳುವೆಯ ಬಲ್ಲವಗೆ,
ಗ್ರೀಕ ಬಾಳಿದ ಬಾಳು ಲೋಕ ಬಾಳುವ ಬಾಳು;
ದೈವ ಬಾಳಿತು ಎಂದು ಮನುಜ ಹಾಡುವ ಬಾಳು
ಮನುಜಕುಲ ತಾನು ಬಾಳುವ ಬಾಳು. ಒಲವುಗಳು,
ಕೋಪಗಳು, ತಾಪಗಳು, ಪಿಸುಮಾತು, ಮರೆಮಾಚು,
ಕಾಲದೇಶಾತೀತ ನಿತ್ಯಶಾಶ್ವತ ತತ್ತ್ವ.
ಬೇರೆ ಯಾವುದೊ ನಿತ್ಯತತ್ತ್ವ ಶಾಶ್ವತ ತತ್ತ್ವ
ಇಹುದೊ ಇಲ್ಲವೊ, ನಮ್ಮ ತೆರದ ಸಾಮಾನ್ಯಜನ
ಕಂಡೆವೆಂಬಂತಿಲ್ಲ ಆದರೀ ಚೇತನದ
ಉಕ್ಕೇರು, ಇಳಿತಾಯ, ಚಲನ, ಕಾಮ, ಪ್ರೇಮ,
ಎಂಥ ಸಾಮಾನ್ಯ ಜೀವಕು ನಿತ್ಯ ಶಾಶ್ವತ.
ಗ್ರೀಕ್ ಜನರ ಸಾಹಿತ್ಯದಲಿ ಬಾಳ ಈ ಮುಖ
ಸ್ಫುಟವಾಗಿ ಚಿತ್ರವಾಗಿಹುದು. ನಮ್ಮ ಪುರಾಣ
ಈ ಮುಖವ ಚಿತ್ರಿಸಿದೆ; ಗ್ರೀಕ್ ಜನರ ರೀತಿಯಲಿ

ಮನುಜನಾಕಾರದಲಿ ದೇವರನು ರೂಪಿಸಿದೆ ;
ಆದರೂ ಯಾವುದೋ ಧ್ಯೇಯವಾದವ ಹಿಡಿದು
ಬಾಳ ತಿದ್ದುವ ಯತ್ನದಲಿ ಚಿತ್ರವನು ಇನಿಸು
ಅಸ್ಪಷ್ಟ ಮಾಡಿ ನಿಲಿಸಿದೆ. ಇಂತು ನನ್ನರಿವು:
ಎಲ್ಲರೂ ಇದ ಒಪ್ಪಬೇಕು ಎನ್ನುತಲಿಲ್ಲ.
ಗ್ರೀಕ್‌ದೇವತೆಗಳ ಗ್ರೀಕ್ ಜನರ ಕತೆಯಾದರೂ
ನಮ್ಮ ದೇಶದ ಯಾವುದೋ ಒಂದು ಪಂಗಡದ
ಕತೆಯೆಂದು ಹೇಳಿರಲು ಕೌಶಿಕರ ಈ ಕಥೆ
ನಮ್ಮ ಸೀಮೆಯದೆ ಇರಬಹುದು ಎಂಬಂತೆ ಇದೆ.
ಇದು ಕೂಡ ನನ್ನರಿವೆ. ನಿಮಗೆ ಏನೆನಿಸಿತೋ
ನಾ ಕಾಣೆ ನಾವು ಯಾರನು ಅಸಂಸ್ಕೃತರೆಂದು
ತಿಳಿಯುವೆವೊ ಅಂಥ ಜನದಲಿ ಇರುವ ಪದ್ಧತಿ
ಕೆಲವ ಒಪ್ಪಿದರೆ ಇದೆ ಕತೆ ಇಲ್ಲಿ ನಡೆಯುವುದೆ.
ಇಂಥ ಜನರನು ಅಸಂಸ್ಕೃತರೆಂಬ ನಮ್ಮಂಥ
ಜನ, ತಮ್ಮ ಸಂಸ್ಕೃತ ಸಮಾಜದಲಿ ಇಂತಪ್ಪ
ಸಂಗತಿಗಳಿಲ್ಲವೇ, ಎಂದು ಯೋಚಿಸಬೇಕು.
ಇಹವು. ಇಹ ಸಂಗತಿಗೆ ತಾವೇನು ಮಾಡುವರು,
ಅದನು ಯೋಚಿಸಬೇಕು. ಏನನೂ ಮಾಡದೆಯೆ,
ಕಣ್ಣುಗಳ ಮುಚ್ಚಿ, ಎಲ್ಲಾ ಒಳಿತು ಎನ್ನುತಿರೆ
ಯಾರ ಸುಖ ಸಾಧಿಸಿತು ಎಂದು ಚಿಂತಿಸಬೇಕು.
ಯಾವುದೆ ಸಮಾಜ ಸಂಸ್ಕೃತವಾಗುವುದು ತನ್ನ
ತಿಪ್ಪೆ ಸಾರಿಸಿ ಅಲ್ಲ. ಸೊಗಸಬೇಕೇ ಬಾಳು ?
ಕಸವನೆಸೆ ; ರಸವ ಬೆಳೆ ; ನಿಜವ ತಿಳಿ ; ಅದ ಸಾರು ;
ನಿಜಕಾಗಿ ಉಳಿದೆಲ್ಲವನು ಮಾರು ; ನಿನ್ನನೇ
ತೆರು. ಬಾಳು ಸೊಗಸುವುದು. ಒಲ್ಲೆಯಾ ? ಸರಿ ಹೋಗು.
ಕಣ್ಮುಚ್ಚು ; ಕಿವಿ ಚುಚ್ಚು ; ಇಲ್ಲದುದ ಇದೆಯೆನ್ನು,
ಇರುವುದನು ಇಲ್ಲೆನ್ನು ; ಇದುವೆ ಸಂಸ್ಕೃತಿಯೆನ್ನು.

ಇಂಥ ಬಾಳುವೆಯೆಲ್ಲ ಬರಿಯ ಕೃತ್ರಿಮ. ಬಾಳ
ನಿಜವಾಗಿ ಹಸನು ಮಾಡುವುದೆ ಮನುಜನ ಕೆಲಸ.
ಆದಕೆ ಚೇತನದ ಸ್ವಭಾವ ಪ್ರವೃತ್ತಿಗಳು
ಎಂಥ ಎಂಥವು ಎಂದು ತಿಳಿಯುವುದು ತಳಪಾಯ.

ಇಂಥ ಕತೆ ನಯಕೆ ತಳಪಾಯ. ಕೌಶಿಕರಿದಕೆ
ನಮ್ಮ ವೇಷವ ಕೊಡಲು ತುಂಬ ಶ್ರಮಪಟ್ಟಿಹರು
ಕ್ರೋನಜ್ಜ ಕ್ರೋನೊಸ್ ; ಪೊಸೇಯಿರ್ಡ ಪಸದಣ್ಣ ;
ಹೇಪಚ್ಚ ಹೆಫಯಿಸ್ಟಸ್ ; ಅಪ್ಪೋಲೊ ಅಪ್ಪೋಡು ;
ಹೀಲಿಯಸ್ ಥ್ರೇಸ್ ಲೆಮ್ನಸ್ ಅಂತೆ ಹರ್ಮೀಸ್‌ಪ್ಯಾಫೊಸ್ ;
ಈ ಹೆಸರುಗಳ ನಮ್ಮ ಹೆಸರಂತೆ ತಿದ್ದುವುದೆ
ಕಷ್ಟವಾಗಿರಬೇಕು : ಆದರದ ಮಾಡಿಹರು.
ಕತೆಯನೂ ಚೆನ್ನವೇ ಹೇಳಿದರು. ನೀವಿದನು
ಒಪ್ಪಿದಿರಿ ಎಂದು ನಾ ತಿಳಿದಿಹೆನು." ಇಂತೆಂದು
ಟೀಕೆ ಮುಗಿದಿರೆ ರಾಮು, " ನಾಳೆ ಕತೆ ಹೇಳುವರು
ಪುಟ್ಟಣ್ಣ. ಭಾರತದ ರುರುಮುನಿ ಪ್ರಮದ್ವರೆಯ
ಆಖ್ಯಾನವನು ಹೇಳುವರು," ಎಂದು ಸಾರಿದನು.
ಅವರ ಕಥನದ " ಪ್ರಮದ್ವರೆ " ಇಕೋ ಮುಂದೆ ಇದೆ.

# ಪ್ರಮದ್ವರೆ

ಬ್ರಹ್ಮಮಾನಸಪುತ್ರ ಭೃಗುಮುನಿಯ ನಪ್ತಾರ
ರುರು, ಬ್ರಹ್ಮಚರ್ಯೆಯಲಿ ಬಹುಕಾಲ ತಪಮಾಡಿ,
ಒಮ್ಮೆ ಊರ್ಜಸ್ವತಿಯ ತೀರದಲಿ ಸುಳಿವಂದು
ಸ್ಥೂಲಕೇಶ ಮುನೀಂದ್ರನಾಶ್ರಮದ ಮಧ್ಯದಲಿ
ಚೆಲುವೆಯರ ತಲೆಮಣಿ ಪ್ರಮದ್ವರೆಯ ನೋಡಿದನು.
ಸ್ಥೂಲಕೇಶನ ಸಾಕುಮಗಳಿವಳು. ಹಿಂದೊಮ್ಮೆ
ಗಂಧರ್ವಮುಖ್ಯ ವಿಶ್ವಾವಸು ಮಹಾಶಯನು
ಮೇನಕೆಯ ಕಂಡು ಮನಬಂದು ಸಹವಾಸವನು
ಬಯಸೆ ಅವಳೂ ಅವನ ಬಯಸಿ ಜೊತೆಯಲಿ ನಡೆದು
ಈ ಚೆಲುವ ಖನಿಯ ಹಡೆದಳು. ಅಪ್ಸರೆಯರಿಂತು
ಹಡೆದ ಮಕ್ಕಳಿಗೆ ಭೂಲೋಕವೇ ಸಾಕುನೆಲ.
ಊರ್ಜಸ್ವತೀ ನದಿಯ ತೀರದಲಿ ಜನಿಸಿ ಮಗು,
ನದಿಯ ತೀರದ ಒಂದು ಹೂಗಿಡದ ಬುಡದಲ್ಲಿ,
ಗಾಳಿ ಉದಿರಿಸಿದೊಂದು ಹೂವಂತೆ ಮಲಗಿಹುದು.
ಮುನಿ ನದಿಗೆ ಮಿಾಯಲೆಂದೈತಂದು ಇದ ಕಂಡು,
ಭೂತದಯೆಯಿಂದ ಹಸುಳೆಯ ಆಶ್ರಮಕೆ ತಂದು
ಮಗಳೆಂದೆ ಸಾಕಿದನು. ಸೌಂದರ್ಯ ಇಚ್ಛೆಗಳ
ಈ ಕಂದ, ಸೌಂದರ್ಯ ಇಚ್ಛೆಗಳ ಮಂದಾರ
ನಂದನವನುಳಿದು ನೆಲದಲಿ ಬೆಳೆಯಬಂದಂತೆ,
ಸ್ಥೂಲಕೇಶನೆ ತಂದೆಯೆಂದು ಅವನಾಶ್ರಮದಿ
ಹದಿನಾರು ವರ್ಷ ಬೆಳೆದಳು. ರೂಪು ; ಲಾವಣ್ಯ ;
ಅದಕೆ ತಕ್ಕಂತೆ ಮನ. ರುರು ಇವಳ ಕಂಡಾಗ,
ತರುಣಿ ಕೆಳದಿಯರೊಡನೆ ಆಶ್ರಮದ ಮುಂಗಡೆಯ
ವಕುಳವೃಕ್ಷದ ನೆರಳಿನಲಿ ಕ್ರೀಡೆಯೊಳಗಿಹಳು.
ನೋಡಿದುದೆ ಇವಳ ಉಜ್ವಲ ಸುಂದರಾಕೃತಿಗೆ

ಮರುಳುಹೋದನು ತರುಣ ರುರು. ಹತ್ತಿರಕೆ ಬಂದು,
ಇವಳು ಯಾರೆಂಬುದನು ತಿಳಿದು, ತಾನಿಂಥವನು
ಎಂದು ಅವಳಿಗೆ ತಿಳಿಸಿ, ತನ್ನ ಸತಿಯಾಗೆಂದು
ಅವಳ ಬೇಡಿದನು. ರುರು ಚೆಲುವ ; ಬಹು ತೇಜಸ್ವಿ.
ತರುಣಿ ಅವನನು ಮೆಚ್ಚಿದಳು ; ತನ್ನ ತಂದೆಯನು
ಕೇಳಿ ತನ್ನನು ಪಡೆಯಬಹುದೆಂದು ಆತನಿಗೆ
ವಿನಯದಲಿ ಅರುಹಿದಳು. ರುರು ತನ್ನ ಆಶ್ರಮಕೆ
ಹಿಂದಿರುಗಿ ಬಂದು ತಂದೆಗೆ ತನ್ನ ಆಸೆಯನು
ಬಿನ್ನವಿಸಿದನು. ಹಿರಿಯನದೆ ದಿವಸ ಹೊರವಟ್ಟು
ಸ್ಥೂಲಕೇಶನ ಕಂಡು ನಂಟ ನಿಶ್ಚಯಮಾಡಿ
ಉತ್ತರಾ ನಕ್ಷತ್ರದಲಿ ಮದುವೆ ನಡೆವಂತೆ
ಏರ್ಪಡಿಸಿಕೊಂಡು ಬಂದನು.

ತರುಣ ತರುಣಿಯರ
ಸಂತೋಷವನು ಹೇಳಬೇಕೆ? ಮದುವೆಗೆ ಮೊದಲೆ
ಒಂದೆರಡು ಸಲ, ಏನೊ ವಿವರವನು ತಿಳಿವುದಕೆ
ಎಂಬಂತೆ, ರುರು ಮಾವನಾಶ್ರಮಕೆ ನಡೆತಂದು
ದೂರ ಹತ್ತಿರದಿಂದ ಪ್ರಿಯೆಯಾಕೃತಿಯ ನೋಡಿ,
ನಗೆ ನುಡಿಸಿ, ಜೊತೆಗೆ ತಾನೂ ನಕ್ಕು, ಆ ಮೊಗದ
ಸೊಬಗ, ಆ ನಡೆಯ ಹಿರಿ ಬೆಡಗ, ಮಾತಿನ ಸವಿಯ
ಕಣ್ಣು ಕಿವಿಯಿಂದೀಂಟಿದನು ; ಸಾರಿಬಹ ಸುಖದ
ಸವಿಯ ಪರಿಯೇನೆಂದು ಭಾವದಲಿ ಅನುಭವಿಸಿ,
ಒಲಿದವಳ ಭಾವ ಅನುಭವಿಸುವೊಂದಂದದಲಿ
ಮರ್ಯಾದೆಯನು ಬಿಡದ ಒಲುಮೆನಡೆಯಲಿ ನಡೆದು,
ಮೆಯ್ಗೆ ಮುನ್ನವೆ ಅವಳ ಹೃದಯವನು ಮುಟ್ಟಿದನು.
ಗಂಧರ್ವ ಅಪ್ಸರೆಯರಿಂದ ಜನ್ಮವ ತಳೆದ
ಮಾನವಿ ಅದಾವುದೊ ವಿಚಿತ್ರ ಸಂಮೇಲದಲಿ
ಗಾಂಧರ್ವ ಆಪ್ಸರೇಯತೆ ಮಾನವೀಯತೆಯ

ಎಲ್ಲ ಒಳ್ಳಿದ ಬೆರಸಿ, ಯಾವುದೋ ಮೋಹಕತೆ,
ಯಾವುದೋ ಇಂತೆನಲು ಬಾರದ ವಿಲಾಸವನು,
ಎಲ್ಲ ನಡೆ ಎಲ್ಲ ನುಡಿಯಲಿ ಮೆರೆಯುವಳು. ನಗುವ
ನುಡಿವ, ನಿಲ್ಲುವ, ಎಲ್ಲದರಲು ಅವಳದೆ ಒಂದು
ಪರಿ. ಇಂತು ರುರು ತನ್ನ ಪ್ರಿಯೆಯ ಮನವನು ಒಲಿಸಿ
ತುಂಬು ಸಂತಸದ ಬಾಳುವೆಯ ಬಾಳುವೆನೆಂದು
ಇದಿರು ನೋಡುತಲಿಹನು.
ಉತ್ತರಾನಕ್ಷತ್ರ
ಹತ್ತಿರಾಗಿಹುದು. ಗಂಡಿನ ಕಡೆಯ ಈ ಮಂದಿ
ಸ್ಥೂಲಕೇಶನ ಆಶ್ರಮಕೆ ಎಲ್ಲ ಸಾರಿಹರು.
ಮರುದಿವಸ ಮದುವೆಯೆಂದಿರೆ ಇಂದು ಮದುಮಗಳು
ಒಂದು ಹೂವಿನ ಪೊದೆಯ ಬಳಿ ನಡೆವ ಹೊತ್ತಿನಲಿ
ಸರ್ಪ ಒಂದವಳ ಕಚ್ಚಿತು. ಏನು ಎಂತೆಂಬ
ಮುನ್ನವೇ ವಿಷ ಉಗ್ರವಾಗಿ ಸನ್ನಿಗೆ ಸಂದು
ಬಾಲೆ ಜೀವವನು ಬಿಟ್ಟಳು.
ನೆರೆದ ನಂಟಜನ
ಇಂತಾಗಬಹುದೆ, ಇಂತಾಯಿತೇ, ಇಂತುಂಟೆ,
ಎಂದು ವಿಸ್ಮಯ ದುಃಖದೊಳಗಾಳಿ, ಇನ್ನೇನು
ವಿಧಿ ಎಂತು ನಡಸಿದರೆ ಅಂತು ನಡೆವುದು ಹೊರತು
ಮನುಜರೇನನು ಮಾಡಬಹುದೆಂದು, ಬಾಲಕಿಯ
ಸಾಕುತಂದೆಯ ಕಂಡು ಸಾಂತ್ವನದ ನುಡಿ ನುಡಿದು
ತಮ್ಮೆಡೆಗೆ ಹೊರಡಲೆಣಿಸಿದರು. ಸಾಕಿದ ತಂದೆ
ಆತ, ಒಂದೆಡೆ ಕುಳಿತು, ದೈವದಿಚ್ಛೆ ಇದೇನು
ಇಂತು ಇದ್ದಿತು ಎಂದು ಯೋಚಿಸುತ, ಎಲ್ಲರಿಗು
ಒಂದೆರಡು ಮರುಮಾತನಾಡಿ ಅರಿವಿಗೆ ತಕ್ಕ
ತರದಿಂದ ನಡೆದುಕೊಂಡನು. ಒಬ್ಬ ರುರು ಮಾತ್ರ,
ಪ್ರಿಯೆ ಅಳಿದಳೆಂದು ನಂಬದೆ, ಅಳಿದಳೆಂಬ ಪರಿ

ಸ್ಥಿರವಾಗಲದಕೆ ಒಪ್ಪದೆ, ಕಳೇಬರದ ಬಳಿ
ಮುಡಿಗೆದರಿ ಕೂಗಾಡಿದನು. ಲಗ್ನಕೈತಂದ
ಮುನಿಕುಲದ ಹಿರಿಯಾತಗಳು, ಕುಶಿಕ, ಗೌತಮ,
ಕೌಣಕುತ್ಸ, ಶ್ವೇತಕೇತು, ಸ್ವಸ್ತ್ಯಾತ್ರೇಯ,
ಕಠ, ಆರ್ಷ್ಟಿಷೇಣ, ಉದ್ದಾಲಕ, ಭರದ್ವಾಜ,
ಶಂಖಮೇಲರು ಅವನ ಸಂತಯಿಸ ನೋಡಿದರು.
ಸುಡುತಿರುವ ಗುಡಿಸಲಿಗೆ ಚೊಂಬು ನೀರೆಸೆದಂತೆ
ಇವರ ಸಾಂತ್ವನದ ನುಡಿ ನೊಂದವನ ಹೃದಯವನು
ಮುಟ್ಟದಾಯಿತು. ತರುಣ ದೂರವನು ಸಾರಿದನು.
ಪ್ರಮತಿ, ರುರುವಿನ ತಂದೆ, ಅವನಿದ್ದ ಬಳಿಗೈದಿ
"ಮಗು, ಇಂತು ಎಲ್ಲ ಮಂದಿಯನುಳಿದು ಒಬ್ಬನೇ
ಏಕೆ ದುಃಖಿಸುವೆ? ಬಾ; ಹತ್ತು ಮಂದಿಯ ಮಧ್ಯೆ
ಖೇದವನು ಸಹಿಸಬರುವುದು," ಎಂದು ಕರೆದನು.
ರುರು, "ಪ್ರಮದ್ವರೆಯು ಹಸೆನಿಲಲೆಂದು ಬಂದೆನಗೆ
ದುಃಖ ವಧುವಾಯ್ತು: ಮದುಮಗನು ವಧುವಿನ ಜೊತೆಗೆ
ಏಕಾಂತವನು ಬಯಸಿ ಬಂದಿಹೆನು. ಹಿರಿಯರು
ನನಗೆ ಒಳ್ಳಿದ ಬಯಸಿ ದೂರದಲಿ ನಿಲ್ಲಿರಿ."
ಎಂದು ಕಹಿನುಡಿ ನುಡಿದು ಮತ್ತಷ್ಟು ದೂರವನು
ಸಾರಿದನು. ತಂದೆ, ಇನ್ನಷ್ಟು ಅಳಲದೆ ಇವನ
ಮನದ ಉದ್ವೇಗ ತಗ್ಗದು ಎಂದು, ತಾಳ್ಮೆಯಲಿ
ಮಗನನಂತೆಯೆ ಬಿಟ್ಟು ಹೊರಟು ಬಂದನು. ರುರು
ಮತ್ತಷ್ಟು ಅಳಲಿ ಕೂಗಾಡಿ, ದೇವರ ಕುರಿತು,
"ಹುಟ್ಟಿದುದು ಮೊದಲು ಇದುವರೆಗೆ ತಪ್ಪದೆ ನಾನು
ಗುರುಗಳನು ಶುಶ್ರೂಷಿಸಿಹುದು ನಿಜವೆನೆ, ಅಂತೆ
ವ್ರತ ಯಜ್ಞದಾನಗಳ ದೃಢ ಭಕ್ತಿಯಿಂದೆಸಗಿ
ನಿಜದಲಿ ತಪೋಬಲವ ಗಳಿಸಿಹೆನೆ, ಅಳಿದಿರುವ
ನನ್ನ ಪ್ರಿಯೆ ಮತ್ತೆ ಜೀವಿಸಲಿ, ಹಾವಗಿದಿಲ್ಲ

ಎಂಬಂತೆ, ನಿದ್ದೆಯಿಂದೆಂಬಂತೆ, ಮುಚ್ಚಿರುವ
ಕಣ್ಣ ತೆರೆಯಲಿ, ಅಂದು ಎಂತು ಒಪ್ಪಿದಳಂತು
ನನ್ನೊಡನೆ ಹದುಳದಲಿ ಸಂಸಾರವಾಡಲಿ,"
ಎಂದು ಶಪಥವ ಮಾಡಿದನು.
ರುರು ಅದಿನ್ನೆನಿತು
ತರುಣನಾದರು ಮಹರ್ಷಿಯೆ. ಅವನ ತಪದ ಬಲ
ಭೃಗು ಮಹರ್ಷಿಯ ಬಲಕೆ ಸಮನೆ. ಅವನೀರೀತಿ
ತನ್ನೆಲ್ಲ ತಪವ ಪಣಮಾಡಿ ಹಟದಲಿ ನುಡಿಯೆ
ದೇವತೆಗಳದನು ಕೇಳದೆ ಬೇರೆ ಗತಿ ಇಲ್ಲ.
ಸತ್ರಾಮ, ಒಬ್ಬ ದೂತನ ಕರೆದು, ರುರುವಿನೆಡೆ
ಸಾರಿ ಆತನನು ಸಂತೈಸೆಂದು ಬೆಸಸಿದನು.
ದೂತನೈತಂದು ರುರುವಿನ ಪಾರ್ಶ್ವದಲಿ ಕುಳಿತು
ಇಂತು ನುಡಿದನು.
" ರುರುಮಹರ್ಷಿ, ಸುರನಾಯಕರು
ಪ್ರಿಯೆಯಳಿದು ನಿನಗೆ ಒದಗಿರುವ ದುಸ್ಸಹ ದುಃಖ
ಎಂಥದೆಂಬುದನು ಬಲ್ಲರು. ಇದನು ತಪ್ಪಿಸುವ
ದಾರಿ ಯಾವುದೆ ಒಂದು ಇದ್ದಿತೇ, ನೀಗೆಯ್ದ
ಈ ಶಪಥಕಾಗಿ ಸಂದೇಹವಿಲ್ಲದೆ ಇದನು
ತಪ್ಪಿಸುತಲಿದ್ದುದೇ ನಿಜ. ದಾರಿ ಯಾವುದೂ
ಇಲ್ಲ. ಗೆಯ್ಯುವುದೇನ ? ಒಂದೊಂದು ಜೀವಕೂ
ಆಯುಷ್ಯ ಅಳತೆಯಾಗಿದೆ. ಪ್ರಮದ್ವರೆಯ ದಿನ
ಆಕ್ಷಣಕೆ ಮುಗಿದಿರಲು ಅವಳು ಅಳಿದಳು. ಇದಕೆ
ಯಾರೇನ ಮಾಡುವುದು ? ಇವಳ ಬದುಕಿಸಬೇಕು
ಎಂಬ ಎಣಿಕೆಯನು ಬಿಡು ಎಂದು ಅವದಿರು ನಿನ್ನ
ಕೇಳಿಕೊಂಬರು."
ಇಂತು ನುಡಿದ ದೂತನ ಕುರಿತು
ರುರು, " ನಾನು ನಿನ್ನೊಡನೆ ಮಾತನಾಡುವನಲ್ಲ.

ಇಂದ್ರನೈತರಲಿ, ಬೇಡುವುದ ಕೊಡುವನು ಇಲ್ಲ
ಎಂಬುದನು ತಾನೆ ಬೆಸಸಲಿ" ಎಂದು ಒದರಿದನು.
ದೂತನಂತರ್ಧಾನವಾಗಿ ಸುರಪತಿ ತಾನೆ
ಬಂದು ಇವನೆದುರು ನಿಂದನು. "ಋಷಿವರೇಣ್ಯ, ರುರು,
ನಿನ್ನನ್ನರಿಂತು ಗೆಯ್ವುದೆ? ನೀವು ಬಾಳುವುದು
ಬರಿಯ ಸುಖಕಾಗಿ ಅಲ್ಲವಲೆ? ಬದುಕಲಿ ದುಃಖ
ಬಹುದು ಅಂತಃಕರಣ ಮೆದುವಾಗಲೆಂದು. ಇದು
ಇಂತೆಂದು ನೀನು ಕಾಣೆಯ? ನೋವು ಬಂದಿಹುದು.
ನೋಯುವುದು; ನೋವ ಸಹಿಸುವುದು; ಆಂತರ್ಯವನು
ಗಟ್ಟಿಮಾಡುವುದು; ಇದು ಋಷಿಕುಲಕೆ ಕರ್ತವ್ಯ.
ಏಳು. ಈ ಹಲುಬುವುದ ಬಿಡು. ಪ್ರಮದ್ವರೆ ಏನು
ಬಹುರೂಪವತಿಯೆಂದು ತಿಳಿದೆಯಾ? ಇದಕಿಂತ
ನೂರುಮಡಿ ಚೆಲುವರೆನಿಸಿದ ಅಪ್ಸರೆಯರಿಂದ
ರೂಪಲಾಲಸೆಯ ತಣಿಸುವೆಯಂತೆ. ಅಪ್ಸರೆಯ
ಮಗು ನೀನು: ಇದನು ಕಾಣೆಯ? ಘೃತಾಚಿಯ ಜೊತೆಗೆ
ಕೆಲವು ಕಾಲವ ಕಳೆದು ಪ್ರಮತಿ ನಿನ್ನನು ಪಡೆದು
ಮತ್ತೆ ತಪವನು ಹಿಡಿದನಲ್ಲವೆ? ನೀನಂತೆ
ನಡೆ, ಏಳು, ನನ್ನ ಮಾತನು ಕೇಳು," ಎಂದನು.
ರುರು, ಸುರೇಂದ್ರನ ಕಂಡವನೆ, ನಿಂತು ಕೈಮುಗಿದು
ಅವನು ನುಡಿದುದನೆಲ್ಲ ಕೇಳಿ, ನಮ್ರತೆಯಿಂದ
ಇಂತು ಬಿನ್ನಯಿಸಿದನು. "ನನ್ನ ತಾಯ್ ಅಪ್ಸರೆ
ಎಂಬುದನು ಕೇಳಿಬಲ್ಲೆನು. ನನ್ನ ಹೆತ್ತುದೇ
ತನ್ನ ಲೋಕವನು ಸಾರಿದಳು. ತಾಯೊಲವೇನು
ಎಂಬುದನು ನಾನು ಕಾಣೆನು. ನನ್ನ ಮಕ್ಕಳಿಗೆ
ಅವರ ಸಾಕುವ ಮಾತೆ ಇರಲೆಂದು ಎನ್ನಾಸೆ.
ಆದರಿಂದಲೇ ಪ್ರಮದ್ವರೆಯ ಬಯಸಿದೆನು." "ರುರು,
ಮಾನವಿಯೆ ಬೇಕೆನಲು ಬೇರೆ ಹೆಣ್ಣನು ನೋಡು;

ಇವಳೆ ಅವಳೆಂಬಂತೆ ಕಾಂಬ ಇನ್ನೊಬ್ಬಳನು
ತರಬಹುದು." "ತರಬಹುದೊ ಏನೊ, ನನಗದು ತಗದು."
"ಒಳಿತು; ಅಪ್ಸರೆಯೊಬ್ಬಳಿವಳದೇ ರೂಪಿನಲಿ
ನಿನ್ನೊಡನೆ ಬಾಳಬರುವಳು. ಬಾಳು; ಸುಖದೊಳಿರು;
ಮಕ್ಕಳನು ಹೆತ್ತು ನಿನ್ನೊಡನೆಯೇ ನಿಲ್ಲುವಳು"
"ದೇವೇಂದ್ರ, ಇದು ಕೂಡ ನನಗೆ ಒಲ್ಲದು ಏಕೊ.
ನಾನೊಬ್ಬನೇ ಪ್ರಮದ್ವರೆಯನೊಲಿಯೆನು. ಅವಳು,
ನಾನು ಅವಳನು ಎಂತು, ಅಂತೆ ನನ್ನನು ಒಲಿದು
ಹಸೆನಿಲಲು ಒಪ್ಪಿದಳು. ನನ್ನಾಸೆ ಸಂದಂತೆ
ಅವಳಾಸೆಯೂ ಸಲ್ಲಬೇಕು. ಅದು ಎಂತಹುದು
ಅದನನುಗ್ರಹಿಸು." "ರುರು, ನಿನ್ನ ಒಲಿದುದರಿಂದ
ತನಗೆ ಏನೊಂದು ಸಂಸ್ಕಾರವಾಗುವುದಿತ್ತು
ಅದ ಮುಗಿಸಿ ಆಕೆ ಕಣ್ಮುಚ್ಚಿದಳು, ಕಂಡೆಯಾ?
ನಿನ್ನೊಡನೆ ಬಾಳಿಯೇ ಪಡೆಯುಬಹ ಏನೆ ಫಲ
ಇಲ್ಲ ಅವಳಿಗೆ." "ದಿವಿಜ ಕುಲನಾಥ, ನಾನೇಕೆ
ಇವಳನೇ ಬಯಸುವೆನೊ ಅದನು ನಾನೇ ಅರಿಯೆ.
ಇವಳ ಒಡಲಿದ್ದು ಬೇರೆಯ ಉಸಿರ ನಾನೊಲ್ಲೆ;
ಇವಳುಸಿರು ಬೇರೆ ಒಡಲಲಿ ಬರಲು ನನಗೆ ಅದು
ಇವಳು ಎನಿಸದು; ನಾನು ಇದೆ ಉಸಿರು ಇದೆ ಒಡಲ
ಇವಳನೇ ಬಯಸುವೆನು." "ಇದು ಏನು ನಿನ್ನ ರುಚಿ?
ಮೂರುಲೋಕವ ಮರುಳುಮಾಡುವ ತಿಲೋತ್ತಮೆ
ರಂಭೆ ಊರ್ವಶಿಯರಲಿ ಕಾಣಬಾರದ ಯಾವ
ಹಾವಭಾವ ವಿಲಾಸವನು ಕಂಡು ಇವಳನೇ
ಬೇಕೆಂಬೆ? ಇವಳಂತೆಯೇ ಕಾಂಬ ನಾಲ್ವರಲಿ
ಇವಳ ಗುರುತಿಸಬಲ್ಲೆಯಾ?" "ಬಲ್ಲೆನೆಂದೆನಗೆ
ತೋರುತಿದೆ." "ಒಳಿತು. ಇವಳೇ ಬೇಕು ಎಂಬವನು
ನಿನ್ನ ಆಯುಷ್ಯದಲಿ ಅರ್ಧವನು ಇವಳಿಗೆ

ಕೊಡಲು ಒಪ್ಪಿದರೆ ಅವಳನು ನಿನ್ನ ಎದುರಿನಲಿ
ಅವಳಂತೆಯೇ ಕಾಂಬ ದೇವಕನ್ಯೆಯರೊಡನೆ
ನಿಲಿಸುವೆನು. ನೀನು ಅವಳನು ಗುರುತು ಹಿಡಿದೆಯೆನೆ
ಅವಳು ನಿನ್ನಾಯುಷ್ಯದರೆಯ ಕೊಂಡೈತಂದು
ನಿನ್ನೊಡನೆ ಬಾಳುವಳು. ಆಯುಷ್ಯದರ್ಧವನು
ಕೊಡುವೆಯಾ?" "ಸಂತೋಷದಿಂದ ಕೊಡುವೆನು" ಎಂದು
ರುರು ಹಿಡಿಯಲಾರದಾನಂದದಲಿ ಇಂದ್ರನಿಗೆ
ನಮಿಸಿ ಒಪ್ಪಿದನು.

ನಿಮಿಷಾಂತರಕೆ ಇವರೆದುರು
ಐದು ಮೂರ್ತಿಗಳು ಕಂಡವು. ಐದು ಮೂರ್ತಿಯೂ
ರುರುವಿನೊಲುಮೆಯ ಪ್ರಮದ್ವರೆಯದೇ. ಆ ಐದು
ಹೆಂಗಳನು ಕುರಿತು ಸುರಪತಿ, "ನಿಮ್ಮ ಐವರಲಿ
ಯಾರು ತನ್ನವಳೆಂದು ರುರು ಮಹರ್ಷಿಗಳೀಗ
ಗುರುತಿಸಲು ನಿಂದಿಹರು. ಗುರುತಿಸಲು ಆಕೆಯನು
ನಾನು ಇವರಿಗೆ ಮರಳಿಕೊಡುವವನು. ಗುರುತಿಸಲು,
ನಿಮ್ಮೈವರಲಿ ಯಾರು ನಿಜದಲಿ ಪ್ರಮದ್ವರೆ,
ಆಕೆ ನುಡಿಯಿಂದ ನಡೆಯಿಂದ ಸನ್ನೆಗಳಿಂದ
ನೆರವ ನೀಡುವುದು ಸಲ್ಲದು. ಅಂತು ನೀಡಿದೊಡೆ
ಗುರುತಿಸಿದ ಫಲವಿಲ್ಲ. ಇದ ಪ್ರಮದ್ವರೆ ತಿಳಿದು
ಎಚ್ಚರಿಕೆಯಿಂದ ವರ್ತಿಸಲಿ," ಎಂದುದೆ ಋಷಿಗೆ
ಪ್ರಿಯೆಯ ಗುರುತಿಸು ಎಂದು ಬೆಸಸಿದನು. ರುರುವಿಗೆ
ಐದು ಮೂರ್ತಿಯು ಒಂದೆ ಮೂರ್ತಿಯ ಪ್ರತೀಕಗಳು
ಎಂದು ಕಂಡಿತು. ತನ್ನ ಒಬ್ಬಳೆ ಪ್ರಮದ್ವರೆಯ
ಐದು ಪ್ರತಿಕೃತಿ ಬಂದು ಎದುರು ನಿಂದಿವೆ. ನಾಲ್ಕು
ಮೂರ್ತಿ ಸುರಕನ್ಯೆಯರು ಸೋಗಿನಲಿ ಧರಿಸಿದವು;
ಒಂದು ದಿಟ. ಆ ಒಂದು ಯಾರು? ಸುರಪತಿ ತನ್ನ
ಎಚ್ಚರದ ನುಡಿಯ ನುಡಿದಾಗ ಆ ಐವರಲಿ

ನಾಲ್ಕನೆಯ ಮೂರ್ತಿಯಲಿ ಕಣ್ಣು ಇನಿಸೇ ಅರಳಿ,
ಅವನಿಟ್ಟ ಆ ಸಮಯ ಕ್ರೂರ ನಿರ್ಘೃಣ ಎಂಬ
ಭಾವ ನೆರಳಂತೆ ಅದರಲಿ ಸುಳಿದು ಮರೆಯಿತು.
ಇವಳೇ ಪ್ರಮದ್ವರೆಯೊ ಎಂದು ಆ ಮೂರ್ತಿಯನು
ರುರು ದಿಟ್ಟಿಸಿದನು. ಅಹುದೆಂದು ತೋರಿತು. ಅವಳ
ಬಲಕಿದ್ದ ಮೂರ್ತಿಯನು ಅಂತೆ ದಿಟ್ಟಿಸಿದನೇ
ಅದೆ ಪ್ರಮದ್ವರೆಯೆನ್ನಿಸಿತು. ಶಕ್ರನನು ಕುರಿತು
ಋಷಿ, " ಐದು ಮೊಗವಾಡದಲಿ ನಿನ್ನದಾವುದು
ಕಂಡುಹಿಡಿ ಎಂಬಂತೆ ಈ ಐದು ಮೂರ್ತಿಯೂ
ಎದುರಿನಲಿ ನಿಂದಿಹವು. ನಾ ಬಯಸಿದುದು ಬರಿಯ
ಚೆಲುವ ಮೂರ್ತಿಯನಲ್ಲ. ಅದನು ಬೆಳಗಿದ ಉಸಿರು
ಮನ ಚಿತ್ತಗಳ ಕಂಡು ಅವಕೆಲ್ಲ ಮನಸೋತು
ಆ ಪ್ರಮದ್ವರೆಯೆಂಬ ಜೀವವನು ಬಯಸಿದೆನು.
ಪ್ರಿಯೆ ಸನ್ನೆಗೈದು ನಾನವಳ ಗುರುತಿಸಲು ಅದು
ಗುರುತಲ್ಲ. ಒಪ್ಪಿದೆನು. ಆದರೂ ಆ ಜೀವ
ಯಾವುದೆಂಬುದನು ನಾನಿವರೆದುರು ನಡೆನುಡಿದು
ಇವರ ಮುಖಗಳಲಿ ತಾನಾಗಿ ಸುಳಿಯುವ ಭಾವ
ಯಾವುದೆಂಬುದರಿಂದ ಹೊರತು ಗುರುತಿಸಲಾರೆ.
ಇದಕೆ ಅನುಮತಿಬೇಕು," ಎಂದು ನುಡಿದನು. ಇಂದ್ರ,
"ಅದ ಬೇಡವೆನಲಿಲ್ಲ. ಮೂರ್ತಿ ಯಾವುದೆ ಒಂದು
ಚರ್ಯೆಯನು ಮಾಡಿ ತಾನೇ ಪ್ರಮದ್ವರೆಯೆಂದು
ತೋರಬಾರದು," ಎಂದು ಬೆಸಸಿದನು. ರುರು "ಒಳಿತು"
ಎಂದು ಸುರಪತಿಗೆ ವಂದಿಸಿ ತನ್ನ ಎದುರೊಳಿಹ
ಐವರಿಗೆ, "ಪ್ರಿಯೆ, ಪ್ರಮದ್ವರೆ, ನಿನ್ನ ಒಬ್ಬಳಿಗೆ
ಈ ಮಾತ ಹೇಳುತಿರುವೆನು. ನಾನು ಏನನೇ
ಕೂಗಿ ನುಡಿದರೆ, ಆಡಿ ಮಾಡಿದರೆ, ನೀನದನು
ಏನೆ ಚರ್ಯೆಯನು ಮಾಡದೆ ನೋಡುತಿರಬೇಕು.

ಸುರಪತಿಗಳಿಸಗಿರುವ ಸಮಯವನು ಪಾಲಿಸು,
ನಾವು ಮತ್ತೊಮ್ಮೆ ಸೇರುವೆವು, ಸೊಗ ಬಾಳುವೆವು.
ಇದ ಮರೆಯಬೇಡ," ಎಂದನು. ಐದು ಮೂರ್ತಿಯಲಿ
ಒಂದು ಮೂರ್ತಿಯ ಕಣ್ಣಿನಲಿ "ಆಗಲಿ" ಎಂಬ
ಉತ್ತರವನೀವ ಭಾವದ ನೆರಳು ಕಂಡಿತು.
ಮೊದಲಂತೆ ಅದು ನಾಲ್ಕನೆಯ ಮೂರ್ತಿ. ರುರು ಅದನು
ಗಮನಿಸಿದನಹುದು. ಅರೆ ನಿಮಿಷ ಕಳೆದಿರೆ ಅವನು
"ಅದೆಕೊ, ಶಾರಿಕೆ, ಯಾರು ಪಂಜರವ ತೆರೆದರೋ
ತೋಟದಲಿ ಹಾರುತಿದೆ" ಎಂದು ನುಡಿದನು. ಐದು
ಮೂರ್ತಿಯಲಿ ಯಾವುದೂ ತನ್ನ ತಾಣವನುಳಿದು
ಕದಲದಿದೆ. ಆದರೂ ಒಂದು, ಕದಲದೆ ಅಂತೆ
ನಿಂದಿರಲು ಯತ್ನಮಾಡಿದೆ. ಶಾರಿಕೆಯ ನೋಡೆ
ತಿರುಗಬೇಕಾದ ತಲೆಯನು ತಿರುಗದಂದದಲಿ
ತಡೆದು ನಿಲಿಸಿದೆ. ಇದನು ಕೂಡ ರುರು ತಿಳಿದನು.
ಕ್ಷಣ ಬಿಟ್ಟು ಆಶ್ರಮದ ಮಂಗ ಇವರುಣುವಂದು
ಅನ್ನವನು ಬೇಡಿ ಆಡುತಲಿದ್ದ ಆಟವನು
ಅನುಕರಿಸಿ ರುರು ಮುಸುಡಿಮಾಡಿ ಕೈಯನು ನೀಡಿ
ಅಸ್ಪಷ್ಟ ಶಬ್ದದಲಿ ಒದರಿದನು. ಮೂರ್ತಿಗಳು
ಸುಮ್ಮನೆಯೆ ಇಹವು. ಒಂದರ ಕಣ್ಣಿನಲಿ ಮಾತ್ರ
ನಗೆ ಮಿನುಗಿ ಕಾಣದಾಯಿತು. ಮರುಕ್ಷಣವೆ ಋಷಿ
ಮೂರ್ತಿಗಳ ಕಾಲೆಡೆಗೆ ಬೆರಳ ತೋರಿಸಿ "ಹಾವು"
ಎಂದು ಮೊರೆದನು. ನಾಲ್ಕು ಮೂರ್ತಿ ನಿಂತಂತೆಯೇ
ನಿಂತಿಹವು. ಒಂದು ಬೆಚ್ಚಿತು. ಬೆಚ್ಚಿ ತಡೆಹಿಡಿದು
ನೆಲನ ನೋಡಲು ಕಣ್ಣನೋಟ ಇಳಿಯದ ರೀತಿ
ಅದನು ನಿಲಿಸಿತು. ತೀರ ವಿಧಿಯಿಲ್ಲ. ಕಣ್ಣಿನಲಿ
ಮನದಿ ಮೂಡಿದ ಭೀತಿಯನು ತೋರಿ ಮರೆಸಿತು.
ಋಷಿ ತನ್ನ ಇನಿಯಳಿವಳೇ ಎಂದು ಈಗಳೇ

ಮನದಿ ನಿಶ್ಚಯ ಮಾಡಿದನು. ಆದರೂ ಮತ್ತೆ
ದೃಢಪಡಿಸಿಕೊಂಬುದೊಳ್ಳಿತು ಎಂದು, "ಸುರನಾಥ,
ನಿನ್ನ ಈ ಸಮಯ ಅತಿ ಕಠಿನವಾಯಿತು ನನಗೆ.
ಈ ಐವರಲಿ ಪ್ರಮದ್ವರೆ ಯಾರು ಎಂಬುದನು
ನಿಶ್ಶಂಕೆಯಿಂದ ತೋರಲು ನಾನು ಕಾಣೆನು.
ನಾನೆಂಥ ಹತ ಭಾಗ್ಯ! ಇವಳೆನ್ನ ಪ್ರಿಯೆಯೆಂದು
ತೋರಿದರೆ ಪ್ರಿಯೆ ಎನ್ನ ಸೇರುವಳು: ತೋರುವುದು
ಎನ್ನಿಂದ ಆಗದಿದೆ. ಹಾ ಪ್ರಿಯೆ, ಪ್ರಮದ್ವರೇ,
ನನ್ನ ಪಾಲಿಗೆ ಇಲ್ಲದಾದೆಯಾ, ಮನದನ್ನೆ!
ನಿನ್ನನುಳಿಸುವ ಶಕ್ತಿ, ನಿನ್ನನುಳಿಸುವ ಪುಣ್ಯ,
ಇಲ್ಲವಾಯಿತೆ ನನಗೆ! ಎಂತು ನಾನೊಬ್ಬನೇ
ಜೀವಿಸಲಿ, ಹಾ," ಎಂದು ಗೋಳಿಟ್ಟು ಕರೆದನು.
ಗೋಳಿಟ್ಟು ಕರೆದು ಮೂರ್ತಿಗಳನೇ ನೋಡಿದನು.
ನಾಲ್ಕು ಮೂರ್ತಿಯಲಿ ಕನಿಕರ ಕಾಣುತಿದೆ; ಒಂದು
ಮೂರ್ತಿ, ಕನಿಕರಕು ಮಿಗಿಲಾಗಿ, ತಾನಿವನೊಡನೆ
ನೋಯುತಿರುವಂತೆ ಕಂಡಿದೆ. ಮುಖದಿ ಕಳೆಯಿಲ್ಲ.
ತಡೆಯಲಾರದ ನೋವ ತಡೆಯುತಿದೆ. ಕಣ್ಣಿನಲಿ
ನೀರು ಊರಿದೆ; ಊರಿ ಹನಿಗೂಡಿ ಮಿನುಗಿದೆ;
ಮಿನುಗಿ ಇಂಗಿದೆ. ನೋವ ತಡೆವ ಈ ಯತ್ನದಲಿ
ಸ್ವೇದಕಣ ಮುಖದಲಿ, ಕಪೋಲದಲಿ, ಕಂಠದಲಿ,
ರೂಪುಗೊಂಡಿದೆ. ಇನ್ನು ಸಂದೇಹವೇನೆಂದು
ರುರು ಸುರೇಶನ ಕುರಿತು, "ಈ ನಾಲ್ಕನೆಯ ಮೂರ್ತಿ
ನನ್ನಿನಿಯಳೆಂದು ಬಗೆವೆನು. ಆಹುದೆ ಸಂತೋಷ,"
ಎಂದು ನುಡಿದನು. ನಾಲ್ಕು ಮೂರ್ತಿ ಕಣ್ಮರೆಯಾಗಿ
ಒಂದು ಉಳಿಯಿತು. ದೇವರೊಡೆಯ ಋಷಿಯನು ಕುರಿತು
"ರುರು, ನಿನ್ನ ಇನಿಯಳನು ಕೈಹಿಡಿದು ಕರೆದುಕೊ.
ಸ್ವಾರ್ಥ ನಿಸ್ವಾರ್ಥದಲಿ ಆಯುಷ್ಯದರ್ಧವನು

ನೀಡಿರುವೆ. ಇವಳು ನಿನ್ನರ್ಧಾಂಗಿ ಎನಲೇನು;
ಅರ್ಧಜೀವವೆ ; ಅರ್ಧ ಆತ್ಮವೇ. ಜೊತೆಯಾಗಿ
ನಿಮ್ಮ ನಿಯಮಿತ ಕಾಲವೆಲ್ಲ ಸುಖದಲಿ ಬಾಳಿ,"
ಎಂದು ಮೆಯ್ಗರೆದು ಮರೆದನು. ರುರು ಪ್ರಮದ್ವರೆಯ
ಕೈಹಿಡಿದು ಆಶ್ರಮಕೆ ಸಾರಿ ತಂದೆಗೆ, ಅಂತೆ
ಮಾವನಿಗೆ, ಎರಗಿದನು. ಅವರ ಸಂತೋಷವನು,
ಎಲ್ಲರಾಶ್ಚರ್ಯವನು, ಎಂತು ಬಣ್ಣಿಸಬಹುದು?
ಇಂತು ಆ ದಿನ ಕಳೆದು ಮಾರನೆಯ ದಿನದ ಆ
ಉತ್ತರಾ ನಕ್ಷತ್ರದಲೆ ಪ್ರಮದ್ವರೆಯ ರುರು
ಹಸೆನಿಂದು ಹಿರಿಯರ ಅನುಗ್ರಹವ ಧರಿಸಿದನು.

ಇನಿತೆ ಕತೆ. ಇನ್ನು ಒಂದೆರಡು ಮಾತನು ಹೇಳಿ
ನಿಲಿಸುವೆನು. ರುರು ಸತಿಗೆ ತನ್ನ ಆಯುಷ್ಯದಲಿ
ಅರ್ಧವನು ನೀಡಿದುದರಿಂದ ಬಂದೊಂದು ಫಲ
ಏನೆನಲು, ಇವರು ಬಾಳುವ ಅನಿತು ಕಾಲವೂ
ಎರಡು ಒಡಲಲಿ ಹಂಚಿದೊಂದೆ ಒಂದುಸಿರಾಗಿ,
ಹೆಚ್ಚು ಕೊರೆಯೆಂಬುದಿಲ್ಲದೆ, ಪರಸ್ಪರ ಸರಿದು
ಒಲಿದು ಓಲೈಸಿ, ನಡೆದರು. ಅಂತೆ ಬೇರೊಂದು
ಫಲ ಅದೇನೆನೆ, ನೆಲನೊಳಿರುವ ದಿನ ಮುಗಿದಿರಲು,
ಇಬ್ಬರೂ ಒಂದೆ ಹೊತ್ತಲಿ ತನುವ ನೀಗಿದರು.
ಆ ಉದಯ, ರುರು ಮಿಂದು ಮಿಂದ ಸತಿಯನು ಕರೆದು
ದೈವ ಸಾನ್ನಿಧ್ಯದಲಿ ಜೊತೆಗೆ ಪೂಜೆಯ ನಡಸಿ
ಅವಳ ಕೈ ಹಿಡಿದು ಕುಳಿತನು. ಕಣ್ಣಿನಲಿ ಕಣ್ಣ
ನಿಲಿಸಿ ನೋಡಿದನು. ಕೈ ಮೈಗಳನು ಬೆಸೆದವು;
ನೋಟ ಜೀವಗಳ ಬೆಸೆದವು. ಒಲವ ಸಂತಸದ
ಶಾಂತಿಯಲಿ ದಂಪತಿಗಳಿರೆ, ಗವಾಕ್ಷದಿ ಹಾಯ್ದು
ಬೀಸಿದೊಂದೇ ಗಾಳಿ ದೇವರೆದುರಿನ ಎರಡು

ದೀಪವನು ನಂದಿಸುವ ರೀತಿ, ಇವರುಸಿರುಗಳ
ಮೃತ್ಯು ಒಂದೇ ಕ್ಷಣದಿ ನಂದಿಸಿತು. ಇಂತಿವರು
ದೇವಲೋಕವ ಸಾರಿದರು. ಮಹಾಭಾರತದ
ಶೌನಕ ಮಹರ್ಷಿ ಈ ರುರು ಪ್ರಮದ್ವರೆ ಇವರ
ಪುತ್ರ ಶುನಕನ ಪುತ್ರ ; ಸೂತಪೌರಾಣಿಕನು
ನೈಮಿಶಾರಣ್ಯದಲಿ ಶೌನಕನ ಮುನಿಕುಲಕೆ
ಇವರ ಚರಿತೆಯನು ಒರೆದನು. ದಂಪತಿಗಳಿಂತು
ಭಾರತದ ಕತೆಯೊಳಮರತೆವೆತ್ತು ನಿಂದಿಹರು.

* * * *

ಇಂತು ಪುಟ್ಟಣ್ಣ ಕತೆಯನು ನಿಲಿಸೆ ಹಿರಿಯಣ್ಣ
ಟೀಕೆಯಲಿ ತೊಡಗಿದರು. " ಹೆಣ್ಣು ಗಂಡಿಗೆ ತನ್ನ
ಬಲಿ ಕೊಟ್ಟುಕೊಳ್ಳುವುದು ಲೋಕದಲಿ ಪದ್ಧತಿ.
ಗಂಡು ಹೆಚ್ಚೆಂಬ ಇಂದಿನ ನಾಗರಿಕತೆಯಲಿ
ಇದು ಹೆಣ್ಣ ಹಿರಿಯ ಗುಣ, ಪುಣ್ಯ. ಗ್ರೀಕರ ಕತೆಯ
ಆಲ್ಸೆಸ್ಟಿಸೆಂಬಾಕೆ ತನ್ನ ಗಂಡನಿಗೆ ಪ್ರತಿ
ತಾನು ಮೃತ್ಯುವಿಗೆ ತುತ್ತಾಗಿ ಹೋದಳು. ಅವಳ
ಹರ್ಕ್ಯುಲೀಸ್ ಬಿಡಿಸಿ ತಂದನು. ನಮ್ಮ ಇಂತ ಕತೆ
ಸಾವಿತ್ರಿ ಸತ್ಯವಾನರದು. ಗಂಡನ ಜೊತೆಗೆ
ತಾನು ಸಹ ಸಾವದಾಡೆಯ ಹೊಕ್ಕು ಸಾವಿತ್ರಿ
ಅವನ ರಕ್ಷಿಸಿ ತಂದಳಂತೆ. ಇದು, ದಿನ ತನ್ನ
ಇನಿಯ ಸೂರ್ಯನ ಜೊತೆಗೆ ಸಾರಿ ಅವನನು ಮತ್ತೆ
ತರುವುದರ ಕಥನ, ಎಂಬರು. ಅಂತೆ ಇರಬಹುದು.
ಆದರೂ ಗಂಡು ಹೋಯಿತು. ತನ್ನ ಕಡೆಗಣಿಸಿ
ಅವನ ಹಿಂಬಾಲಿಸಿತು ಹೆಣ್ಣು. ಇಂತಹ ವೇಳೆ
ಗಂಡೊಂದು, ತನ್ನ ಹೆಣ್ಣಳಿದುದಕೆ ಅತ್ತು, ಆದ
ತನ್ನ ಆಯುಷ್ಯದರ್ಥವ ತೆತ್ತು ಉಳಿಸಿದುದ
ಹೊಗಳಿದೀ ಕತೆ ಗಂಡುಕುಲದ ಮರ್ಯಾದೆಯನು

ಉಳಿಸಿತೆಂದೆನಗೆ ತೋರುತಿದೆ. ನಾವೂ ಒಮ್ಮೆ
ಅರ್ಧ ಜೀವವ ಕೊಟ್ಟು ಹೆಣ್ಣ ಬದುಕಿಸಿದವರು,
ಎಂದು ಸಂತೋಷಪಡಬಹುದು. ಆ ಉಳಿಸಿದುದು
ಸ್ವಾರ್ಥಸಾಧನೆಗಾಗಿ ಎನಲು ನಿಜ. ಅಂತೆಯೇ
ಅರ್ಧ ಆ ಹೆಣ್ಣಿಗೋಸುಗ ಎಂಬುದೂ ನಿಜವೆ.
ಭಾರತದ ಆದಿಯಲಿ ಕಿರಿದಾಗಿ ಇಹ ಕತೆಯ
ವಿಸ್ತರಿಸಿ ಹಲವು ಸಂಗತಿಯ ಸೇರಿಸಿ ನಮ್ಮ
ಪುಟ್ಟಣ್ಣ ಕತೆಯ ಮಾಡಿಹರು. ಅಪ್ಸರೆಗಿಂತ,
ಸುರಕನ್ಯೆಯರಿಗಿಂತ, ಮಾನವಿಯೆ ಮೇಲೆಂಬ
ಇದರ ಭಾವನೆ ತುಂಬ ಚೆನ್ನು. ಭೂಮಿಯ ನಾವು
ದೇವಿ ಎಂಬೆವು. ನಮ್ಮ ಹೆರಲೆಂದೆ ಈ ದೇವಿ
ನಕ್ಷತ್ರ ಪದವ ತೊರೆದಳು; ದಿವವ ನೀಗಿದಳು.
ಭೂಮಿಯನು ದೇವಿಯೆಂದವರಾದರೂ ಹಿಂದೆ,
ಒಂದು ದ್ಯಾವಾ, ಬೇರೆ ಒಂದು ಪೃಥಿವೀ, ಎಂದು
ನಭ ಭೂಮಿಗಳು ಬೇರೆ ಬೇರೆ ಎಂದೆಣಿಸಿದರು.
ಆರಯಿಸೆ ಪೃಥಿವಿ ದ್ಯಾವಾ; ಬೇರೆ ಏನಲ್ಲ.
ಬೆಳಕಕಣ ತಂಪಾಗಿ ಮಣ್ಣಕಣವೆನಿಸುವುದು.
ಭೂಮಿ ಮಾತೆಯೆ ಸತ್ಯ: ಮಾತೆ ಭೂಮಿಯ ಒಂದು
ಅಂಶ, ಅವತಾರ, ರೂಪಾಂತು ನಡೆಯುವ ಖಂಡ.
ನೆಲದ ಮಕ್ಕಳು ನಾವು. ನಮಗೆ ನೆಲವನು ಬಿಟ್ಟು
ನಿಜವಾದ ಚೆಲುವಿಲ್ಲ, ಹೆರಲೋಕವೂ ಇಲ್ಲ.
ಭೂಮಿಯಲಿ ಕಂಡ ಸಂಗತಿಯಿಂದ ಈ ಲೋಕ
ಆ ಲೋಕ ಮೂಲೋಕವನು ಕಲ್ಪಿಸಿರುವೆವು.
ಅದು ಇದಕೆ ಮಿಗಿಲೆಂಬ ಭಾವದಲಿ, ಅಲ್ಲಿಲ್ಲ
ಇಲ್ಲಿರುವ ನೋವಿಲ್ಲ, ಹಸಿವಿಲ್ಲ, ಎನ್ನುವೆವು.
ನೋವಿಲ್ಲದಿರಲು ನಗೆಯೂ ಇಲ್ಲ. ಹಸಿವಿಲ್ಲ?
ಅನ್ನವೂ ಇಲ್ಲ. ಆದರಾರು ರುಚಿಯೂ ಇಲ್ಲ.

ಮಾನವರು ಭೂಮಿಯಲಿ ಬಾಳುತಿಹ ಬಾಳ್ವೆಯನು
ಚೆನ್ನ ಮಾಡಿದರೆ ಅದು ದೇವಲೋಕಕೆ ಮಿಗಿಲು
ಒಡನಾಡಿ ಒಲಿದ ಹೆಣ್ಣೊಂದು ರುರು ತೋರಿಸಿದ
ದಾಕ್ಷಿಣ್ಯವನು ಇಂದ್ರ ಅರಿಯದಾದನೆ, ಇದೂ
ಸೊಗಸಾದ ಒಂದು ಭಾವನೆ. ನಾಲಗೆಗೆ ಎಂತು
ಅಂತು ಮನಸಿಗೆ ರುಚಿಗಳುಂಟು: ದೇವತೆಗಳಿಗೆ
ಮಮತೆ ಇಲ್ಲೆನೆ ಜೊತೆಗೆ ದಾಕ್ಷಿಣ್ಯವೂ ಇಲ್ಲ.
ಪುಟ್ಟಣ್ಣ ಕತೆಯ ಹೇಳಿದ ರೀತಿಯನು ನಾನು
ಒಪ್ಪಿಕೊಂಡುದನು ಪ್ರತ್ಯೇಕ ಹೇಳಲೆ? ಒಳಿತು;
ಸಂತೋಷದಿಂದ ಹೇಳಿಹೆನು.
ಇಂದಿಗೆ ನನ್ನ
ದೆವ್ವನ ವಕೀಲಿ–ಇಂಗ್ಲಿಷ್, ಡೆವಿಲ್ಸ್ ಅಡ್ವೊಕೇಟ್,–
ಕೆಲಸ ಮುಗಿಯಿತು; ಎನಲು ಟೀಕೆ ಮಾಡುವ ಸರತಿ.
ಕತೆಯೊರೆವ ಈ ನಮ್ಮ ಎಲ್ಲ ಏರ್ಪಾಡನೂ
ಯೋಚಿಸುವ ಹೊತ್ತಿನಲಿ, ದಿನದಿನದ ಕತೆಯನೂ
ಕುರಿತು ಯಾರಾದರೊಬ್ಬರು ನಾಲ್ಕು ಶಬ್ದವನು
ಹೇಳುವುದು ಇರಲಿ, ಎನೆ ನಾನು ಒಳಿತೆಂದೆನು.
ಈ ಕೆಲಸವನು ಮೊದಲು ವೆಂಕಪ್ಪ ಮಾಡುತಿರೆ,
ಅದು ಕೂಡ ಒಳಿತು, ಎಂದೆನು. ನಾನೆ ಆ ಕೆಲಸ
ಮಾಡಬೇಕೆನೆ ಆಗ, ಒಳಿತಲ್ಲ, ಎನ್ನಿಸಿತು.
ಯಾವುದಕು ಮೊದಲು ಈ ಟೀಕೆಯೆನ್ನುವ ಶಬ್ದ
ಒಳಿತಲ್ಲವೇನೊ? ಟೀಕಿಸುವ ಜನ ಎಲ್ಲೆಲ್ಲು
ತಪ್ಪನೇ ಹುಡುಕಿ ಹೇಳುವುದು ವಾಡಿಕೆಯಾಗಿ
'ಟೀಕೆ'ಯೆನೆ ತಪ್ಪೆಣಿಸುವುದರರ್ಥ ಮೂಡುವುದು.
ನನ್ನ ಬಾಯೂ ಸ್ವಲ್ಪ ದುಡುಕು. ಒಳಿತನು ಹೇಳಿ,
ಒಳಿತ ಕಾಯುವ, ಎಂಬ ಬಯಕೆಯಲಿ ನುಡಿದ ನುಡಿ
ಹಲವೇಳೆ ಜನರ ಮನವನು ನೋಯಿಸುವುದುಂಟು.

ಈ ನಾಲ್ಕು ದಿವಸದಲಿ ಇಂತಹ ಅಚಾತುರ್ಯ
ಏನು ಆಗಿರಬಹುದೊ ನಾನರಿಯೆ. ಆಗಿಹುದೆ
ಎಲ್ಲ ಗೆಳೆಯರು ಅದನು ಮನ್ನಿಸಿರಿ. ವಂದನೆ."
ಹಿರಿಯಣ್ಣ ತಮ್ಮ ವಾಡಿಕೆಯ ಬಹುಸಂಕೋಚ
ಬಹುವಿನಯದೀ ನುಡಿಯ ನುಡಿದು ನಿಲಿಸಿರೆ, ರಾಮು,
"ಹಿರಿಯಣ್ಣ ತಮ್ಮ ಮನಸಿನ ಭಯವ ಬದಿಗಿಟ್ಟು
ನಾಲ್ಕು ದಿನ ಟೀಕೆಯನು ಮಾಡಿ ನಮ್ಮೆಲ್ಲರಿಗೆ
ಉಪಕಾರ ಮಾಡಿಹರು. ಅವರ ನುಡಿ ಯಾವುದೂ
ನನ್ನ ಮಟ್ಟಿಗೆ ಕಠಿನವಾಗಿ ಕಾಣಿಸಲಿಲ್ಲ.
ಅಲ್ಲದೆ, ಇದೇನು, ಅಪರಿಚಿತರಾದ ಜನ ನೆರೆದು
ಒಂದ ಹೇಳಿದರೆ ಒಂದನು ತಿಳಿವ ಸಭೆಯಲ್ಲ.
ಗೆಳೆಯ ಗೆಳೆಯರು ಸೇರಿ ಕುಳಿತಿಹೆವು. ಹಿರಿಯರು
ಎಳೆಯರಲಿ ತಾವು ಎಳವೆಯ ತಾಳಿ ಬೆರೆತಿಹರು.
ತಪ್ಪ ನುಡಿಯುವರಿಲ್ಲ; ತಪ್ಪನೇ ನುಡಿದರೂ
ತಪ್ಪಿ ತಿಳಿಯುವರಿಲ್ಲ ಇಲ್ಲಿ. ಈ ಭರವಸೆಯ
ನೆರೆದವರ ಪರವಾಗಿ ನಾನೀಗ ನೀಡುವೆನು.
ನಾಳೆ ಕತೆ ಹೇಳುವರು ವೆಂಕಪ್ಪ. 'ಬೇಕೆನಲು
ನೂರು ಕತೆ ಕೇಳುವೆನು; ಒಂದ ಹೇಳಲು, ಅರಿಯೆ'
ಎಂದು ತಪ್ಪಿಸಿಕೊಳಲು ನೋಡಿದರು. ನಾ ಬಿಡದೆ,
ಏನನೇ ಹೇಳಿ, ಎಂದೊಪ್ಪಿಸಿರುವೆನು. ಅವರು
ತಮ್ಮ ಗುರುವರ್ಯ ಅಗಡಿಯ ಸಾಧುಗಳ ಕುರಿತು
ನಾಲ್ಕು ಸಂಗತಿಯ ತಿಳಿಸುವರು. ನಾಳೆಯ ಮೊದಲು
ನಾಲ್ಕು ದಿನ ರಾಮಕೃಷ್ಣಯ್ಯನವರದು 'ಟೀಕೆ,'
ಎಂದು ಸಾರಿದನು. ಮೂರನೆ ದಿವಸ ವೆಂಕಪ್ಪ
ತಮ್ಮ ಗುರುಗಳ ಕುರಿತು ಒರೆದ ಕತೆ ಮುಂದೆ ಇದೆ.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾನ್ತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಒಂದು ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ (ಉಪನ್ಯಾಸ)
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ (ಉಪನ್ಯಾಸ)
ಕಾಕನಕೋಟೆ (ನಾಟಕ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯಕಥೆ)
ರಾಮನವಮಿ ( ,, )
ಮೂಕನ ಮಕ್ಕಳು ( ,, )
ತಾಯ್ನುಡಿಯ ತಮ್ಮಡಿ
ನವರಾತ್ರಿ

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (in four volumes)
Subbanna

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಾಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
43–44, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಅಗಡಿಯ ಸಾಧುಗಳು

ನನ್ನ ಜೀವನವ ತಿದ್ದಿದ ಒಬ್ಬ ಹಿರಿಯವರು
ನಮ್ಮ ಅಗಡಿಯ ಸಾಧುಗಳು. ಹರಿಹರವ ದಾಟಿ
ಹುಬ್ಬಳಿಯ ಕುರಿತು ಹೊರಟುದು ರೈಲು ಮಧ್ಯದಲಿ
ಹಾವೇರಿ ಎಂಬೊಂದು ನೆಲೆಯ ಮುಟ್ಟುವುದಲ್ತೆ.
ಹಾವೇರಿಯಿಂದ ಒಂದೊಂದುವರೆ ಹರಿದಾರಿ
ನಡೆಯೆ ಅಗಡಿಗ್ರಾಮ ಸಿಲುಕುವುದು; ಅದರಲ್ಲಿ
ಆನಂದವನವೆಂಬ ಹೆಸರ ಆಶ್ರಮ ಇಹುದು.
ಅದುವೆ ಈ ನಮ್ಮ ಶೇಷಾಚಲ ಮಹಾರಾಜ
ಗುರುವರೇಣ್ಯರ ತಪದ ತಾಣ. ಈಗಳು ಅಲ್ಲಿ
ಅವರ ಭಕ್ತರ ಪರಂಪರೆ ಅವರ ಹೆಸರಿಂದ
ಧರ್ಮವನು ನಡೆಸುತಿದೆ. ನಾನು ಕಾಣುವ ದಿನಕೆ
ನಮ್ಮ ಸಾಧುಗಳು ವೃದ್ಧರು; ವೃದ್ಧರಾದರೆಯು
ಬ್ರಹ್ಮನಿಷ್ಠೆಯಲಿ ಸಿದ್ಧಿಸಿದ ತೇಜಸ್ವಿತೆಯ
ಮೂರ್ತಿಯೆಂಬಂತಿಹರು. ಪರಿಣತ ವಯೋಮಾನ
ಅವರ ಮುಖದಲಿ ಶಾಂತಿ ಗಾಂಭೀರ್ಯವನು ತಂದು
ನಿಲ್ಲಿಸಿತು ಹೊರತಾಗಿ, ಅದರ ಕಳೆಯನು ಒಂದು
ಕಣಮಾತ್ರವೂ ಕಡಮೆ ಮಾಡಲಾರದೆ ಇತ್ತು.
ಸಾಧುಗಳು ಗುರುಪದಕೆ ಎಂದೆಂತು ಏರಿದರು,
ಇದನು ನಾನರಿಯೆ. ಬಹು ಹಿಂದೆಯೇ ಇವರೊಂದು
ಸೌಜನ್ಯ ಆಚಾರ ಸೌಶೀಲ್ಯವನು ಕಂಡು
ನಮ್ಮ ಜನ ಈ ಮಹಾತ್ಮರು ಶ್ರೀ ಚಿದಂಬರನ
ಅಪರಾವತಾರ ಎಂದರು. ಕನ್ನಡದ ನಾಡ
ಉತ್ತರ ಪ್ರಾಂತದಲಿ ಶ್ರೀ ಚಿದಂಬರರೆಂಬ
ಗುರು, ಹಿಂದೆ ಧರ್ಮದಲಿ ನಡೆದು ಮುಂದಿಯ ನಡಸಿ,
ಮಹಿಮೆಯನು ಮೆರೆದರಪ್ಪುದು. ನಮ್ಮ ಸಾಧುಗಳು

ತಾವು ಇಂಥಂಥವರು ಎಂದು ಎಂದಾದರೂ
ಹೇಳಿಕೊಂಡವರಲ್ಲ; ಎಂದಾದರೂ ಅವರು
ಮಹಿಮೆಯನು ಮೆರೆದರೋ ನಾನು ಅದನೂ ಅರಿಯೆ.
ನಾನು ಕಾಲೇಜಿನಲಿ ಓದುತಿಹ ದಿವಸದಲಿ
ಒಂದು ಬೇಸಗೆಯ ಬಿಡುವಲಿ ಊರ ಸಾರಿರಲು,
ಗುರುಗಳಾದೆಸೆಗೆ ಬಂದಿಹರೆಂದು ಕೇಳಿದೆನು;
ಬರಿದೆ ಚಪಲಕೆ ಅವರ ನೋಡ ಮನಮಾಡಿದೆನು.
ಮೊದಲ ನೋಟಕೆ ಸಾಧುಗಳು, ಯಾವಗುರು ಇವರು
ಸಾಕು ಬಿಡು, ಎಂಬಂತೆ ಕಾಣುವರು. ಬಂದವರು
ಬಳಿಸಾರಿ ಪ್ರಣತಿಗೆಯ್ಯುವಮುನ್ನ ತಾವಾಗಿ
ಮುಂಚೆಯೇ ಕೈಮುಗಿದು, ಬನ್ನಿ ರಾಯರೆ, ಬನ್ನಿ
ಶಾಸ್ತ್ರಿಗಳೆ, ಬನ್ನಿ ದೀಕ್ಷಿತರೆ, ಎಂಬರು. ನುಡಿಯ
ಯಾವುದೋ ಮಾಯೆಯೊಂದಂದ ಇವರನು ನಿಮ್ಮ
ಆತ್ಮೀಯರೆಂಬಂತೆ ಮಾಡುವುದು. ಬಳಿಸಾರಿ
ಕುಳಿತಿರಲು, ಸಾಧುಗಳು, ಆ ಮೊದಲೆ ಬಲ್ಲವರ
ಕ್ಷೇಮವನು ಕೇಳಿ, ಹೊಸಬರ ಗುರುತು ಪರಿಚಯವ
ತಿಳಿದು, ಸಂತೋಷಪಡುವರು. ಮೆಚ್ಚಿಗೆಯ ಒಂದು
ನುಡಿ ನುಡಿದು ಹೊಸಬರನು ಸಂತೋಷಪಡಿಸುವರು.
ಆಮೇಲೆ ಇವರೆಂತ ಗುರು ಎಂಬ ಸಂದೇಹ
ಯಾರಿಗೂ ನಿಲ್ಲಲಾರದು. ಈತ ಗುರುವೆ ಸರಿ,
ಗುರುವಲ್ಲವೇ ದೇವರೇ ಸತ್ಯ, ಎನಿಸುವುದು.
ಅನಿತು ಚೆಲು ಆ ಮನಸು, ಆ ಮಾತು, ಆ ರೀತಿ.
ಅಪರಂಜಿ ಹೊನ್ನು ಎಲ್ಲವು : ಕಿಟ್ಟ ಇನಿಸಿಲ್ಲ ;
ತಾ ಹಿರಿಯನೆಂಬ ಭಾವನೆಯಿಲ್ಲ ; ಎದುರಿನಲಿ
ಯಾರಿರಲಿ, ಅವರು ಕಿರಿಯರು ಎಂಬುದೂ ಇಲ್ಲ ;
ಅಂದೆ ಬಂದವರು ಎಂದೋ ಬಂದ ಜನದಂತೆ
ಒಡನೆಯೇ ತನ್ನವರು. "ಇಂಗ್ಲೀಷು ಕಲಿಯುವಿರ ?

ಬಹಳ ಸಂತೋಷ. ಇಕೊನೋಡಿ, ಮಹರಾಜ್, ಜ್ಞಾನ
ಯಾವ ದಿಕ್ಕಿನ ಮೋಡದಿಂದ ಹಸಿದರೆ ಏನು ?
ಎಲ್ಲವೂ ಆ ಪರಾತ್ಪರ ವಸ್ತುವಿಂದಲೇ
ಬಹುದು ಕಂಡಿರ. ತಿಳಿದು ಬಳಸಿಕೊಂಬುದು ನಮ್ಮ
ಹೊಣೆ. ತುಂಬ ಸಂತೋಷ. ಸ್ನಾನವಾಯಿತೆ, ಏಳಿ,
ಆಮೇಲೆ ಮಾತನಾಡೋಣ. ಭಗವಾನ್, ನಮ್ಮ
ರಾಯರಿಗೆ ಮಾಯನೀರಿಡಲಿ." ಏನಾ ಪ್ರೀತಿ
ಏನು ಆದರ !

ಗುರುಗಳಿಳಿದ ಊರಿನ ಸುತ್ತು
ಹತ್ತು ಊರಿನ ಮಂದಿ ಇವರ ಬಳಿಗೈತಹರು.
ಒಪ್ಪೊತ್ತು, ಒಂದು ದಿನ, ಎರಡು ದಿನ, ಹತ್ತಿರವೆ
ನಿಂತಿದ್ದು ಕುಳಿತಿದ್ದು ಇವರು ಆಡುವ ಮಾತ
ಕೇಳಿ ಹರಕೆಯ ಕೊಂಡು ಹೋಗುವರು. ಸಾಧುಗಳು
ಯಾರನೂ ಶಿಷ್ಯ ಎಂದವರಲ್ಲ; ಅವರ ಬಳಿ
ಶುಶ್ರೂಷೆಗೆಂದು ನಿಂತವರ ಭಗವಾನ್ ಎಂದು
ಕರೆಯುವರು ; ಕರೆವುದೇ ಅಲ್ಲ, ಬಂದೆಲ್ಲರಲು
ಭಗವಂತನನು ಕಾಣುವರು. ಪೂಜೆಮುಗಿದಿರಲು
ಇವರೆ ಅತಿಥಿಗಳ ಪೂಜೆಯಲಿ ನೆರವಾಗುವರು.
ಎಂತಪ್ಪ ಊಳಿಗವ ಗೆಯ್ಯುವದಕು ಇವರು ಸಮ.
ತಾನು ಗುರುವೆಂದು ಮಾಡದ ಸೇವೆಯೊಂದಿಲ್ಲ.
ಬಂದಿದ್ದ ಮಂದಿ ಊಟದಲಿ ತೊಡಗಿದ ಮೇಲೆ
ತಾವು ಎಲೆಮುಂದೆ ಕೂಡುವರು. ತಾ ಗುರುವೆಂದು
ಬೇರೊಂದು ಚಿಕ್ಕ ಅಡಿಗೆಯನು ಎಂದಾದರೂ
ಮಾಡಿಸಿದುದಿಲ್ಲ ಸಾಧುಗಳು. ಎಲ್ಲರ ಊಟ,
ಎಲ್ಲರೂ ಉಂಡುಳಿದ ಊಟ, ಇದನೇ ಇವರು
ದೈವಪ್ರಸಾದ ಎಂದುಂಡು ತಣಿದರು. ಬಂದ
ಜನ ಇವರ ಪರಿಯನರಿತವರು ಕಾಲೆಡೆಗೆರಗಿ

ಮುಕ್ಕಳನು ಅಂತೆ ಎರಗಿಸಿ, ಹರಕೆಯಕ್ಷತೆಯ
ಪಡೆದು ಹೋಹರು. ಪರಿಯನರಿಯವದರೊಮ್ಮೊಮ್ಮೆ
ಉಪದೇಶ ಮಾಡಬೇಕೆನ್ನುವರು. ಗುರು ಅದಕೆ
ಒಡನೆಯೇ ಪ್ರತಿಯ ನುಡಿಯರು. ಮುಗುಳ್ನಗೆ ನಕ್ಕು
ಬೇರೆಯವರೊಡನೆ ಯಾವುದೊ ಮಾತನಾಡುತಿಹ
ಸೋಗಿನಲಿ, "ನೋಡಿ ವೆಂಕೋಬರಾಯರೆ, ಜನರು
ಉಪದೇಶಮಾಡಿ ಎನ್ನುವರು. ಉಪದೇಶವನು
ಮಾಡುವುದು ಹೇಗೆ, ಮಹರಾಜ್, ಹೇಳಿ, ಉಪದೇಶ
ಆಗಬೇಕಲ್ಲ" ಎನ್ನುವರು. ನುಡಿಯಲಿಗೆಯ್ದು
ಉಪದೇಶ ಎಂಥ ಉಪದೇಶ? ಜೊತೆಯೊಳಗಿದ್ದ
ಒಂದು ದಿನ ಎರಡು ದಿನ ಸಾಧುಗಳು ನುಡಿದ ನುಡಿ
ನಡೆದ ನಡೆಯನು ಕೇಳಿ ನೋಡಿ ಆಯಾಜನಕೆ
ಎನಿತು ಸಂಸ್ಕಾರವಾಯಿತೊ ಅದೇ ಸಾಧುಗಳ
ಉಪದೇಶ.

ನಾನು ಆ ಬಿಡುವಿನಲಿ ಇವರೊಡನೆ
ನಾಲ್ಕಾರು ಊರ ಸುತ್ತಿದೆನು. ಕೆಲ ಊರಿನಲಿ
ಭಕ್ತ ಜನ ಪುಣ್ಯವಂತರು. ಬೇರೆ ಊರಿನಲಿ
ಅನಿತನಿತೆ. ದಿನದ ಸಂತರ್ಪಣೆಗೆ ಅವರವರು
ಏನ ನೀಡುವುದು ಸಾಧ್ಯವೊ ಅದನೆ ನೀಡುವರು.
ಕ್ಲೇಶದಿಂದೌತಣವ ಒದಗಿಸುವೆವೆನೆ ಸಾಧು
ತೀರಬಲ್ಲರು. "ನಾವು ಮನೆಗೆ ಬಂದದರಿಂದ
ಮನೆಯಮುಂದಿಗೆ ನಿಮಗೆ ಚಿಂತೆಹೆಚ್ಚಿತು ಎನ್ನಿ:
ಆಗ, ಮಹರಾಜ್, ಮನೆಗೆ ಬಂದವನು ಗುರು ಅಲ್ಲ,
ಬೇರೆ ಗ್ರಹ, ಎನಬೇಕು. ವೈಶ್ವಾನರಗೆ ಹವ್ಯ
ಶುದ್ಧವಾಗಿರಲಿ ಅಷ್ಟೇ; ಲಡ್ಡು, ಗೂಳುರಿಗೆ,
ಬಾಯ ಚಪಲಕೆ ನಾವು ಮಾಡಿಕೊಂಬುದು ಹೊರತು,
ಚರುವಲ್ಲ. ಏನು ವೆಂಕೋಬರಾವ್?" ಎನ್ನುವರು.

ಆ ಸಲವೆ ಒಂದು ಊರಲಿ ಇವರ ಶಿಷ್ಯರಲಿ
ಒಬ್ಬಾತ, ತೀರಬಡವರು, ಒಂದು ದಿನ ಇವರ
ತನ್ನ ವಸತಿಗೆ ಕರೆಯಲೆಳಸಿಹರು. ಕರೆದರೋ,
ಏನಿರಲಿ ಬಿಡಲಿ, ಸಾರೂ ಅನ್ನ ಇಲ್ಲದೆಯೆ
ಊಟವಾಗುವುದೆ ? ಆತನಿಗೊ ಅದಕೂ ಕಷ್ಟ.
ಏನಮಾಡುವುದೆಂದು ಆತ ಚಿಂತಿಸುತಿರಲು,
ಆ ಊರ ಬಿಟ್ಟು ಮುಂದಕೆ ಹೋಹ ಮೊದಲದಿನ
ಸಾಧುಗಳು, " ವೆಂಕೋಬರಾವ್, ಮೂರುದಿನದಿಂದ
ಒಂದೆಸಮ ಪಾಯಸವನುಂಡು ಸಾಕಾಗಿಹುದು.
ಯಾರಾದರೂ ಒಬ್ಬ ಪುಣ್ಯಾತ್ಮ ಬರಿ ಇಷ್ಟು
ಹಿಟ್ಟು ಹುಳಿಯನು ಬಡಿಸಿ ನಾಳೆ ವೈಶ್ವಾನರನ
ಹೋಮ ನಡೆಸಲು ಚೆನ್ನವಾದೀತು," ಎಂದರು.
ಬಳಿಯಲೇ ನಿಂತಿದ್ದ ಈ ನಮ್ಮ ಬಡ ಭಕ್ತ
ಇದೆ ಸಮಯವೆಂದು, " ನಾ ಬಡವ, ಸಂತರ್ಪಣೆಗೆ
ಬೇರೆ ಏನೂ ಮಾಡಲಾರೆ. ನಾಳೆಯ ದಿವಸ
ಈಗ ಹೇಳಿದ ಊಟವನು ನೀಡಬಹುದೆನಲು
ಉದ್ಧಾರವಾದೆ" ಎಂದರು. ಸಾಧು "ಮಹರಾಯ,
ನಾವು ಬೇಕೆಂದರೂ ಇಂಥ ಮಾತಿಗೆ ನಮ್ಮ
ಈ ಬೇರೆ ಮಂದಿ ಒಪ್ಪರು. ಎಲ್ಲೊ ಒಂದು ಸಲ
ಬಂದ ಗುರುಗಳಿಗೆ ಹಿಟ್ಟನು ಬಡಿಸುವುದೆ ಎಂದು
ಹಠ ಮಾಡುವರು. ಅದೂ ಭಕ್ತಿಯೇ. ಆದರೂ
ಬಯಸಿದುದ ನೀಡುವುದು ನಿಜದಿ ಅನಿತೇ ಭಕ್ತಿ.
ನಾಳೆ ನಿಮ್ಮಲ್ಲಿ ದೇವರ ಪೂಜೆ ನಡಸೋಣ,"
ಎಂದು ನುಡಿದರು. ಭಕ್ತ ಸಂಜೆಯಲಿ ನನ್ನೊಡನೆ
"ನೋಡಿ, ರಾಯರೆ, ಕರೆವ ಆಸೆ. ಕರೆಯಲಿ ಹೇಗೆ,
ಹಿಟ್ಟು ಹುಳಿ ಬಡಿಸುವೆನು ಹೇಗೆ, ಎಂದೇ ಇದ್ದೆ.
ಯಾರಿಗಾದರು ಹೇಳಬಹುದಾದ ಮಾತಲ್ಲ ;

ಮನೆಯುವರಿಗೂ ಉಸುರಲಿಲ್ಲ. ಇಂತಹ ಆಸೆ
ಸಾಧುಗಳಿಗೆಂತು ತಿಳಿಯಿತು? ತಿಳಿಯದೆಯೆ ಅವರು
ಹಿಟ್ಟು ಹುಳಿಯನು ಬೇಡಿದರು ಎಂದು ಎಣಿಸದಿರಿ.
ಇರುವೆ ನಡೆಯುವ ಶಬ್ದ ತಿಳಿಯುವುದು ಆ ಕಿವಿಗೆ,"
ಎಂದು ಹೇಳಿದರು.

ಆಚೆಯ ಬೇಸಗೆಗೆ ಮತ್ತೆ
ನಾನು ಸಾಧುಗಳ ಬಳಿಸಾರಿದೆನು. ಆ ವರ್ಷ
ಅವರು ಆನಂದವನದಲೆ ಮೂರ್ತವಾಗಿಹರು.
ಹಾವೇರಿಯಲಿ ರೈಲನಿಳಿದು ಆಶ್ರಮದಿಂದ
ಬಂದಿದ್ದ ಒಬ್ಬ ಆಳಿನ ಕೈಗೆ ಹಾಸಿಗೆಯ
ಸುರುಳಿಯನು ಕೊಟ್ಟು ಆನಂದವನವನು ಕುರಿತು
ನಡೆದೆ ಹೋದೆನು. ಉತ್ಸವದ ಕಾಲ. ಆಶ್ರಮಕೆ
ಬಹುಮಂದಿ ಭಕ್ತರಾದವರು ಬರುತಲೆ ಇಹರು.
ಅಂದು ಮಧ್ಯಾಹ್ನ ಊಟಕೆ ಸ್ವಲ್ಪ ಹೊತ್ತಾಗಿ,
ಸಾಧುಗಳು ಬಂದಿದ್ದ ಜನದ ಯೋಗಕ್ಷೇಮ
ಎಲ್ಲವನು ತಾವೆ ನೋಡುತಲಿಹರು; ನಾನೆಲ್ಲೊ
ದೂರದಲಿ ಕಂಡೊಡನೆ, ಶಿಷ್ಯರೊಬ್ಬರ ಕರೆದು
"ನೋಡು, ವೆಂಕೋಬರಾವ್ ಬಂದರು, ಅಕೊ, ಹೋಗು,
ಸ್ನಾನವಾಯಿತೆ ನೋಡಿ ಕರೆದು ತಾ, ಎಲೆ ಹಾಕು,"
ಎಂದು ಅಪ್ಪಣೆಮಾಡಿದರು. ನಾನು ಕೈಕಾಲು
ತೊಳೆದುಕೊಂಡವನು ಅವರಿರುವೆಡೆಗೆ ನಡೆತರಲು,
ದೂರದಿಂದಲೆ, ನಾನು ಕೈ ಮುಗಿವ ಮುನ್ನವೇ,
"ಬನ್ನಿ, ವೆಂಕೋಬರಾವ್; ಬನ್ನಿ; ನಮಸ್ಕಾರ.
ಬಿಸಿಲು ಹೊತ್ತೇ, ನಡೆದೆ ಬಂದಿರೇ? ಕುಳ್ಳಿರಿ,"
ಎಂದು ಪ್ರೀತಿಯಲಿ ನುಡಿದರು. ನಾನು ಅವರೊಡನೆ
ಇದ್ದ ಮೂರೂ ದಿವಸ ಒಬ್ಬ ಸೋದರಮಾವ
ಎಂತೊ ಅಂತೆನ್ನ ಒಂದೇ ಸಮನೆ ಓಲಗಿಸಿ

ನೋಡಿಕೊಂಡರು. ಬಂದವರು ಬರುತ, ಹೊರಟವರು ಹೊರಟಿರುತ, ಸಾಧುಗಳು ಈ ಎಲ್ಲ ಜನವನೂ ಬರಮಾಡಿಕೊಳುತ ಬೀಳ್ಕೊಡುತ ಹರಸುತ ನಲಿಸಿ ಒಬ್ಬರನು ಬಿಡದೆ ತಣಿಸಿದರು. ಆ ಮರುದಿವಸ ಅಂತೆ ಇದೆ ಜನದ ಸಂದಣಿ. ಬ್ರಾಹ್ಮಣರ ಪೂಜೆ ಒಂದು ಕಡೆ ನಡೆಯುಬೇಕಾಗಿಹುದು. ಅಂತೆಯೇ ಒಂದು ಕಡೆಯುಲಿ ಸುಮಂಗಲಿ ಪೂಜೆ. ಆ ದಿವಸ ಸಾಧುಗಳ ಮಗನ ಮಗುವಿಗೆ ಮೈಯೊಳನುವಿಲ್ಲ. ಎಳಕೂಸು. ಯಾರಾದರೂ ನೋಡಿಕೊಳಬೇಕು. ಸಾಧುಗಳ ಸೊಸೆ, ಮಗುವ ಹೆತ್ತಾಕೆ, ಒಂದು ಕಡೆ ನೆರೆದಿಹ ಸುಮಂಗಲಿಯರನು ನೋಡಿಕೊಳಬೇಕು ; ಅಂತೆ ಒಮ್ಮೊಮ್ಮೆ ಮಗನನು ನೋಡಿಕೊಳಬೇಕು. ಸಾಧುಗಳ ಮಗ, ಇತ್ತ ಬ್ರಾಹ್ಮಣರ ಪೂಜೆಯುಲಿ ನೆರವಾಗಬೇಕು, ಅಂತೇ ಅತ್ತ ತೊಟ್ಟಲಲಿ ಜ್ವರದಿಂದ ಮಲಗಿರುವ ಮಗನ ನೋಡಲು ಬೇಕು. ಇಂತಿರಲು ಸಾಧುಗಳ ಸೊಸೆ, ಬಂದವರ ಕರೆದು ಕುಳ್ಳಿರಿಸಿ, ಗಂಧ ಕುಂಕುಮ ಅರಿಸಿನವ ನೀಡಿ, ನೋಡಿಕೊಳ್ಳುತ ತನ್ನ ಮಗನತ್ತ ಹೋಗುವುದು ಆಗದಾಯಿತು. ಬ್ರಾಹ್ಮಣರನಿಂತು ನೋಡುತಿಹ ಅವರ ಯುಜಮಾನ, ಸಾಧುಗಳ ಮಕ್ಕಳು, ಒಮ್ಮೆ ಇಲ್ಲಿ ನಿಲ್ಲುವರು ; ಒಮ್ಮೆಗೆ ಮಗನ ನೆನವಾಗಿ ತೊಟ್ಟಲೆಡೆ ಹೋಗುವರು. ಗುರು ಕರೆದ ಹೊತ್ತಿನಲಿ ಹತ್ತಿರದೊಳಿಲ್ಲ. ಗುರು ಒಮ್ಮೆ ಸೊಸೆಯುನು ಕುರಿತು, "ಅವ್ವ, ಇಲ್ಲೇ ನಿಂತೆಯುಲ್ಲ, ಮಗುವನು ಸ್ವಲ್ಪ ನೋಡಬಾರದೆ," ಎಂದು ಹೇಳಿದರು. ಆ ತಾಯಿ "ಇಲ್ಲಿ ಕೈ ಬಿಡುವಾಗದಿದೆ ; ಸುಮಂಗಲಿಯುರಿಗೆ ಪೂಜೆ ಆಯಿತೆ ಹೋಗುವೆನು" ಎಂದು ಹೇಳಿದರು.

ಕ್ಷಣಬಿಟ್ಟು ಸಾಧುಗಳು ತಮ್ಮ ಮಗನನು ಕುರಿತು "ಬ್ರಾಹ್ಮಣರ ಪೂಜೆ ಮುಗಿಯಿತೆ, ಅಪ್ಪ?" ಎನೆ ಆತ "ಆಗುತಿದೆ; ತೊಟ್ಟಿಲಲಿ ಮಗು ಎಂತಿಹುದು ಎಂದು ನೋಡಹೋಗಿದ್ದೆ," ಎಂದರು. ಸಾಧುಗಳು, "ನೋಡಿ ವೆಂಕೋಬರಾವ್, ಇದೇ ಸಂಸ್ಕಾರವೆನ್ನುವುದು" ಎಂದು ಮೆಲ್ಲನೆ ನನಗೆ ಹೇಳಿದರು. ಸಂಸ್ಕಾರ ಯಾವುದೆನ್ನುವುದು ನನಗಾಗ ತೋರದು. ಸಂಜೆ ಇದರ ವಿವರವನು ಕೇಳಿದೆನು. ಗುರು, "ರಾಯರೇ, ಒಂದೊಂದು ಜೀವವೂ ಒಂದೊಂದು ಪಾಕವನು ಮುಟ್ಟಿಬೆಳೆಯುತಲಿಹುದು. ಮಗುವ ಸಾಕುವ ಭಾರ ತಂದೆಗಿಂತಲು ಹೆಚ್ಚು, ಹೆತ್ತತಾಯಿದು. ಕೂಸು ಜ್ವರದಲಿರೆ ಹೆತ್ತತಾಯಾದವಳು ಪೂಜೆಯಲಿ ಮನನಿಲಿಸಿ ಮಗುವ ದೇವರು ಕಾಯುವನು ಎಂದು ನಂಬಿ ನಡೆವುದು ಕಷ್ಟ. ಮಧ್ಯಾಹ್ನ, ನಮ್ಮ ಸೊಸೆ ಎಷ್ಟು ಧೃತಿಯಿಂದ ನಡೆದಳು ನೋಡಿ. ಹೆತ್ತವಳು ಇಂಥ ಧೈರ್ಯದೊಳಿರಲು ತಂದೆಯಾದವನೇಕೆ ಅಂತು ತೊಳಲಿದನು? ಗಂಡೆಂಬುದೆಲ್ಲವು ಧೈರ್ಯ, ಹೆಣ್ಣೆಂಬುದೆಲ್ಲ ಅಂಜುವುದು, ಎನಬೇಡಿ. ಇದು ಅವರವರ ಆತ್ಮ ಪರಿಪಾಕವನು ಅನುಸರಿಸಿ ನಡತೆಯಲಿ ಕಾಣುವುದು. ಮಗು ಎಂಬ ಕಾರುಣ್ಯ ತಪ್ಪು ಎಂದಲ್ಲ; ಮಮಭಾವ ಬರುವುದು ತಪ್ಪು. ಅದೆ ಕು ಸಂಸ್ಕಾರ. ಎಲ್ಲಾ ಹೊತ್ತಿನಲು ಮನುಜ ತನ್ನ ಮನ ಎತ್ತ ಹರಿದಿದೆ, ಎಂತು ಹರಿಯುತಿದೆ, ಎಂಬುದನು ನೋಡಿಕೊಳ್ಳುತ ತಿದ್ದುವಾಸೆಯಲಿ ದೇವನಿಗೆ ಶರಣಾಗಬೇಕು. ಕೂಸಿನ ನೋವು ತಂದೆಯನು ಸೋಕುವುದಕಿಂತ ಮಿಗಿಲಾಗಿ ಆ ತಾಯಸೋಕಿತು. ತನ್ನ ನೋವು ಭಯವನು ಆಕೆ

ಹೊಟ್ಟೆಯಲಿ ಇಟ್ಟುಕೊಂಡಳು. ನಿನ್ನ ಕೆಲಸದಲಿ ನಾ ದುಡಿಯುತಿಹ ವೇಳೆ ನನ್ನದೆಂಬುದ ನೀನು ನೋಡಿಕೊಳದಿರುವೆಯಾ, ಎಂಬಂತೆ ದೇವರಲಿ ನಂಬಿಕೆಯನಿರಿಸಿದಳು. ಇವನು ತೊಳಲುತಲಿದ್ದ. ಆ ಹೆಣ್ಣು ಬೇರೆಕಡೆಯಿಂದ ಬಂದದು; ಇವನು ಇಲ್ಲೆ ಹುಟ್ಟಿದನು, ಬೆಳೆದನು. ಇದನೆ ಸಂಸ್ಕಾರ ಎನ್ನುವುದು," ಎಂದು ನುಡಿದರು. ಒಂದು ಕ್ಷಣಬಿಟ್ಟು "ತಂದೆಯಾದವನು, ವ್ಯಗದಲಿ ಗಡವನಂತೆ, ಮಗು ತನತಲ್ಲ ಎನ್ನಬೇಕೆಂದಲ್ಲ. ನನ್ನ ಮಗು ಇದ ನಾನು ನೋಡಿಕೊಂಬೆನು ಎಂಬ ಮನದ ಹದ ಮನುಜರಿಗೆ ಚೆನ್ನ. ಪ್ರೀತಿಯೆ ಒಳಿತು. ಆದರದು ಕಕ್ಕುಲಿತೆಯಾಗಬಾರದು; ತನತು ಇದು ಎಂದು ವ್ಯಾಧಿಯಾಗುವುದು ಬಾರದು" ಎಂದು ಹೇಳಿದರು.

ಅದೆ ವರ್ಷ ನಾನು ಇಲ್ಲದವೇಳೆ ಸಾಧುಗಳು ಗೋಂದಾವಲೀ ಮಹಾರಾಜರೆನ್ನುವ ಹೆಸರ ಬೇರೊಬ್ಬ ಹಿರಿಯರನು ಸಂಧಿಸಿದರಂತೆ. ಆ ಸಂದರ್ಭ ವರ್ಣಿಸಲು ಬಹುದು. ಒಂದೂರಿನಲಿ ನಮ್ಮ ಸಾಧುಗಳ ಶಿಷ್ಯರು ಕೆಲವರಿರುವರಂತೆ ಗೋಂದಾವಲೀ ಮಹಾರಾಜರನುಯಾಯಿಗಳು ಕೆಲವರಿರುವರು. ನಮ್ಮ ಗುರು ನಿಮ್ಮ ಗುರು ಎಂಬ ಭೇದದವರೇನಲ್ಲ. ಇಬ್ಬರೂ ಗುರುಗಳನು ಎಲ್ಲರೂ ಮನ್ನಿಸುವರೇ. ಕೆಲವರಿವರಲ್ಲಿ ಕೆಲವರವರಲ್ಲಿ ಮೊದಲಿಗೆ ಹೋಗಿ ನಡೆದವರು. ಎಲ್ಲರೂ ಸೇರಿ, ಈ ಹಿರಿಯರನು ಇಬ್ಬರನು ಒಂದೆಸಲ ಬರಮಾಡಿಕೊಂಬ, ಎಂಬಾಸೆಯಲಿ ಇದನು ಏರ್ಪಡಿಸಿದರು. ನಮ್ಮ ಸಾಧುಗಳಂದು ಹಿಂದಣೂರಿಂದ ಕೆಲಮಂದಿ ಶಿಷ್ಯರ ಜೊತೆಗೆ

ಈ ಊರ ಕುರಿತು ಹೊರಟರು. ಬೇಸಗೆಯ ದಿವಸ;
ಜೋಡೆತ್ತು ಗಾಡಿಯಲಿ ಕುಳಿತಿಹರು. ಈ ಊರು
ಇನ್ನಷ್ಟುದೂರ ಇರುವಂತೆ ಇವರಿಗೆ ಮುಂದೆ
ಓಲಗದ ಸನ್ನಾಹ ಮಾಡಿಹುದು ಕಂಡಿತು.
ಸಾಧುಗಳು ಇಂತ ವಿಭವಕೆ ಒಪ್ಪುವವರಲ್ಲ.
ಎಲ್ಲರೂ ಇದನು ಬಲ್ಲರು. ಆದರಾಸಲಕೆ
ಗೋಂದಾವಲೀ ಮಹಾರಾಜರೋಲಗದೊಡನೆ
ಬಿಜಗೆಯ್ದು ಶೇಷಗುರು ತೀರ ನಿರ್ವಿಭವದಲಿ
ಊರ ಹೊಗುವುದು ತಮಗೆ ಒಳಿತಲ್ಲವೆಂದು ಜನ
ಮಂಗಳದ್ರವ್ಯ ವಾದ್ಯಗಳನೇರ್ಪಡಿಸಿತ್ತು.
ಸಾಧುಗಳು ದೂರದಿಂದಲೆ ಇದನು ನೋಡಿದರು;
ಗಾಡಿಯನು ಅಲ್ಲಿಯೇ ನಿಲಿಸಿ, ಅದರಿಂದಿಳಿದು,
ನೀವು ನಡೆಯಿರಿ ಬಂದೆ, ಎಂದು ಉಳಿದೆಲ್ಲರನು
ಮುಂದೆಕಳುಹಿದರು; ಕೈಕಾಲುತೊಳೆವುದಕೇನೊ
ಎಂಬಂತೆ ಎಡಕೆ ಹೊರಟರು; ಸುತ್ತುದಾರಿಯಲಿ
ಊರಸೇರಿದುದೆ ತಮಗೌತಣವ ನೀಡಿದ್ದ
ಹಿರಿಯುವರ ಮನೆಯಾವುದೆಂದು ಮಂದಿಯ ಕೇಳಿ
ಅಲ್ಲಿ ಹೋದರು. ಮನೆಯ ಕೈಸಾಲೆಯಲಿ ನಿಂತು
ಮನೆಯುವರು ಯಾರೊ ಕಂಡೊಡನೆ, ಸ್ವಾಮಿಾ, ಇಲ್ಲೆ
ಅಲ್ಲವೇ ಸಾಧುಗಳ ಬೀಡಾರ, ಎಂದರು.
ಅಹುದೆನಲು ಹಾಸಿದ್ದ ಒಂದು ಚಾಪೆಯ ಮೇಲೆ
ಕುಳಿತು ಭಜನೆಯ ಹಾಡು ಒಂದ ಹಾಡುತಲಿಹರು.
ಇವರ ಆ ಮೊದಲೆ ನೋಡಿದ್ದ ಭಕ್ತರೊಳೊಬ್ಬ
ಬಂದು, ಗುರುವನು ಕಂಡು ಅಡಿಗೆರಗಿ, "ಎಲ್ಲರೂ
ಊರಮುಂಗಡೆ ತಮ್ಮ ಬರವಕಾಯುತಲಿಹರು,
ಯಾವ ಕಡೆಯಿಂದ ಬಿಜಮಾಡೋಣವಾಯಿತೋ?"
ಎಂದುಸುರಿದನು. ಸಾಧು "ಪಡು ಬಾಗಿಲಲಿ ಹಾದು

ಬಂದುದಾಯಿತು. ಹೋಗಿ, ಕಾದಿರುವವಮಂದಿಯನು
ಹಿಂದಿರುಗ ಹೇಳಿ" ಎಂದರು. ಅಲ್ಲಿ ಗಾಡಿಯಲಿ
ಸಾಧುಗಳ ಇದಿರುನೋಡಿದ ಮಂದಿ, ಬರಿಗಾಡಿ
ಬರಲು, ಸಾಧುಗಳು ಶೌಚವ ಮುಗಿಸಿಕೊಂಡವರು
ಬೇಗನೆಯೆ ಹಿಂದೆ ಐತಹರೆಂದು ಕಾದಿಹರು.
ಅನಿತರಲಿ ಊರಿಂದ ಈ ಭಕ್ತ ಬಂದವನೆ
ಗುರುಗಳಾಗಳೆ ಮನೆಯ ಸೇರಿದರು ಎಂದನು.
ಇಂತು ಮುಗಿಯಿತು, ಗುರುಗಳನು ಇದಿರುಗೊಳಬೇಕು,
ವಿಭವದಲಿ ಬಿಜಗೆಯ್ಸಬೇಕು ಎಂದವರಾಸೆ.
ನಮ್ಮ ಆಸೆಯನಿಂತು ವಿಫಲಮಾಡಿದಿರೆಂದು
ಮಂದಿ ಕೊರಗಲು ಸಾಧು, "ಮಹರಾಜ್ ಈ ಕಿವಿಗೆ,
ಊರಸೇರುವ ಹೊತ್ತು ಓಲಗದ ದನಿಬೇಕು
ಎಂಬಾಸೆ ಇಲ್ಲ. ಸಂತಸದ ಮುಖವನು ನೋಡಿ
ಸಂತೋಷ ಪಡುವವರು ನಾವು. ದಿನದಿರವನೇ
ಹಸನು ಮಾಡುವುದೆಂತು, ಅದನು ಕಲಿಯುತಲಿಹೆವು.
ದೇವರರ್ಚನೆ ವೇಳೆ ಓಲಗವ ಮಾಡಿಸಿರಿ,"
ಎಂದು ನಗೆಯಲಿ ಸಮಾಧಾನವನು ಹೇಳಿದರು.
ಮಾರನೆಯದಿವಸ ಗೋಂದಾವಲಿಯ ಗುರುವರರು
ಎಲ್ಲ ವಿಭವವ ಕೂಡಿ ಬಂದುದನು ಶಿಷ್ಯರಲಿ
ಒಬ್ಬಾತ ಬಿನ್ನವಿಸೆ, ಸಾಧುಗಳು "ತಪದಿಂದ
ಬಹು ಬಲವ ಗಳಿಸಿ ಬಹು ಬಲವ ವಿನಿಯೋಗಿಸುತ
ಮಹಿತರಾದವರು, ಭಾಗ್ಯವ ನೀಡುವಂಥವರು,
ಇಂಥ ವೈಭವದಿಂದ ಬರಬಹುದು. ದಿನದಿನದ
ಬಡತನದಲೇ ಬಾಳ ಹಸನುಮಾಡೆನ್ನುವರು
ಜನಕೆ ವೆಚ್ಚವ ಕಲಿಸಬಹುದೆ?" ಎಂದರು. ಸಂಜೆ
ಸದ್ಗುರುಗಳದು ಮಹಾರಾಜರದು ದರ್ಶನ
ನಡೆಯಿತಪ್ಪದು. ಸಾಧುಗಳು ಮಹಾರಾಜರಿಗೆ

ದೂರದಿಂದಲೆ ಕೈಯುಮುಗಿದೆತ್ತಿ ಮುಂಬರಿದು
ಅಡ್ಡಬಿದ್ದರು. ಇದನು ಕಂಡು ಅವರೂ ಕೂಡ
ನೆಲಮುಟ್ಟಿ ಪ್ರಣತಿಯನು ಗೆಯ್ದು, ಇವರನು ಹಿಡಿದು
ಅಪ್ಪಿಕೊಂಡರು. ಸ್ವಲ್ಪಹೊತ್ತು ವಿಶ್ವಾಸದಲಿ
ಮಾತುಕತೆ ನಡೆದಮೇಲಕೆ ಗುರುಗಳವರವರ
ಬೀಡಾರವನು ಸಾರಿದರು. ಇದರ ಪರಿಗಳನು
ಕಂಡವರು ಗೋಂದಾವಲೀ ಮಹಾರಾಜರನು
ಇಂತು ಬಾಗಿಸಿಕೊಂಡವರು ಸಾಧುಗಳು ಹೊರತು
ಬೇರೊಬ್ಬರಿಲ್ಲವೆಂದರು. ಸಾಧುಗಳ ಕುರಿತು
ಆ ಗುರು ಮಹಾಶಯರು, "ಒಂದು ದಿವ್ಯ ಜ್ಯೋತಿ
ಕಾಜಿನೊಳಗಿದ್ದು ಬೆಳಗುವರೀತಿ ಇವರಾತ್ಮ
ದೇಹದೊಳಗಿಂದ ಬೆಳಗಿದೆ" ಎಂದರಂತೆ. ಗುರು
ಅವರ ವಿಷಯದಲಿ, "ಉಗಿಬಂಡಿ ಗಾಡಿಯಸಾಲ
ಸೆಳೆವಂತೆ ಗೊಂದಾವಲೀ ಮಹಾರಾಜರು
ಬಂದ ಎಲ್ಲರನು ನಡೆಸುವ ಶಕ್ತ ಗುರು," ಎಂದು
ಹೇಳಿದರು. ಇವರ ಆ ಸಂದರ್ಶನದ ಕತೆಯ
ಕೇಳುತಿರೆ ನನ್ನಮನಸಿಗೆ, ಹಿರಿಯದೆನ್ನುವುದು
ಬೇರೆ ಬೇರೆಯರೀತಿಯಲಿ ರೂಪುಗೊಳ್ಳುವುದು,
ಅದನು ಎಲ್ಲಾವೇಳೆ ಹಿರಿದೆಂದು ಅರಿವುದಕೆ
ನಾವು ಕಾಣೆವು, ಆದರೂ ತನ್ನ ತಾನು ಅದು
ಎಂಥ ವೇಷದಲಾದರೂ ಗುರುತು ಹಿಡಿಯುವುದು,
ಎಂದು ತೋರಿತು.

ಸಾಧುಗಳು ದೇಹವನು ಬಿಟ್ಟ
ಸಂಗತಿಯ ತಿಳಿಸಿ ಈ ಮಾತ ಮುಗಿಸುವೆನು. ಜನ,
ಬಾಳು ಒಳಿತೆಂಬುದನು ಸಾವಿನಲಿ ನೋಡೆಂದು,
ಹೇಳುವುದು ಉಂಟು. ಸಾಧುಗಳು ಒಡಲನು ಕುರಿತು
ಎಂದೆ ಆಗಲಿ ಬಹಳ ಮಮತೆ ತೋರಿದುದಿಲ್ಲ.

ಆದಕುರಿತು ಮಾತಾಡುವಂದವರು, ಈ ಘಟಕೆ
ಇಂತು ಅಂತೆನ್ನುವರು. ಎಂದಿದ್ದರೂ ಘಟ
ಒಡೆಯಲಿಹ ವಸ್ತು. ವ್ರತ ಉಪವಾಸ ನಿಯಮದಲಿ
ಅತಿಥಿ ಅಭ್ಯಾಗತರ ಸೇವೆಯಲಿ ಇವರೊಡಲು
ತುಂಬ ಜರ್ಝರಿತವಾಗಿತ್ತು. ಆರೋಗ್ಯದಲಿ
ಕೊನೆಯುಸಲ ನಾನವರ ಕಂಡಂದು ಸಾಧುಗಳು
"ವೆಂಕೋಬರಾವ್, ಇನ್ನು ಈ ದೇಹ ಬಹಳ ದಿನ
ನಡೆಯಲಾರದು ಕಂಡಿರಾ. ನೀವು ಈ ಸಾರಿ
ಇದುವರೆಗೆ ಬಂದಂತೆ ಒಂದು ವರ್ಷದ ದಿವಸ
ಕಳೆದು ಬರಬೇಡಿ. ತಿಂಗಳು ಎರಡು ತಿಂಗಳಿಗೆ
ಬರುವುದಾಯಿತೆ ಬನ್ನಿರಿ," ಎಂದು ತಿಳಿಸಿದರು.
ಆರೋಗ್ಯವಾಗಿರುತ ಸಾಧುಗಳು ಏಕಿಂತು
ನುಡಿಯುತಿರುವರು ಎಂದು ನನ್ನೆಣಿಕೆ. ಆದರೂ
ಉದ್ದೇಶಿಸಿದ್ದ ದಿನಕಿಂತ ನಾಲ್ಕೈದು ದಿನ
ಹೆಚ್ಚಾಗಿ ಒಡನಿದ್ದು ಆವರ ಸಾನ್ನಿಧ್ಯದಲಿ
ತೃಪ್ತಿಗೊಂಡೆನು. ಹೊರಡುವಾ ದಿವಸ ಸಾಧುಗಳು,
"ಊಟಮಾಡದೆ ಹೊರಡುತಿಹಿರಿ, ವೆಂಕೋಬರಾವ್,
ಬಂದೆ," ಎಂದೊಳಗಡೆಗೆ ಹೋಗಿ ಇಷ್ಟರಳಿಟ್ಟು
ಹಾಲಿನಲಿ ಕಲಸಿ ಎಲೆಯಲಿ ಸುತ್ತಿ ಕೈಯಲ್ಲಿ
ಹಿಡಿದು ನನ್ನನು ದಾರಿಬಿಡುವುದಕೆ ಬಂದರು.
ಏನು ಹಗುರದ ಮನಸು ಆ ಮನಸು! ಆ ಆತ್ಮ
ಏನು ಹಗುರದ ಆತ್ಮ! ಬ್ರಹ್ಮಣಿಷ್ಠಿತ ಎಂದು
ಗೀತೆಯಲಿ ವರ್ಣಿಸಿದ ಪರಿ ಯಾವುದೆನೆ ಅವರ
ನೋಡ ಬೇಕಿತ್ತು. ಆ ಉದಯ, ದಾರಿಯ ಮೇಲೆ,
ಹಕ್ಕಿ ಇಂಚರಗೆಯ್ಯುತಿಹವು. ಗುರು ಎಳೆಹಸುಳೆ
ದನಿಗೆ ಕಿವಿಗೊಡುವಂತೆ ಅದ ಕೇಳಿ ನಲಿದರು;
ಮರವ ತುಂಬಿದ ಹಸುರ ನೋಡಿದರು ನಲಿದರು;

ಹಾದಿಯಲಿ ಹಳ್ಳಬಂದಿತೆ ಅದರ ತಿಳಿ ನೀರ
ನೋಡಿ ತಣಿದರು. ಹಳ್ಳದಂಚಿನಲಿ ನಿಂತವರು
"ಕಳುಹಿಕೊಡುವವರು ನೀರನು ದಾಟುವುದು ತಪ್ಪು,
ವೆಂಕೋಬರಾವ್, ಹೋಗಿಬನ್ನಿ, ಇಕೊ ಈ ಸ್ವಲ್ಪ
ಅರಳಿಟ್ಟು ಕೈಗಾವಲಾಗಿರಲಿ, ಬರುವುದಕೆ
ಅನುಕೂಲವಾಯಿತೇ ಒಂದೆರಡು ತಿಂಗಳಲಿ
ಮತ್ತೆ ಬನ್ನಿರಿ," ಎಂದು ನುಡಿದರು. ನಾನವರ
ಪಾದವನು ಮುಟ್ಟಿ ಮಂಡಿಯನೂರಿ ನಮಿಸಿದೆನು.
ಸಾಧು ಹರಸಿದರು; ಕಣ್ಣಲಿ ತೇವ; ಒಳ್ಳಿತು
ಹೋಗಿ ಬನ್ನಿರಿ, ಎಂದು ಆಣತಿಯ ಮಾಡಿದರು.
ಮುಂದರಿದು ನಾ ನಡೆಯುತಿರೆ ತಾವು ಅಲ್ಲಿಯೇ
ಒಂದು ಕಲ್ಲಿನ ಮೇಲೆ ಕುಳಿತು ಕಾಣುವ ತನಕ
ನನ್ನ ನೋಡುತಲೆ ಇದ್ದರು. ಕಣ್ಗೆ ಮರೆಯಾದ
ಎಷ್ಟು ಹೊತ್ತಿನಮೇಲೆ ಆಶ್ರಮಕೆ ತೆರಳಿದರೊ.
ಏನಿವರ ಈ ಪ್ರೀತಿ! ಹೆತ್ತ ತಾಯಂದದಲಿ
ಜೊತೆಗೆ ಬೆಳೆದಕ್ಕನಂದದಲಿ ಅಕ್ಕರದಿಂದ
ಇವರೆನ್ನ ಬಾಳ ಬೆಳಗಿದರು. ಅಂದಿನ ಮೊದಲು
ಎರಡು ತಿಂಗಳು ಕಳೆದು ಗುರುಗಳಾಣತಿಯಂತೆ
ಆಶ್ರಮಕೆ ಹೋಗುವ ಎಂದು ನಾ ಎಣಿಸಿರಲು
ಪತ್ರ ಬಂದಿತು, ಅವರ ಆರೋಗ್ಯ ಚೆನ್ನಿಲ್ಲ,
ಅವರು ನನ್ನನು ನೆನೆದರೆಂದು. ಉದ್ಯೋಗದಲಿ
ನನಗೆ ಹಿರಿಯವರ ಆಣತಿ ಪಡೆದು ಮರುದಿನವೆ
ಆಶ್ರಮಕೆ ಸಾರಿದೆನು. ಸಾಧುಗಳು ಯಾವುದೋ
ಬೇನೆಯಲಿ ಮಲಗಿಹರು. ಕ್ರೂರವಾಗಿದೆ ರೋಗ.
ಬಳಿಯ ವೈದ್ಯರು ತೋಚಿದೌಷಧಗಳನು ಕೊಟ್ಟು
ತಮಗೆ ತೋರಿದ ಚಿಕಿತ್ಸೆಯನು ಮಾಡಿದರಂತೆ.
ಅವರಿಗದು ಬಾಗಲಿಲ್ಲ. ಆಶ್ರಮದ ಮುಂದಿ

ಬೆಂಗಳೂರಿಗೆ ಹಿರಿಯ ವೈದ್ಯರೊಬ್ಬರ ಕರೆದು
ತಂತಿ ಕೊಡಬೇಕು; ಸಾಧುಗಳು ಒಲ್ಲರು ಇದನು.
ಈ ಚರ್ಚೆ ನಡೆಯುತಿರೆ ನಾನಲ್ಲಿ ಸೇರಿದೆನು.
ಭಗವಾನರೆನಗೆ ಸಂಗತಿಯ ವಿವರಿಸಿ, "ನೀವು
ಗುರುಗಳಿಗೆ ಹೇಳಿ; ವೈದ್ಯರ ಕರೆಯಿಸುವ; ನಮ್ಮ
ಬೇಡಿಕೆಗೆ ಅವರು ಒಪ್ಪರು" ಎಂದು ಉಸುರಿದರು.
ನಾನು ಗುರುಗಳಿಗೆ ಮಣಿದೆನು. ಪಕ್ಕದಲಿ ಕುಳಿತು
ಆರೋಗ್ಯವನು ಕೇಳಿ ಒಂದೆರಡು ಮಾತಾಡಿ
ಆ ಮೇಲೆ ಬೆಂಗಳೂರಿಂದ ವೈದ್ಯರ ಕರೆವ
ಸಂಗತಿಯ ಮೆಲ್ಲನೆತ್ತಿದೆನು. ಗುರುಗಳು "ಮಹರಾಜ್
ಬಹುದಿನದ ಬಟ್ಟೆ, ಉಟ್ಟುಟ್ಟು ಒಗೆದೊಗೆದು, ಇದು
ಹಳದಾಗಿ ಹೋಗಿಹುದು. ಇನ್ನು ಹರಿವುದು ಸಿದ್ಧ.
ಇನ್ನಷ್ಟು ಸತ್ವವಿದ್ದಿತೆ, ಎಲ್ಲೊ ಇಲ್ಲೊಂದು
ಅಲ್ಲೊಂದು ಸ್ವಲ್ಪ ಹರಿದಿರೆ, ತೇಪೆ ಹಾಕುವುದು
ಸರಿಯಾಗಬಹುದು. ಎಲ್ಲೆಡೆಯು ಹರಿವಂದದಲಿ
ಹಳತಾಗಿ ಚಿಂದಿಯಾಗುವೆನೆಂಬ ಬಟ್ಟೆಯನು
ರಪ್ಪಿನಲಿ ತೇಪೆಯಲಿ ಸರಿಮಾಡಲಾಗುವುದೆ ?
ಏಕೆ ಈ ಮರುಳು ? ಬೇಡಿರಿ ಎಂದೆ. ಈ ಮಾತು
ಭಗವಾನರಿಗೆ ಒಪ್ಪಲಿಲ್ಲ; ವೈದ್ಯರ ಕರೆದು
ಔಷಧವ ಕೊಡಿಸಿದರು. ಹಾವೇರಿ ನಮ್ಮ ಈ
ಆಶ್ರಮಕೆ ಬಹುದೂರವಿಲ್ಲ. ಆ ವೈದ್ಯರೂ
ಹಣವ ಬೇಡದೆ ನಮ್ಮ ಮೇಲೆ ಪ್ರೀತಿಯನಿಟ್ಟು,
ನಾವು ಏನೋ ದೊಡ್ಡ ಮಂದಿ ಎಂಬಂತೆ, ದಿನ
ಬೆಳಗಾಗ ಬಂದು ಶ್ರದ್ಧೆಯಲಿ ಭಕ್ತಿಯಲಿ ಈ
ಘಟವನುಳಿಸುವ ಯತ್ನ ಮಾಡುತಿರುವರು. ಇಷ್ಟು
ಗೆಯ್ದುದೇ ತಪ್ಪು. ಇನ್ನೇಕೆ ಇವರಾಡುತಿಹ
ಬೆಂಗಳೂರಿನ ವೈದ್ಯ? ಅದರಿಂದ ಅಹುದೇನು ?

ಅದಕೆಷ್ಟು ವೆಚ್ಚ ? ಅದನೆಲ್ಲಿಂದ ತರಬೇಕು ?
ಈ ಮಾತು ಬೇಡ," ಎಂದರು. ನಾನು, "ಗುರುಗಳಿಗೆ
ತಿಳಿಯದಿಹ ಸಂಗತಿಯೆ ? ನಾನೊ ಭಗವಾನರೊ
ಬೆಂಗಳೂರಿಂದ ವೈದ್ಯರ ಕರೆಸಬೇಕೆಂದು
ಎಣಿಸಿದವರಲ್ಲ. ದಿನ ದಿನ ಈಗ ನೋಡುತಿಹ
ವೈದ್ಯರೇ ಇದ ಸೂಚಿಸಿದರಂತೆ. ವ್ಯಾಧಿಯಲಿ
ತಮಗೆ ತಿಳಿಯದ ಕೆಲವು ಲಕ್ಷಣಗಳಿವೆ, ಇವನು
ತೀರ ಬಲ್ಲವರು ನೋಡುವುದು ಒಳ್ಳಿತು, ಎಂದು
ವೈದ್ಯರೇ ಇಂತು ಹೇಳಿರಲು ಹತ್ತಿರದ ಜನ
ಬೇಡವೆನಲೇ ?" ಎಂದೆ. ಸಾಧುಗಳು, "ಮಹರಾಜ್
ರೋಗದಲಿ ಲಕ್ಷಣವೆ ? ನಗಬೇಕು ಈ ನುಡಿಗೆ.
ಧರ್ಮದೇವತೆ ಕೋಣವನು ಏರಿ ಬರಲಿಲ್ಲ,
ಪಂಚಕಲ್ಯಾಣಿ ಕುದುರೆಯನೇರಿ ಬಂದಿಹನೆ ?
ವೈದ್ಯರಿಗೆ ಗುರುತು ಹತ್ತದೆ ಹೋಯ್ತೊ? ರಾಯರೇ
ಇಂಥ ಲಕ್ಷಣದ ವಾಹನವನೇರಿದ ದೈವ
ಬಂದ ಕೆಲಸವ ಅರ್ಧದಲಿ ಬಿಟ್ಟು ಮರಳುವುದೆ ?
ತಂತಿಯಲಿ ಬೆಂಗಳೂರಿನ ವೈದ್ಯರೈತರಲು
ಇದು ಶಮನವಾಗುವುದೆ ? ಇದಕೆಲ್ಲ ಹಣವೆಲ್ಲಿ ?
ಎಲ್ಲಿಂದ ತರಬೇಕು ? ನೋಡಿ, ವೆಂಕೋಬರಾವ್,
ಕಾಗೆಯನು ಕೊಂದು ಹದ್ದಿಗೆ ಹಾಕುವರು ನಾವು;
ದೈವದಾರಾಧನೆಯ ಹೆಸರಿನಲಿ ನಮ್ಮಿಂದ
ಈಗಳೇ ಸಾಕಷ್ಟು ಕಷ್ಟವಾಗಿದೆ ಜನಕೆ ;
ಇನ್ನು ಈ ಒಡೆದಿರುವ ಘಟಕೆ ಮಣ್ಣನು ಮೆತ್ತಿ
ಸರಿಮಾಡುವಾಸೆಯಲಿ ಇನ್ನೆಷ್ಟು ಕಷ್ಟವನು
ಕೊಡಬಹುದು ನಾವು ಮುಂದಿಗೆ? ಅವರು ಆ ಕಷ್ಟ
ಎಷ್ಟು ಸೈರಿಸಬಹುದು ಹೇಳಿ," ಎಂದರು. ನಾನು
ಆಗ ಸುಮ್ಮನೆ ಇದ್ದು ಮಧ್ಯಾಹ್ನ ಮತ್ತೊಮ್ಮೆ

ವೈದ್ಯರೈದಿದವೇಳೆ ಅವರಿಂದಲೇ ಇದನು
ಸಾಧುಗಳಿಗರಿಸಿದೆನು. ಹತ್ತಿರದ ಜನವೆಲ್ಲ,
ಕಣ್ಣಿನಲಿ ನೀರು ಕೂಡುತಲಿರಲು, ಸಾಧುಗಳ
ಒಪ್ಪಿಗೆಯ ಬಯಸಿ ಕಾತರರಾಗಿ ನಿಂತಿಹರು.
ವೈದ್ಯರಾಡಿದ ಮಾತ ಕೇಳಿ ಗುರುಗಳು ಒಮ್ಮೆ
ಸುತ್ತ ನಿಂತವರನೀಕ್ಷಿಸಿ, ಒಂದು ಕ್ಷಣ ಹೊತ್ತು
ಅಂತೆ ಸುಮ್ಮನೆ ಇದ್ದು, "ವೆಂಕೋಬರಾವ್, ವೈದ್ಯೋ
ನಾರಾಯಣೋ ಹರಿಃ, ಎಂದಿಹರು ಬಲ್ಲವರು ;
ನಮ್ಮ ವೈದ್ಯರು ಐದು ಮೈಲು ದಿನವೂ ಬಂದು
ಇದನು ನಿಜವೆನಿಸಿಹರು. ರೋಗದೊಳಗಿಹ ಜನಕೆ
ವೈದ್ಯರಾಡಿದ ಮಾತು ಪಥ್ಯ. ಔಷಧದಿಂದ
ಗುಣಮಾಡ ನೋಡಿದರು ; ಔಷಧವನುಂಡಾಯ್ತು ;
ಬೆಂಗಳೂರಿನ ವೈದ್ಯರನು ಕರೆಸಿ ಎನುತಿಹೆರು ;
ಕರೆಸಿ, ಮಹರಾಜ್ ; ಬಲ್ಲವರು ಹೇಳಿದಂತೆಯೇ
ಎಲ್ಲ ನಡೆಯಲಿ. ನಡೆಯಲಿಲ್ಲ; ನಡೆದಿರೆ ಎಲ್ಲ
ಒಳಿತಾಗುತಿತ್ತು ಎನ್ನುವ ಕೊರತೆ ಮನಸಿನಲಿ
ಕೊರೆಯುವುದು ಬೇಡ," ಎಂದರು. ಒಡನೆಯೇ ನಾವು
ತಂತಿಯನು ಕಳುಹಿದೆವು. ಮೂರನೆಯ ದಿವಸವೇ
ಡಾಕ್ಟರಚ್ಯುತರಾಯರೈತಂದು ಗುರುಗಳನು
ನೋಡಿದರು. ಏನೊ ಔಷಧ ಪಥ್ಯವನು ಹೇಳಿ
ಮರಳಿದರು. ರೈಲನೇರುವ ಮುನ್ನ ನನ್ನೊಡನೆ,
"ವ್ಯಾಧಿಯೇನೋ ಕ್ರೂರ. ಆದರೂ ಔಷಧವ
ಕೊಡಬಹುದು ; ಪಥ್ಯದಲಿ ಇಡಬಹುದು. ಆದರಿದು
ರೋಗದಷ್ಟೇ ಅಲ್ಲ ; ನಿಮ್ಮ ಈ ಸಾಧುಗಳು
ಸಾವನೇ ಬಯಸಿಹರು ; ಇಂಥವರನುಳಿಸುವುದು
ತಾಯಕೈಯಿಂದ ಮಗುವನು ಕಿತ್ತು ತರುವಂತೆ ;
ಕಿತ್ತು ತರುವುದು ಕಷ್ಟ ; ತಂದರೂ ಮತ್ತೆ ಅದು

ತಾಯನೇ ಸಾರುವುದು," ಎಂದು ನುಡಿದರು. ನನಗೆ, ಎಲ, ಇವರ ಉಪಮಾನ ಎನಿತು ಚೆನ್ನಾಗಿಹುದು, ಸಾಧುಗಳು ಹೇಳಿದಂತಿಹುದು, ಎನಿಸಿತು. ಅದೇ ಕ್ಷಣಕೆ ಡಾಕ್ಟರು, "ಇದನು ನಾನು ಹೇಳುತಲಿಲ್ಲ, ಗುರುಗಳೇ ಹೇಳಿದರು; ನೀವೆಲ್ಲ ದೂರದಲಿ ನಿಂತಿದ್ದ ವೇಳೆ ಮೆಲ್ಲನೆ ನನಗೆ, 'ವೈದ್ಯೋ ನಾರಾಯಣೋ ಹರಿಃ, ಮಹರಾಜ್, ಬಲ್ಲವರು ಬಂದಿಹಿರಿ, ಒಳಿತಾದ ಔಷಧವ ನೀಡುವಿರಿ, ಆದರೇತರದು ಮಹರಾಜ್, ದಾದಿ ಬೀದಿಯಲಿ ಮಗುವನಾಡಿಸುತಿರಲು ತಾಯಾದವಳು ಅದಕೆ ಹಾಲು ಕುಡಿಸುವ ಹೊತ್ತು ಬಂತೆಂದು ಬಾಗಿಲಿಗೆ ಬಂದು ಕೈಚಾಚಿಹಳು, ಮಗುವ ನಾ ಕೊಡೆನೆಂದು ದಾದಿ ಹೇಳುವಳೆ? ಮಗು ಹೋಗದಿರುವುದೆ? ತಾಯಿ ಅದ ಕೊಂಕುಳಿಗೆ ಸೆಳೆದುಕೊಳ್ಳದಿರುವಳೆ? ಮಹರಾಜ್,' ಎಂದು ಹೇಳಿದರು" ಎಂದರು.

ಅಂದು ಸಂಜೆಯಲಿ ನಾವೆಲ್ಲ ಬಳಿಯೊಳಿರೆ ಸಾಧುಗಳು ಇಂದು ತಿಥಿ ಏನು ಎಂದಿರಿ ಎಂದು ಕೇಳಿದರು. ಆ ದಿವಸ ಪಂಚಮಿ ತಿಥಿ; ಮಾರನೆಯ ದಿವಸ ಷಷ್ಠಿ; ಆ ಮಾರನೆಯ ದಿವಸ ಸಪ್ತಮಿ. ಇದನು ತಿಳಿದವರು ಸಾಧುಗಳು, ಭಗವಾನರನು ಕರೆದು, "ಮನಸಿನಲಿ ಕಿವಿತುಂಬ ಹರಿಕೀರ್ತನವ ಕೇಳುವೆನೆ ಎಂದು ಆಶೆಯಾಗುತಲಿಹುದು; ಈ ರಾತ್ರಿ ಎಲ್ಲರೂ ಸೇರಿ ಕೀರ್ತನ ಮೊದಲು ಮಾಡಿ. ನಾಳೆಯ ದಿವಸ, ನಾಡಿದ್ದು, ಈ ಕಿವಿಗೆ, ಸಂತತದ ಧಾರೆಯಲಿ ಹರಿನಾಮ ಸುರಿದು ಈ ಮನವ ತುಂಬಲಿ," ಎಂದು ಆಜ್ಞೆ ಮಾಡಿದರು. ಕೀರ್ತನ ಅಂದು ಮೊದಲಾಯ್ತು.

ಆ ರಾತ್ರಿ ಎಲ್ಲ, ಮಾರನೆಯ ಹಗಲಿರುಳೆಲ್ಲ,
ಮೂರನೆಯ ಬೆಳಗೆಲ್ಲ, ಬಿಡದೆ ಸಾಗಿತು. ನಮ್ಮ
ಸಾಧುಗಳು ಮೆಚ್ಚಿದ್ದ ಹರಿಕೀರ್ತನದ ಮಾರ್ಗ
ತಿಳಿಯೆ ತಕ್ಕುದು. ತುಂಬ ಜನ ಒಂದೆಸಲ ಕೂಗಿ
ಗೊಂದಲವಮಾಡಲೊಪ್ಪರು ಇವರು. "ಮಹರಾಜ್,
ತಾನೆನ್ನುವುದು ಮರೆತು ದೈವವೆನುವುದು ನಿಲಲು
ಮುಕ್ತಿ ಮುಟ್ಟಿತು ಕಂಡಿರಾ. ತನ್ನ ಮರೆಯುವುದು
ಹಲವು ರೀತಿಯೊಳಾಗಬಹುದು. ಗದ್ದಲ ಒಂದು,
ಸಿದ್ಧರಸ ಇನ್ನೊಂದು, ರೀತಿ; ಹರಿಪಾದವನೆ
ಗುರಿ ಮಾಡಿಕೊಂಡು ಮನವನು ಅದರ ಮಧ್ಯದಲಿ
ನಿಲಿಸುವುದು ಬೇರೊಂದು ರೀತಿ. ಒಡಲಿನ ಕಾಡು,
ಮನದ ಕಲ್ಮುಳ್ಳ ನೆಲ, ಆಸೆಗಳ ಮೆಳೆ; ಇಲ್ಲಿ
ಜೀವ ಸೇರೆಯ ನೀರು; ಸಾಗರವ ಸೇರುವುದು
ಎಂತು ಅದು? ಭಕ್ತ ಜನ ರಾಮ ಶಂಕರ ಎಂದು
ಕೂಗಿತೇ, ಹರಿನಾಮ ಇಲ್ಲಿ ಮನದಲಿ ಒಂದು
ಕಾಲುವೆಯ ಮಾಡುವುದು; ಜೀವ ಅದರಲಿ ಹರಿದು
ಹಿರಿಯ ಹಳ್ಳವ ಮುಟ್ಟಿ ಸಾಗರವ ಸಾರುವುದು"
ಎಂದು ಎಂದಾದರೂ ನುಡಿಯುವರು. ಆ ಎರಡು
ದಿನದ ಹರಿನಾಮ ಸಂಕೀರ್ತನದ ಶಾಂತಿಯಲಿ
ಸಾಧುಗಳು ಮೆಯ್ಯ ಬೇನೆಯನು ಮರೆತಿರಬೇಕು.
ಅವರ ಮುಖದಲಿ ಎಂದಿನಂದದ ಪ್ರಸನ್ನತೆಯು
ಬೆಳಕು ಮೂಡಿತು. ಎಂದಿನಂತೆ ಸ್ನಾನಾಹ್ನಿಕವ
ನಡಸಿ, ಹಾಸಿಗೆಯಿಂದ ಕೀರ್ತನವ ಕೇಳುತ್ತ,
ಕೆಲಹೊತ್ತು ನಿದ್ರೆಯೊಳಗಾಳುತ್ತ ಎರಡಿರುಳ
ಸುಖದಿ ಕಳೆದರು ಅವರು. ಸಪ್ತಮಿಯ ಉದಯದಲಿ
"ಆರಾಧನೆಯನು ಮುಂದಾಗಿ ಮುಗಿಸಿರಿ" ಎಂದು
ಆಣತಿಯ ಮಾಡಿ, ಕೀರ್ತನ ನಡೆಯುತಿರೆ ಅದನು

ಕೇಳುತ್ತ, ಕಣ್ಮುಚ್ಚಿ ಮಲಗಿದರು. ನಾನಲ್ಲೆ
ಹತ್ತಿರವೆ ಕುಳಿತಿಹೆನು. ಭಕ್ತಜನ ಭೋಜನಕೆ
ಅಲ್ಲಿ ಕುಳಿತರು; ಇಲ್ಲಿ ಸಾಧುಗಳು ಕಣ್ತೆರೆದು
ತೀರ್ಥವನು ಸ್ವೀಕರಿಸಿ, ಐದುದ್ಧರಣೆ ಹಾಲ
ಮೆಲ್ಲನೆಯೆ ಸವಿದು ಮತ್ತೊಮ್ಮೆ ಮಲಗುವರಂತೆ
ಆ ಕಡೆಗೆ ತಿರುಗಿ ಕಣ್ಮುಚ್ಚಿದರು. ಜನವೆಲ್ಲ
ಊಟ ಉಪಚಾರ ಮುಗಿದೊಡನೆ ಗುರುಗಳನೊಮ್ಮೆ
ನೋಡಿ ಹೋಗುವ ಎಂದು ಬಳಿಗೆ ಬಂದರು. ನಾನು
ಇಂತೊಂದು ವೇಳೆ ಗುರುಗಳ ಮುಖವ ದಿಟ್ಟಿಸಲು
ಏನೊ ತೋರಿತು ಮನಕೆ. ಅಡಿಗಳನು ಮುಟ್ಟಿದೆನು ;
ತಣ್ಣಗಿದ್ದವು. ಮೂಗಿನೆಡೆ ಕೈಯನಿಕ್ಕಿದೆನು ;
ಉಸಿರಿಲ್ಲ. ಸಾಧುಗಳು ಮರ್ತ್ಯ ದೇಹವನುಳಿದು
ನಿರ್ವಿಕಲ್ಪದ ದಿವ್ಯಧಾಮದೆಡೆಗೇರಿಹುದು
ತಿಳಿದು ಭಗವಾನರಿಗೆ ಅರಿಸಿದೆನು. ಸಾಧುಗಳ
ಇಚ್ಛೆ ಎಂತಿತ್ತು ಅಂತೆಲ್ಲ ಕರ್ಮವನವರು
ನಡಸಿದರು. ಮಂದಿಯೆಲ್ಲವು, ತಮ್ಮ ಜೀವನವ
ಹಸುರಂತೆ ಹಾಲಂತೆ ಹುಣ್ಣಿಮೆಯ ಬೆಳಕಂತೆ
ತಾಯ ಕನಿಕರದಂತೆ ತಂಪೆರೆದು ಹೊರೆದಿದ್ದ
ನುಡಿಯೆಬಾರದ ಚೆಂದದೊಂದು ದಿವ್ಯಾನಂದ
ಮೂರ್ತಿಯಾಗಿದ್ದು ಮರೆಯಾದುದನು ತಿಳಿದರು.

* * * *

ಇಂತು ವೆಂಕಪ್ಪ ತಮ್ಮನುಭವದ ಸಂಗತಿಯ
ಕತೆಯಂತೆ ಹೇಳಿ ಮುಗಿಸಿರೆ ರಾಮಕೃಷ್ಣಯ್ಯ
ತಮ್ಮ ಸರತಿಯಲಿ ಟೀಕೆಯನಿಂತು ಉಸುರಿದರು :
"ವೆಂಕಪ್ಪ ಈ ಮುನ್ನ ತಮ್ಮ ಈ ಸಾಧುಗಳ
ಗೆಳೆಯರಿಗೆ ಬಣ್ಣಿಸಿದುದುಂಟು. ಅಂತಹ ವೇಳೆ
ಈ ಗುರುವ ನಡೆನುಡಿಯ ಕುರಿತ ಬೇರೆಯ ಮಾತು
ಇನ್ನಿನಿತ ಕೇಳಿ ಬಲ್ಲೆನು. ಕಾಮನಿದ್ದ ಕಡೆ

ರಾಮುನಿಗೆ ಎಡೆಯಿಲ್ಲ ; ರಾಮುನಿಗೆ ಎಡೆಮಾಡು,
ಕಾಮುನಿಗೆ ಎಡೆಯಿಲ್ಲ ; ಎನ್ನುವುದು ಸಾಧುಗಳ
ಒಂದು ಬೆಡಗಿನ ವಚನ. ಆಶ್ರಮದ ಸೇವಕ
ತರುಣನೊಬ್ಬನಿಗೆ ನಸ್ಯದ ಚಪಲ. ಹಾಕುವನೆ
ಭಗವಾನರಿಗೆ ಕೋಪ. ಸಾಧುಗಳು ತರುಣನನು
ಒಮ್ಮೊಮ್ಮೆ ಬಳಿಗೆ ಕರೆಯುವರು ; ಅವನಿಗೆ ಇನಿಸು
ನಸ್ಯವನು ಕೊಟ್ಟು, ಹಾಕಿಕೊ ಹೋಗು, ಯಾರಿಗೂ
ಹೇಳದಿರು, ಎನ್ನುವರು. ಆಶ್ರಮಕೆ ಬಂದ ಜನ
ಪೂಜೆ ಭೋಜನ ಮುಗಿದು ಹೊತ್ತು ಕಳೆಯುವುದೆಂತು
ಎಂದು ಬೇಸರದಿ ಕುಳಿತಿರಲು, ರಾಯರೆ, ಏಕೆ,
ತುಸ ಹೊತ್ತು ಚೀಟಾಡಬಾರದೇ ಎನ್ನುವರು ;
ಆಡೆ ಬಳಿಯಲೆ ಕುಳಿತು ನೋಡುವರು ; ಜನ ಇಲ್ಲ,
ತಾವೆ ಅವರೊಡನೆ ಆಡುವರು. ಅತಿ ನಿಯಮದಲಿ
ಬಾಳ ಕಗ್ಗಾಡು ಮಾಡುವುದನಿವರೊಲ್ಲರು.
ಮನುಜ ಆಸೆಯ ದಳವ ಮೆಲುಮೆಲನೆ ಗೆಲಬೇಕು ;
ಹೂ ಬಳ್ಳಿಯನು ಎಂತು ಅಂತು ಮನವನು ಅವನು
ತಿದ್ದಿಕೊಳ್ಳಲು ಬಹುದು, ತಿದ್ದಿಕೊಳ್ಳಲೆ ಬೇಕು ;
ಎಂಬುದನು ಇವರು ತೋರಿದರು. ನಮ್ಮರಿಯ ನಾಡ
ಸಂಸ್ಕೃತಿಯ ಒಂದು ಮುಖ ಅಗಡಿ ಸಾಧುಗಳಲ್ಲಿ
ಚೆಲುವಾಗಿ ರೂಪುಗೊಂಡಿತು ಎಂದು ನನ್ನರಿವು.
ಆದರೂ ಇವರ ಈ ದಾರಿ ತೀರಾಮೆದು
ಎಂದೆನಗೆ ತೋರುವುದು. ಶಿಷ್ಟ ಮುಕ್ತಿಯ ಬೇಡಿ
ಇವರ ಬಳಿ ಸಾರಿದನೆ ಗುರು ಅವನ ಸಲಹಿದರು ;
ಶಿಷ್ಟರಲ್ಲದ ಮಂದಿ ಒಳ್ಳಿತೆಂಬುದ ಬಯಸಿ,
ಇವರು ಗುರು, ಇವರಿಂದ ಬದುಕಿಕೊಳ್ಳುವ, ಎಂದು
ಬಳಿಸಾರುವಂತೆ ಮಾಡರು. ಅಲ್ಪಮತಿ ನನಗೆ
ತೋರಿರುವ ಒಂದು ತೊಡಕಿದು. ಎಂದಮಾತ್ರಕೆ

ಇವರ ಹಿರಿತನಕೆ ಕೊರೆಯಿಲ್ಲ. ಈ ಸೌಜನ್ಯ
ಇನ್ನಷ್ಟು ಜೀವಗಳ ಸಲಹಬಹುದಾಗಿತ್ತೆ
ಎಂದು ವ್ಯಥೆ." ರಾಮಕೃಷ್ಣಯ್ಯ ಟೀಕೆಯ ನಿಲಿಸೆ
ರಾಮು "ನಾಳೆಯ ಕಥೆಯ ಸರತಿ ರಘುನಾಥನದು"
ಎಂದು ಸಾರಿದನು. ರಘುನಾಥ, "ಕತೆಯನು ಹೇಳಿ
ನನಗೆ ವಾಡಿಕೆಯಿಲ್ಲ. ಕತೆ ಒಂದ ಬರೆದಿಹೆನು.
ನಮ್ಮೂರ ಕೆರೆಯ ಕುರಿತೊಂದು ಕತೆ. ಓದುವೆನು"
ಎಂದು ನುಡಿದನು. ಮಾರನೆಯ ಸಂಜೆ ಓದಿದ
ಮುಸಿಲಮ್ಮನನು ಕುರಿತ ಅವನ ಕತೆ ಮುಂದೆ ಇದೆ.

# ಮುಸಿಲಮ್ಮ

(ಬುಕ್ಕರಾಯ ಸಮುದ್ರ ಅನಂತಪುರದಕೆರೆ. ಒಂದುಸಲ ಅದರ ಕಟ್ಟೆ ಒಡೆಯು ವಂತಿರುವಾಗ ಮುಸಿಲಮ್ಮ ತನ್ನ ಜೀವವನ್ನು ಕೊಟ್ಟು ಅದನ್ನು ಉಳಿಸಿದಳು. ದೇವರಗುಡ್ಡ ಕೆರೆಯ ಅಂಚಿನಲ್ಲಿರುವ ಬೆಟ್ಟ. ಪಾಂಡುನದಿಗೆ ಅಡ್ಡಹಾಕಿ ಕೆರೆ ಆಗಿದೆ.)

ತುಂಬಿ ತುಳುಕುತಲಿಹುದು ಬುಕ್ಕರಾಯ ಸಮುದ್ರ ;
ಕಣ್ಣು ಕುಕ್ಕುತಲಿಹುದು ಹೊಸ ನೀರಿನುರು ರೌದ್ರ ;
ಅಲೆಯ ಬಡಿತಕೆ ನಡುಗುತಿಹುದು ದೇವರ ಗುಡ್ಡ ;
ಇನ್ನು ಹೆಚ್ಚಿತೆ ನೀರು, ಇದಕೆ ಯಾವುದು ಅಡ್ಡ ?
ಏಳು ದಿನ ಸುರಿದ ಮಳೆ ಸುರಿಯುತಿದೆ ನಿಲ್ಲದೆ ;
ಇನ್ನೆಂಥ ಕಟ್ಟೆಯಾದರು ತಡೆಯ ಬಲ್ಲದೆ
ಇನಿಸು ನೀರಿನ ಹೊರೆಯ ? ಅವಿಚಾರ ತಾಂಡವದಿ
ಎದೆ ಹಿಗ್ಗಿ ಹರಿಯುತಿರುವಳು ಕೆರೆಗೆ ಪಾಂಡುನದಿ.
ಗಂಗೆ ಸರಿ, ಆದರೂ ತಾ ಇಲ್ಲಿ ಜಹ್ನುಸುತೆ
ಅಲ್ಲ ಎಂಬುದ ಮರೆತು ನದಿ, ಕೆರೆ ಇದಿನ್ನೆನಿತು
ಹಿರಿದಾದರೂ ಮೇರೆಯಿಲ್ಲದಂಬುಧಿಯಲ್ಲ,
ಎಂಬುದರಿಯದ ರೀತಿ ಹರಿದು ಬರುತಿಹುದಲ್ಲ !
ಮಳೆನಿಂತು ನೀರಿಳಿಯಿತೇ ಉಳಿಯಬಹುದು ಕೆರೆ ;
ನಿಲ್ಲದಿನ್ನೊಂದು ದಿನ ಸುರಿಯಿತೇ ಹರಹರಾ
ಕೆರೆಯೆಲ್ಲಿ, ನೀರೆಲ್ಲಿ, ಊರೆಲ್ಲಿ, ಜನವೆಲ್ಲಿ ?
ಕೆರೆ ನೀರು ಊರು ಜನ ಮೃತ್ಯುವಿನ ಮುಖದಲ್ಲಿ !

ಏರಿಯ ಮೇಗಡೆ ನಿಂತರು ಗೌಡ
ಊರ ಮುಖಂಡರು ; ನೀರನು ನೋಡಿ,
"ಗಂಗಾ ಭವಾನಿ ಬಹೆನೆನೆ, ಬೇಡ
ಎನ್ನುವ ದಿನ ಬಂದಿತು ನಮಗೀಗ ;
ಕೊನೆಯರಿಯದೆ ಎಲ್ಲಿಂದಲೊ ಸಾಗಿ

ಬರುತಿದೆ ಮೇಘದ ಹಿಂಗಡೆ ಮೇಘ ;
ತಾಯೇ ನಮ್ಮನು ಕರುಣಿಸಿ ನೋಡು ;
ಕೋಪಿಸಬೇಡ, ಕೈಬಿಡಬೇಡ ;
ನೀ ನಗುತಿರೆ ನಗುತಿರುವುದು ನಾಡು,
ನಗುವುದು ಊರು, ನಗುವುದು ಬೀಡು ;
ಕೋಪಿಸಿಕೊಂಡೊಡೆ ನಿನಗೆದುರಾರು ?
ಕಟ್ಟೆಯು ಕಿತ್ತೆಯೊ ಊರಿಗೆ ಊರು,
ತಿಂಗಳ ದುಡಿತದ ಬೆಳಸು ಪೈರು,
ಕೊಚ್ಚುವುದಲ್ಲ! ಬಂಡಿಯು ಬೆಲ್ಲ,
ಖಂಡುಗ ಅಕ್ಕಿ, ಖಂಡುಗ ಎಳ್ಳು,
ಕುರಿ ಕೋಣವ ಕೊಡುವೆವು, ಸುಳ್ಳಲ್ಲ...."

ನುಡಿಯುಗೊಡದೊಂದು ಅಲೆ ನುಗ್ಗಿ ಬಂದಿತು ಮೇಲೆ.
ನೀರ್ಗಂಟಿ ಹೇಳಿದನು : "ಕೊಡುವೆವೆನ್ನುವ ವೇಳೆ
ಮಿಂಚಿ ಹೋಯಿತು ; ತಹುದನೀಗಳೇ ತರಬೇಕು ;
ತಾಯಿಗೊಪ್ಪಿಸಬೇಕು ; ಇಲ್ಲವೇ ನಮಗೇಕೆ
ಕೆರೆಯ ಮೇಲಿನ ಆಸೆ ? ಜಲ, ನೋಡು, ಹುಚ್ಚೆದ್ದು
ಕುಣಿದಾಡುತಿದೆ ; ತಾಯಿ ಔಡುಗಳ ಕಚ್ಚಿದ್ದು
ಕಾಣುತಿದೆ. ಈಗಲೇ ತರಬೇಕು ಬಲಿಗಳನು ;
ಬಲಿಯ ತರಲೆಂದು ಗಂಗಾದೇವಿ ಅಲೆಗಳನು
ಕಳುಹುತಿರುವುದ ನೋಡಿ ; ತನ್ನಿ ತನ್ನಿರಿ ಬೇಗ.... "
ಊರಿನ ಸುಮಂಗಲಿಯರೆಲ್ಲ ಬಂದರು ಆಗ :
ನೂರು ತಾಂಬಾಳ, ತಂಬಿಟ್ಟನ್ನೆನೂರರಚ್ಚು,
ಒಂದೊಂದರಲು ತುಪ್ಪದೊಂದು ದೀಪವ ಹಚ್ಚಿ,
ಓಲಗದ ಜೊತೆಗೆ ಗುಂಪಾಗಿ ಕೆರೆಗೈತಂದು,
ಗಂಗಾಭವಾನಿಯೆದುರಲಿ ಭಕ್ತಿಯಲಿ ನಿಂದು,
ಕೈಮುಗಿದು, ಅಪ್ಪಣೆಯ ಬೇಡಿ, ಅರಿಸಿನ ಪೂಸಿ,

ಕುಂಕುಮವನಿಕ್ಕಿ, ತೆಪ್ಪದಲಿ ವಸ್ತ್ರವ ಹಾಸಿ,
ಹೂವ ಹಾರವನಿಟ್ಟು, ತಾಂಬಾಳದಲಿ ತಂದ
ತಂಬಿಟ್ಟಿನಚ್ಚುಗಳ ಮರೆಯದ್ದೈನೂರೊಂದ
ಸೇರುವೆಯು ಸಾಲಿನಲಿ ನಿಲಿಸಿ, ಒಂದೊಂದರಲು
ಸೊಡರ ಸರಿಮಾಡಿ, ಸುತ್ತಲು ಮಂದಿ ಸಿಂದಿರಲು
ಧೂಪವನು ಹಾಕಿ, ತಾಂಬೂಲವನು ನೀಡಿ,
ಹಾಡುಗಳ ಹಾಡಿ ಕಾಪಾಡೆಂದು ಬೇಡಿ,
ತೆಪ್ಪವನು ತೇಲಬಿಟ್ಟರು ನೀರ ಮೇಲೆ.......

ಬೇಡಿ ಕೈ ಮುಗಿದು ಹಾಡಿದ ಅದೇ ವೇಳೆ:

ಗಂಗೆ, ನಿಮ್ಮಾ ಪೂಜೆ ಒಲ್ಲೆನು ಎಂದಳೋ ಎಂಬಂದಕೆ
ಕೆರೆಯ ಯಾವುದೊ ದೂರದಲಿ ಮೇಲೆದ್ದು ಸಾರಿದ ಒಂದಲೆ
ನೋಡಿದವರೆದೆ ಬಿರಿವ ವೇಗದಿ ಹಾರಿ ತೆಪ್ಪವ ಹಿಂದಕೆ
ದೂಡಿಮುಗುಚಿತು; ಜನಕೆ ಕಂಡಿತು ಮುನಿದ ಗಂಗೆಯು ಮುಂದಲೆ.
ಕೋಣ ಒಂದನು ತಂದು ಕಡಿದರು, ನಿನಗೆ ಪ್ರೀತಿ ಇದೆನ್ನುತ;
ನೋಡುವಾಗಲೆ ಗಂಗೆ ಮೇಲಣ ಮೆಟ್ಟಲುಗಳನು ತಿನ್ನುತ
'ನೂರು ತಂಬಿಟ್ಟಿನಲಿ ಮುಗಿಯಿತೆ, ಒಂದು ಕೋಣಕೆ. ಮುಗಿಯಿತೆ ?
ಮುಗಿಯುದೋ,' ಎಂಬಂತೆ ಹೊಸ ಜಲ ಮುಂದು ಮುಂದಕೆ ಜಿಗಿಯಿತು.
ದಿಕ್ಕು ತೋರದೆ ಊರಜನ ಜೋಯಿಸರ ಮುಖವನು ನೋಡಲು
ಜೋಯಿಸರು, ಪಂಚಾಂಗದಲಿ ಮಳೆ ಇಷ್ಟು ಇಲ್ಲಲೆ, ಎಂದರು.
ದೇವರನು ಪೂಜಿಸಿದ ಊರಿದು ಅಳಿಯೆ ನಾಚಿಕೆಗೇಡಲೆ !
ಗೆಯ್ದು ಪೂಜೆಯು ಕೊಂಡು ದೇವರು ಊರನೇತಕೆ ತಿಂದರು ?

ಜಲಗಾರ ಕೇರಿಯಲಿ ಮೈ ಮೇಲೆ ಬಂದು
ಮಾರಮ್ಮ ಏನನೋ ಹೇಳುತಿಹಳೆಂದು
ಸುದ್ದಿ ಬಂದಿತು. "ಎಲಾ, ತಾಯ ಬರಮಾಡಿ ;
ಏನು ಸಂಗತಿ ತಿಳಿವ; ಬಿಜಗೆಯಿಸಿ, ಓಡಿ; "
ಎಂದು ಹಿರಿಯರು ಕೂಗಿದರು. ತರುಣ ಮಂದಿ

ಓಡಿದರು, ತಾಯಿ ಸಲಹದೆ ಬಿಡಳು ಎಂದು.
ಬಂದೆ ಬಂದಳು, ತಾಯಿ; ಊರಕೊಳವಾರ
ಕುಂಟ ತಿಮ್ಮನ ಮೇಲೆ ಅವಳಾ ಅಪಾರ
ಕರುಣೆಯನು ಹೇರಿದಳು; ಅವನ ಬಾಯಿಂದ
ತಾಯ ಮನವನು ತಿಳಿವ ಜನ, ಉಘೇ ಎಂದು,
ಕುಂಟನೆದುರಲಿ ಧೂಪ ಹಾಕಿ ಅವನಡಿಗೆ
ಮಡಿಗಳನು ಹಾಸಿ ನಡೆಯಿಸಿ ಕೆರೆಯ ಕಡೆಗೆ
ಬಿಜಮಾಡಬೇಕೆಂದು ಕೈಮುಗಿದು ಕರೆದು
ಓಲಗಿಸಿದರು, ಭಕ್ತಿಯಲಿ ಮೆಯ್ಯಮರೆದು.
ಕುಂಟನಲಿ ತಾಯ್ ತನ್ನ ಕಳೆಯನಿಳಿಸಿದಳು;
ಅವನ ಬಾಯಲಿ ತನ್ನ ಮನವ ತಿಳಿಸಿದಳು.

ನಾನೇ ಮಾರೀ, ನಾನೇ ದುರಗಿ,
ನಾನೇ ಕಾಳೀ ನಾನೇ ಕರಿಗಿ;
ನಾನೇ ಕೆಂಚಿ, ಈ ಪರಪಂಚಿ
ನುಂಗುವೆ ನಾನೇ ಸಮಯ ಹೊಂಚಿ;
ಹೆಣ್ಣೆನ್ನ ಬೇಡ, ನಾನೇ ಗಂಡು;
ನನ್ನಲ್ಲಿ ನಡೆಯದು ನಿಮ್ಮೆಲ್ಲ ಪುಂಡು;
ಜಂಭ ಮಾಡಿದನಲ್ಲ ಗುರಿಕಾರ ಎಲ್ಲಿ?
ದಂಡೆ ಕರುಳ ನೋಡು ನೆಲದಲ್ಲಿ ಚೆಲ್ಲಿ!
ಕುರಿಯನ್ನ ಕೊಡೆ ಅಂದ ಕರಿಗೌಡ ಎತ್ತ?
ಕುತ್ತಿಗೆ ಹಿಸಿಕಿದೆ; ಗೌಡಣ್ಣ ಸತ್ತ.
ಹರಸಿದ ಹರಕೆ ಉಳಿಸಿಕೊಂಡ ಕುಳ್ಳ,
ತನ್ನ ಬಾಗಿಲಿಗೆ ಎಳೆದ ಕಂಪೆ ಮುಳ್ಳ;
ಮೋಸ ಮಾಡುವೆನೆಂದ ಸಕಲಾತಿ ಸಣ್ಣ;
ಬಾಯ್ತುಂಬ ಮುಕ್ಕಿದ ಬೀದಿಯ ಮಣ್ಣ.
ಗಂಡನ್ನ ನೋಡುತ ನನ್ನನ್ನ ಮರತೀ!
ಜೋಪಾನ ಜಿಮುಕೀನ ಕಿವಿಗಿಟ್ಟ ಗರತೀ!

ಮಗನುಂಟು, ನನಗಿನ್ನು ಮಾರಮ್ಮ ಯಾಕೆ,
ಎನಬೇಡ ಹೆತ್ತೋಳೆ! ತಿಂದೇನು ಜೋಕೆ!
ಪುಂಡಿಗೆ ನಾ ಪುಂಡು, ಗಂಡರ ಗಂಡು,
ಮೊಂಡಾಟ ಬೇಡ; ನಾ ನಿಮಗನ್ನ ಮೊಂಡು.

ನಾ ಮಾರಿ ನಾ ದುರಗಿ ನಾ ಚಂಡಕಾಳಿ;
ನಾ ಕೆಂಚಿ ನಾ ಕರಿಗಿ; ಈ ಬಂಡ ಚಾಳಿ
ನಾನು ಒಪ್ಪುವಳಲ್ಲ; ತಿಂದು ಬಿಟ್ಟೇನು;
ಮೋಸಮಾಡುವೆನೆಂದ ಸುಳಿಯು ಸುಟ್ಟೇನು!
ದೊಡ್ಡ ದೇವರ ಮುಂದೆ ಪೂರಾಯು ವರುಷಾ
ಪೂಜೆ ಮಾಡಿದೆನೆಂತ ತರಬೇಡ ಸರಸಾ!
ದುರಗಿ ಆಡಿದ ನುಡಿಯ ಬೇಡೆನ್ನರಲ್ಲಿ;
ಕಾಳಿ ಹೇಳುವ ಮಾತಿನಲಿ ಇಲ್ಲ ಜಲ್ಲಿ;
ಕರಿಗಿ ದುರಗಿಯು ಕಂಡೆಯಾ ನೀ ಪ್ರಚಂಡ?
ರುಂಡವನು ಒಲ್ಲದೋ ಈ ನಿನ್ನ ಮುಂಡ!

ನಾ ಮಾರೀ ನಾ ದುರಗೀ ನಾ ಕೆಂಚೀ ನಾ ಕರಿಗಿ;
ನಾ ಚಂಡೀ ಚಾವುಂಡೀ, ಭಂಡಗೆ ನಾ ಬಹು ಭಂಡೀ.
ಊರಿನ ಕೆರೆಯಿಾಗ ಉಳಿಯೋದು ಹೆಂಗಂತ
ಗೌಡಣ್ಣ ಕೇಳೀಯ; ಹೇಳೂವೆ ತಿಳಿಹೊಂತ.
ಎಷ್ಟೇನು ದಿನವಾಗಿ ಊರೋರು ನೀವೆಲ್ಲ
ನಾ ನಿಮ್ಮ ಹೊರೆಯುವ ತಾಯಂತ ನೋಡಿಲ್ಲ;
ತಂಬಿಟ್ಟನಲಿ ಬೆಲ್ಲ ಉಳಿಸೀತು ಹುಡುಗೇರು;
ತುಂಬಿದ ಕುರಿಯೆಂತ ಗೌಡರು ನಡುಗ್ಯಾರು;
ಮಾರೀಗೆ ಯಾಕೆಂತ ಸಾರಾಯು ಅಂದಾರು;
ಸಪ್ಪೆ ತಂಬಿಟ್ಟು ಸಣ್ಣನ ಕುರಿ ತಂದಾರು;
ಒಲ್ಲೆನು ನಾನಿನ್ನು ಒಲ್ಲೆನು ನಿಮ್ಮ
ತಂಬಿಟ್ಟು ಕುರಿಕೋಣ; ಒಲ್ಲೆನೊ ತಮ್ಮಾ;

ತನ್ನಿ ನನ್ನೆಡೆಗೆ ತಕ್ಕದು ಬಲಿ ಒಂದ
ತನ್ನಿರೋ, ತನ್ನಿ, ಒಪ್ಪಿಸಿ, ಛಲದಿಂದ.

ನಾನು ಮಾರಿ ನಾನು ದುರಗಿ ನಾನು ಕೆಂಚಿ ನಾನು ಕರಿಗಿ ;
ಹೊಟ್ಟೆಯಲ್ಲಿ ಕಂದನುಳ್ಳ ಎಳೆಯ ಗರತಿ ಹೆಣ್ಣು ಒಂದ,
ಎಳೆಯ ಹೆಣ್ಣು ಒಂದ ತಂದು, ಹೊಸತು ನೀರಿನೆದುರು ನಿಲಿಸಿ
ಪೂಜೆಮಾಡಿ ನನಗೆ ಕೊಟ್ಟು, ಕಟ್ಟಿ ಕೊನೆಗೆ ಬಾವಿಯುಗೆದು,
ಅವಳನಲ್ಲಿ ಹುಗಿಸಿ, ಮೇಲೆ ಕಲ್ಲುಮುಚ್ಚಿ, ಮಣ್ಣು ತುಂಬಿ
ನನಗೆ ಭುಕ್ತಿಮಾಡಿ ಹೋಗಿ; ನಾನು ನಿಮ್ಮ ಕೆರೆಯನೊಪ್ಪಿ
ಇಲ್ಲೆ ನಿಂತು ನಿಮ್ಮ ಹೊರೆವೆ ; ಹೋಗಿ ನನ್ನಮಾತ ನಂಬಿ ;
ನಂಬಿ ಹೋಗಿ, ಬದುಕಿಕೊಳ್ಳಿ; ನಂಬಲಿಲ್ಲ, ನನಗೆ ತಪ್ಪಿ
ಕೆರೆಯು ಕಳೆದುಕೊಂಡು ಊರ ನೀರಭರಕೆ ಬಲಿಯನಿತ್ತು,
ಮಗುವಿಗೆಂದು ತಾಯಿಬೀರಿ ಮೊರೆದು, ತಾಯ್ಗೆ ಕಂದ ಚೀರಿ,
ತಂದೆ ಮಗಗೆ, ಮಗ ಹೆಣತಿಗೆ, ಹೆಣ್ಣು ಮನೆಗೆ, ಪ್ರಾಣತೆತ್ತು,
ಹಾಳು ಹೋಗಿ ಕಾಳುಮಾಡಿ ಮಣ್ಣಮುಕ್ಕಿ ನುಣ್ಣಗಾಗಿ ;
ನುಣ್ಣಗಾಗಿ ; ಎಲ್ಲ ಸತ್ತು ಸುಣ್ಣವಾಗಿ; ನಿಮ್ಮ ಮಿತ್ತು,
ನಿಮ್ಮ ಮಿತ್ತು, ನಾನೆ ಕಣಿರೊ, ನಾನೆ ಕಣಿರೊ, ನಾನೆ ಕಣಿರೊ

ನಾನೇ ಮಾರೀ, ನಾನೇ ದುರಗೀ,
ನಾನೇ ಕೆಂಚೀ, ನಾನೇ ಕರಿಗೀ ;
ನಾನೇ ಕಾಳೀ ; ಈ ಪರಪಂಚಿ
ನುಂಗಿತು ನನ್ನ ಗಂಟಲು ಹೊಂಚಿ ;
ನಾ ಕಾಳಿ ನಾ ದುರಗಿ ನಾ ಚಂಡ ಕಾಳೀ,
ನಾನು ಒಪ್ಪುವಳಲ್ಲ ಈ ಭಂಡ ಚಾಳೀ ;
ನನ್ನ ನುಡಿಯನು ಕೇಳಿ ತಿಂದುಂಡು ಬಾಳೀ ;
ಇಲ್ಲ, ಕೂಗದು ಇನ್ನು ನಿಮ್ಮೂರ ಕೋಳೀ ;

ನಾನು ಮಾರಿ ನಾನು ದುರಗಿ ನಾನು ಕೆಂಚಿ ನಾನು ಕರಿಗಿ
ನಾನು ದುರಗಿ ನಾನು ಮಾರಿ ನಾನು ಕರಿಗಿ ನಾನು ಕೆಂಚಿ

ನಾನು ಕರಿಗಿ ನಾನು ದುರಗಿ ನಾನು ದುರಗಿ ನಾನು ದುರಗಿ
ನಾನು ದುರಗಿ ನಾನು ದುರಗಿ ನಾನು ದುರಗಿ ನಾನು ದುರಗಿ.......

ಮೈಮೇಲೆ ಬಂದವ್ಮ ಏನು ಹೇಳುವಳೋ
ಎಂಬ ಆಸೆಯಲಿ ಬಂದಿದ್ದ ಹಿರಿಯರಿಗೆ,
ದಾಹದಲಿ ಬೊಗಸೆ ಎತ್ತಿದ ನೀರು ಚವುಳೋ
ಚವುಳು ಎಂಬಂತಾಯ್ತು. ಕೋಣ ಕುರಿಮರಿಗೆ
ಹಿಂತೆಗೆವರಲ್ಲ ಊರಿನ ಹಿರಿಯ ಮಂದಿ ;
ಆದರೆಯೊ ಈಗ ಮಾರವ್ಮ ಕೇಳಿದದು
ಎಂತ ಬಲಿ ! ಗೌಡ ಜನ ತಿಳಿದು ಕಳೆಗುಂದಿ
ದಿಕ್ಕು ತೋಚದೆ ಇತ್ತು, ಮನಸಿನಲೆ ಕುದಿದು.
ಈ ಬಲಿಯ ಕೊಡದಿದ್ದರೂ ನಡೆಯಬಹುದೋ
ಎಂಬೊಂದು ಆಶೆಯಲಿ ಇವರೆಲ್ಲ ಮರಳಿ
ಕಟ್ಟೆಯನು ಏರಿದರು ; ಜಲ, ಆಹುದೊ ಅಹುದೋ,
ಎಂದು ಮೊರೆಯುತಲಿತ್ತು ಮೇಲ್ವಾಯ್ದು ಹೊರಳಿ.
ಮೇಲ್ವಾಯ್ದು ಹೊರಳುತ್ತ ಮೊರೆದು ನೊರೆಯುತ್ತ
ಹೊರಳಿ ಬಹ ಹೊತ್ತ ಕಾದಿದೆ ಊರ ಮಿತ್ತು.

ಶಾಲೆಯಣುಗರು ಆಟದಾಸೆಯನು ತಡೆದು
ವರುಷವೂ ಗುರುವಿನಾಣತಿಯಂತೆ ನಡೆದು,
ಕಾಮನನು ಸುಡುವಂದು ನಲವು ಉಕ್ಕೇರಿ
ಗುರುವಿರುವ ತಾಣವನೆ ಹುಡುಕಿ ಬಳಿ ಸಾರಿ,
ನಯ ನೀತಿಗಳ ಮೇರೆಯನು ದಾಟಿ ಸಿಡಿದು
ಗುರುವಿನೆದುರಲೆ ಲಬೊ ಲಬೋ ಬಾಯಿ ಬಡಿದು
ನೀವೇನ ಮಾಡಬಲ್ಲಿರಿ ಎನ್ನುವಂದ ;
ವರುಷವೂ ತುರುಗಾಹಿಯಿಚ್ಛೆಯಲಿ ನಿಂದು,
ಬಾಯೆನಲು ಬಳಿಸಾರಿ ಹೋಗೆನಲು ಹೋಗಿ,
ಅವನು ಕಾಣದಿರೆ ಅಂಬಾ ಎಂದು ಕೂಗಿ,

ಎಷ್ಟೊ ಹಿಡಿತದಲಿ ನಡೆದಿರುವ ತುರು ಮುಂದೆ
ಸಂಕ್ರಾಂತಿಯಂದು ಕಿಚ್ಚನು ಹಾಯ್ದು ಮುಂದೆ
ತುರುಗಾಹಿ ಬರಲು ಬಾಲವನೆತ್ತಿ ಹಾರಿ
ಚಿಮ್ಮಿ ಹೋಗುವ ಒಂದು ರೀತಿಯನು ತೋರಿ ;
ದಿನ ಬಂದ ಗಂಡನಿಗೆ ಸಗ್ಗಿದ್ದ ಹೆಣ್ಣು
ಅಳಿಯೆ, ಹೊಸಬಳು ಬಂದು, ನೀಗಂಡೆ, ಮಣ್ಣು,
ಎಲ್ಲ ಹೆಣ್ಣಂತೆ ತಿಳಿಯದಿರು ನೀಯೆನ್ನ,
ಬಾ ನಿನಗೆ ಕಲಿಸುವೆನು, ಬಾ ನನ್ನ ಚೆನ್ನ,
ಎಂದು ಏಳಿಸಿ ನುಡಿದು ಮೂದಲಿಸಿ ಮುತ್ತಿ,
ನಡೆ, ಇಲ್ಲಿ ಸಾಕು, ಸ್ವರ್ಗಕೆ ಕಟ್ಟು ಬುತ್ತಿ,
ಎಂದು ಮೆಯ್ಮರೆತು ಛಲನುಡಿವೊಂದು ತೆರದೆ
ತನ್ನ ಬುಟ್ಟಿಯ ಕಡ್ಡಿ ಒಂದರ್ಧ ಹರಿದೇ
ಇರುವುದ ಪರೀಕ್ಷಿಸದೆ ಮಲಗಿದ್ದ ಸರ್ಪ
ಚಳಿಯದಿನ ಕಳೆದು ಪರೆಯುಗಿದು ಹೊಸದರ್ಪ
ನಿಡಿದಾಗೆ ಹೆಡೆಯೆತ್ತಿ ಮೆಯ್ನಿಮಿರ್ದು ಬೀಗಿ
ಹಳೆಯ ಹೇಳಿಗೆಯ ಮುರಿವೆನು ಎಂದೆ ತೂಗಿ
ಬುಸುಗುಟ್ಟಿ ಅಕ್ಕಪಕ್ಕವನು ಅಪ್ಪಳಿಸಿ
ಅಲೆವಂತೆ ಇಹ ತಾಣದಲೆ ಬಳಸಿ ಬಳಸಿ ;
ಎಷ್ಟೊ ಶತಮಾನಗಳು, ಬುಕ್ಕರಸಗೆಯ್ದ
ಕಟ್ಟೆಯನು ಮೆಚ್ಚಿ, ಅದರೆದೆಗೊರಗಿ ಸುಯ್ದ
ಪಾಂಡುನದಿ, ಇಂದದಕೆ ಮಲೆತೆದ್ದು ಮೊರೆದು,
ಇನ್ನೆನಗೆ ಮರ್‍ಯಾದೆ ಬೇಡೆಂದು ತೊರೆದು,
ಓಡುವುದೆ ಸರಿ ನಾನು, ಈ ನಿನ್ನ ಕಲ್ಲೆದೆ
ಪೋಪೆನೆಂದೆನಲು ಎನ್ನನು ತಡೆಯ ಬಲ್ಲದೆ,
ಎಂದು ಉಗ್ಗಡಿಸಿ ಮೇಲ್ವಾಯ್ದೆದ್ದು ಕುಪ್ಪಳಿಸಿ
ಕಲ್ಗಳೆಡೆಯನು ಕೊರೆದು ನೊರೆ ನೊರೆದು ಅಪ್ಪಳಿಸಿ
ನಿಲ್ಲೆ ನಾನಿಲ್ಲಿ ಹೊರಟೇ ಹೊರಟೆ ಎನುತಿತ್ತು.

ಇದ ಕೇಳಿದನು ಗೌಡ ಭಯುದಲಾಗಲೆ ಸತ್ತು.

ತಾಯಿ ಕೇಳಿದ ಮೇಲೆ ಇಲ್ಲೆಂಬ ಮಾತುಂಟೆ ?
ಅವಳ ತಪ್ಪಿಸಿ ಬಾಳುವರೆ ಏನು ಮನೆ ಗಂಟೆ ?
ಊರೆಲ್ಲ ಬಲ್ಲದಿದ. ಬಸುರಾದ ಎಳೆ ಹೆಣ್ಣು
ಯಾವುದಿದೆ ಊರಲ್ಲಿ ? ಜಲದೇವತೆಯ ಕಣ್ಣು
ಯಾವ ಮನೆ ಬಾಳ್ವೆ ಯೆಳೆಸುಳಿಯು ಸುಡಲೆರಗಿಹುದು?
ಯಾರ ಎದೆಯಾಸೆ ಆ ಸಿಡಿಲಿಂದ ಸುರುಗಹುದು ?
ಅವಳೆದುರು ಸೆಡೆದಿದ್ದ ಯಾರ ಉಬ್ಬಿನ ಜ್ವರಕೆ,
ಚಂಡಿಯನು ಕಂಡಿಹೆನು ಎಂದ ಕೊಬ್ಬಿನ ನರಕೆ,
ತಡೆವಷ್ಟು ದಿನ ತಡೆದು, ಕೊನೆಗೆ ನಡತೆಗೆ ಹೇಸಿ,
ಚುಟಿಕೆ ಹಾಕುವ ಎಂದು ದೇವಿ, ನೋಟವ ಕಾಸಿ,
ಮನವ ತಿಳಿಸಿದಳೊ ? ಬಲಿಯೆಲ್ಲಿಂದ ಬರಬೇಕೊ ?
ಇದನು ಗೌಡರು ವಿಚಾರಿಸರಲ್ಲ ! ಇದುಯೇಕೊ ?
ಎಂದು ಊರಿನ ಹಿರಿಯರವನ ಕಡೆ ನೋಡಿದರು.
ಯಾರಿಹರು ಎನ್ನುತ ವಿಚಾರವನು ಹೂಡಿದರು.

ಗಬ್ಬವಾಗಿರುವ ಎಳೆ ಹೆಣ್ಣು ಎರಡುಂಟು ;
ಒಂದು ಆವೇಶದಲಿ ನುಡಿದ ಕುಂಟನ ನಂಟು ;
ಒಂದು ಗೌಡನ ಹಿರಿಯ ಸೊಸೆ ಮುಸಿಲಿ ; ಉಳಿದ
ಹೊಟ್ಟೆಯಲಿ ಕಂದನಿರುವವರು ದಿನ ಕಳೆದ
ಬಳಲಿರುವ ತಾಯಿದಿರು ; ಬಲಿಗೆ ಹದವಲ್ಲ.
ದೇವಿಯನು ಒಪ್ಪಿಸಲುಬೇಕು ಹೊಸಬೆಲ್ಲ.

ಏಗೆಯ್ಯುವೆದೆಂದು ಗೌಡನ ಮನದಿ ಕದನ
ನಡೆಯುತಿದೆ ; ತಿಳಿದರುಳಿದವರು ಈ ಹದನ ;
ಆವೇಶ ಇಳಿದಿದ್ದ ಕುಂಟ, ಆ ತನ್ನ
ದಾಯಾದಿ ಹೆಣ್ಣ ಬಲಿಕೊಡೆ ಊರ ಬನ್ನ
ಹರಿಯ ಬಹುದದಕೇನು, ಹೆಣ್ಣೆಲ್ಲ ಒಂದೆ,

ಎಂದು ನುಡಿದನು. ಅದಕೆ ಆ ಹೆಣ್ಣ ತಂದೆ,
"ಮಾರಮ್ಮನಿಗೆ ಒಪ್ಪಿಸುವೆವೆಂಬ ಸರಕು
ಯಾವುದೋ ಹಾಳು, ಎಂಥದೊ ಚಿಂದಿ ಹರಕು,
ಆಗಬಹುದೇ ? ಊರ ಸಂಪನ್ನರೆಲ್ಲ
ಗುಣಕಾರಮಾಡಿ, ಇದ ಬಲ್ಲವನೆ ಬಲ್ಲ"
ಎಂದು ಹೇಳಿದನು. ಜಲಗಾರರಾಹುಡುಗಿ
ಅಳುತ ಕೂತಿತು, ಚರ್ಚೆಯಿದ ಕೇಳಿ ನಡುಗಿ.
ಎಲ್ಲ ಗುಸ ಗುಸ ಮಾತನಾಡುತಿರೆ, ಊರ
ಹಿರಿಯಾತನೊಬ್ಬ ಗೌಡನಿಗೆ, "ಇದು ಘೋರ,
ಆದರೂ ಬೇರೆ ದಾರಿಯು ಕಾಣದೆಲ್ಲ,
ನಿಮ್ಮ ಇಷ್ಟವ ತಿಳಿಯ ಕಾದಿಹರು ; ಬಲ್ಲ
ನಿಮಗೇನು ಹೇಳುವುದು" ಎಂದ ವಿನಯದಲಿ.
ಗೌಡ, ಅಯ್ಯೋ ಎಂದ ; "ನನ್ನ ಜನುಮದಲಿ
ಎಂದಾದರೂ ದೇವಿಗೆದುರು ಬಿದ್ದವನೆ ;
ಏಕೆ ಬರಬೇಕೊ ನಾ ಕಾಣೆ ಈ ಬವಣೆ ;
ನಾನು ಹೇಳುವುದೇನು, ಊರೆಲ್ಲ ಹೇಳಿ,
ಮನೆ ಮಂದಿ ಹುಡುಗ ಆ ಹುಡುಗಿಯನೆ ಕೇಳಿ ;
ಕೆರೆ ಒಂದ ಹೋದರೂ ಹೋಗಲೆಂದೇನು ;
ತಾಯ ಆಶೆಯನು ಕೆಡಿಸಿದ ನರನ ಗೋಣು
ಮುರಿದಿಹುದು ; ಅವನು, ಬಾಚುವ ತಲೆಯ ಹೇನು ;
ಇನ್ನು ಕತ್ತಲಿಗೆ ಮಾಸಲು ಅವನ ಬಾನು ;"
ಎಂದವನು ಕುಳಿತಲ್ಲೆ ತಲೆಗೆ ಕೈಯಿಟ್ಟು
ಕುಳಿತಿದ್ದ, ಬಾಳ ಊಟದಲಿ ರುಚಿ ಕೆಟ್ಟು.

ಯಾವ ಹೊತ್ತಲಿ ಬಾಳು ಯಾವ ಸುಖದುಃಖವನು
ತರಬಹುದೊ, ಅರಿತವನು ದೇವರಿಗು ಮಿಕ್ಕವನು.
ಕುಂಟ ತಿಮ್ಮನ ಮೇಲೆ ಬಂದ ಕೆರೆಯಧಿದೈವ
ಬಸುರುಹೆಣ್ಣೆಂದೊಡನೆ ನಮ್ಮ ಗೌಡನ ಜೀವ

ತನಗೆ ಏನೋ ಹಾನಿ ತಟ್ಟುವುದು ನಿಜವೆಂದು
ತನ್ನ ಒಳಗೇ ತಾನು ಕಂಡು ನೊಂದಿತು ಬೆಂದು.
ಅಂತೆ ಈ ಮಾತು ಮನೆಯನು ಮುಟ್ಟಿತೆಂದೊಡನೆ
ಆವನ ಹೆಂಡಿರು ತಾಯಿ ಎಲ್ಲರೆದೆ ದಡದಡನೆ
ಬಡಿದುಕೊಂಡಿತು. ಮನೆಯ ಸೊಸೆ ಅಲ್ಲೆ ಇದ್ದವಳು
ಇವರ ಮನವೇನೆಂದು ನೋಡಿ ಮೇಲೆದ್ದವಳು
ಒಳಗೆ ಹೋದಳು; ದೇವರೆದುರು ದೀಪವ ಹಚ್ಚಿ
ನೆಲದಿ ಮಂಡಿಯನೂರಿ ಮಣಿಮಣಿದು, "ನಿನ್ನಿಚ್ಛೆ
ಎಂತಿಹುದು ಅಂತೆ ಆಗಲಿ, ಆದರೀ ಜನದ
ಎದುರಿನಲಿ ಕಣ್ಣೀರು ಹಾಕದಂದದ ಮನದ
ನಿಶ್ಚಯವನಿತ್ತು ಕಾಪಾಡು, ದೇವರೆ, ನನ್ನ;
ಬದುಕಲೆಂದಿಚ್ಛೆಯೋ ಮಾಡು ಬದುಕನು ಚೆನ್ನ,
ಸಾಯಲೆಂದೆಯೊ ಸಾವನೂ ಚೆನ್ನವೇ ಮಾಡು;
ಎಂತಾದರೂ ಸರಿಯೆ, ನೀನೆನ್ನ ಕಾಪಾಡು."
ಎಂದು ಭಕ್ತಿಯಲಿ ಬೇಡಿದಳು. ಮಳೆ ನಿಲಲಿಲ್ಲ;
ಕೆರೆಗಿನ್ನು ನೀರು ಬರುವುದಕೆ ಬಿಡುವುದು ಸಲ್ಲ;
ಊರ ಜನ ಗೌಡನಂಗಳಕೆ ಬಂದಿತು ಎಲ್ಲ;
ಏನು ನಿಶ್ಚಯ ಮಾಡುವರೊ ಹೇಳುವುದಕಿಲ್ಲ;
ಏನು ಮುಂದಕೆ? ಒಂದು ಜೀವ ಬಲಿಯಾಗಿ
ಉಳಿಯುವುದೆ? ಅಳಿಯುವುದೆ ಕೆರೆ ಕಿತ್ತುಹೋಗಿ?

ಯಾಕೆ ಹೇಳಲಿ ಇನ್ನು ನಡೆದೆಲ್ಲ ಹದನ?
ತ, ಥ, ಎಂದಿಹೆನು; ತಿಳಿಯದೆ ನಿಮಗೆ ದಥನ?
ಬೇಡವೆಂದಳು ಹೆತ್ತ ಬಡವೆ ಆ ತಾಯಿ;
ಎಷ್ಟು ಧೈರ್ಯವೆ, ತೊಲಗು, ಮುಚ್ಚಿರಲಿ ಬಾಯಿ,
ಎಂದು ಹೇಳಿದ ತಂದೆ; ಗಂಡ ಬೇಡೆಂದ;
ಊರ ಮುದಿಗೂಬೆ ತನ್ನೊಂದು ಕೋಡಿಂದ,
"ಹೆಂಡಿರೆನೆ ಏನಾಸೆ? ಅಮ್ಮ ಈ ಕೊಬ್ಬ

ಮುರಿಯದಿರುವಳೆ, ಮಾಡದಿರುವಳೇ ಹಬ್ಬ?"
ಎಂದು ಪಲುಕಿತು. ಶಾಸ್ತ್ರ ಗೀಸ್ತ್ರ ಬಲ್ಲವರು,
ಬೇಕು ಬೇಡೆಂಬ ಎದೆ ಬೆಣ್ಣೆ ಕಲ್ಲವರು,
ಎಲ್ಲ ನುಡಿದರು, ನಾಟಕವನು ಮುಗಿಸಿದರು;
ಕೊನೆಗೆ ಮುಸಿಲಮ್ಮ ಹಿರಿಯುವರೆಲ್ಲರೆದುರು,
"ಗಂಗಮ್ಮ ಕೇಳಿಹಳು; ಕೆರೆ ಉಳಿಯಬೇಕು;
ನನ್ನ ಸಾಕಿದ ಊರು, ಬಾ ನನ್ನ ಸಾಕು,
ಎಂದು ಬೇಡುವ ಹೊತ್ತು ನಾ ಒಲ್ಲೆ ಎನಲೆ?
ತಾಯ ತಪ್ಪಿಸಿ ಬಾಳುವೆನೆ, ಅವಳು ಕನಲಿ
ಹೆರುವ ದಿನ ಉಸುರು ತೆಗೆದರೆ ಯಾವ ಸುಖಕೆ?
ಹೆತ್ತ ಕೂಸನು ಕುರುಡುಮಾಡಿ ಈ ಮುಖಕೆ
ಮಂಗಳಾರತಿ ಮಾಡಿದಳು ಎನ್ನಿ; ಆಗ
ಏನು ಮಾಡುವುದು? ಕೇಳುವರಾರು ಕೂಗ?
'ನನ್ನ ತಪ್ಪಿಸಿಕೊಂಡು ಬಾಳುವೆಯ, ಮರುಳೆ?
ಬಾಳೆ; ರೋಗದ ಹಾಸಿಗೆಯ ಮೇಲೆ ನರಳೆ;'
ಎಂದು ಹೇಳಿದಳು; ಗತಿಯೇನು? ಮಾಂಗಲಿಯ
ಕಿತ್ತುಕೊಂಡಳು; ನನಗೆ ಯಾರಾಗ ಬಲಿಯ?
ಸತ್ತರೂ ಬಾಳಿದರು ಅದೆ ದೈವ ನನಗೆ;
ಅದೆ ದಿಕ್ಕು ತೌರಿಗೆ, ಈ ಹೊಕ್ಕ ಮನೆಗೆ;"
ಎಂದು ತನ್ನಯ ಮನದ ನಿಶ್ಚಯವ ನುಡಿದು,
ಬೇಡ ಎಂದವರ ಸಂತೈಸಿ "ನಾ ಮಡಿದು
ಸ್ವರ್ಗವನು ಸೇರುವೆನು; ತಡೆಯುವಿರಿ ಏಕೆ?
ಮುಸಿಲಿಯನು ಮರೆತೀರಿ, ಗೆಳತಿಯರೆ, ಜೋಕೆ!"
ಎಂದು ಹೇಳುತ ಕಣ್ಣ ಕೊನೆಯಿಂದ ಒಂದೆ
ಒಂದು ಹನಿ ನೀರ ಕೊಡವುತ "ಇಕೋ ಬಂದೆ"
ಎಂದು ಒಳಗಡೆ ಹೊಕ್ಕು ಸಿಂಗರಿಸಿಕೊಂಡು,
ಬಲಿಯಾಗಿ ಹೊರಗೆ ಬಂದಳು. ಯಾವ ಗಂಡು

ಸಾಯಿ ಬಾ ಎನಲಿಂತು ನಗುತ ಬರುವವನು ?
ಹೆಣ್ಣ ಮುಖದಲಿ ಹೊರತು ಬೇರೆಲ್ಲು ಜವನು,
ಬಹು ಕೋಟಿ ಜೀವ ಸತ್ತುದ ಕಂಡ ಜಾಣ,
ಇಂತಹ ಸಮಾಧಾನದಂಕಿತವ ಕಾಣ !

ಇನ್ನು ಹೇಳೆನು ನಾನು ನಡೆದ ಸಂಗತಿಯು
ಕಟ್ಟಿಕೊಳ್ಳಿರಿ ನೀವೆ ಹೇಳದಿಹ ಕತೆಯು.
ಸಿಂಗರಿಸಿಕೊಂಡು ಬಂದವಳ ಸುತ್ತೆಲ್ಲ
ಮಂದಿ ನಿಂತಿತು; ಇದರ ಶಾಸ್ತ್ರವನು ಬಲ್ಲ
ಮುದಿಯು ದೇವರ ಗುಡ್ಡ ಮುತ್ತೈದೆ ಬಂದು
ಮಾರಿಯುಣಿಸಿಗೆ ತಕ್ಕ ಮರ್ಯಾದೆಯಿಂದ
ಮುಸಿಲಮ್ಮನಿಗೆ ಎಲ್ಲ ಪೂಜೆಗಳ ಮಾಡಿ
ದಾರಿ ಕೊಟ್ಟರು, ಬಲಿಯ ಮಂಗಳವ ಹಾಡಿ.

ತಮಟೆ ಓಲಗ ಮೊಳಗುತಿರೆ, ತಾಯ ಹಾಡ
ಮುತ್ತೈದೆಯರು ಹಾಡುತಿರೆ, ಎಲ್ಲ ನಾಡ
ಬೆರಗುಗೊಳಿಸುತ ಮುಸಿಲಿ, ಎಳೆ ಹೆಣ್ಣು ನೀರೆ,—
ಸಾವ ಹೊತ್ತಲು ಎಂಥಧೀರೆ, ಗಂಭೀರೆ,—
ಮನೆಯ ನಂಟಿನ ಎಲ್ಲ ಹಿರಿಯರಿಗೆ ಮಣಿದು
ಮಗುವೊಂದ ಹೊತ್ತಕಾರಣ ತುಂಬ ದಣಿದು
ಕ್ಷಣಮಾತ್ರ ಗಂಡನೆಡೆ ನಿಂದು ಬಹೆನೆಂದು
ಕಂಬನಿಯೊಳುಸುರಿ ಕನಿಕರದಿಂದ ಬೆಂದು—
ದೇವಿ ಬಯಸಿದ ಹೆಣ್ಣು, ಇದಕು ಮಿಗಿಲಾಗಿ
ಒಲುಮೆ ತೋರಲು ಸಲ್ಲ; ಗಂಗಮ್ಮ ರೇಗಿ
ಕೇಡು ಮಾಡಿದರೆ? ಕೈ ಹಿಡಿದವನು ಕೂಡ
ಈ ಮಿಾಸಲನು ಇನ್ನು ತನತೆಂದು ನೋಡ.—
ಮನೆಯಿಂದ ಹೊರಟು ಕೆರೆಯೇರಿಯನು ಸಾರಿ
ಉತ್ಸವದ ಮಾರಿಯೆದುರಲಿ ಮುಂಡಿಯೂರಿ

ಉಕ್ಕೇರಿ ಬರುವ ಹೊಸ ನೀರ ಕಡೆ ತಿರುಗಿ,
"ನನ್ನವ್ವ ಓ ಚಂಡಕಾಳಿ, ಓ ದುರಗಿ
ನಾ ನಿನ್ನ ಊಳಿಗಕೆ ಬಂದು ನಿಲ್ಲುವೆನು;
ಇಲ್ಲೆ ಇರು ತಾಯಿ; ಈ ಜೀವವೆಲ್ಲವನು
ಕಾಪಾಡಿಕೊಳ್ಳಮ್ಮ ನನ್ನಮ್ಮ ತಾಯಿ;"
ಎಂದು ಪ್ರಾರ್ಥಿಸಿ ನಿಂತು ಆ ತಾಯ ಬಾಯಿ
ಎಂಬಂತೆ ಎದುರಿನಲಿ ಮಾಡಿದ್ದ ಒಂದು
ಬಾವಿಯೊಳಗಡೆಗೆ ಸರಿದಳು. ಗೊಳೋ ಎಂದು
ಗಂಡು ಹೆಣ್ಣೆಲ್ಲ ಭೇದವ ಮರೆತು ಮೊರೆಯೆ,
ದೇವರರ್ಚಕರು, ತಂದಿದ್ದ ಪರಿಪರಿಯ
ಅನ್ನ ಆಹಾರ ಹೊಸ ಬೆಲ್ಲ ತಂಬಿಟ್ಟು
ಹವಳ ಕರಿಮಣಿ ಗುಂಜಿ ಬಿಳಿ ನೂಲು ಪಟ್ಟು
ಸೇಲೆ ಹಚ್ಚಡ ಹೊದಿಕೆಯನು ಬಾವಿಗಿಳಿಸಿ,
ಸೊಗವಾಗಲೆಂದು ಗಂಗೆಯ ಜಲವ ತಳಿಸಿ,
ಬಾವಿ ಮೇಗಡೆ ನಾಲ್ಕು ಚಪ್ಪಡಿಯನೆಳೆದು;
ಬಲಿ ಜೀವ ಏನಾದರೂ ಧೈರ್ಯವಳಿದು
ಮೇಲೆ ಬಂದೇನೆಂದು ಕೂಗಿಕೊಂಡೀತು,
ನೆಂಟರಿಷ್ಟರು ಮೆತ್ತನೆಯ ಮಂದಿ, ಸೋತು,
ಅದನು ಬಿಡಿಸುವ ಯತ್ನ ಗೆಯ್ದಾರು, ಎಂದು
ಚಪ್ಪಡಿಯ ಮೇಲೆಯೇ ಗುಂಪಿನಲಿ ನಿಂದು,
ಒದರೊ ಓಲಗ, ಚಕ್ರ ತಮಟೆಯನು ಬಡಿಯೋ,
ಎಂದು ಕೂಗುತ; ಮುಸಿಲಿ ತಾಯ್ಗೆ ಈ ಎಡೆಯೇ
ಮಂದಿರವ ಕಟ್ಟಬೇಕೆಂದು ಆ ಕ್ಷಣವೆ
ಕೆಲಸವನು ಮೊದಲು ಮಾಡಿದರು. ಅಹ ಘನವೇ!
ಮಾನವರ ಮನದ ವಂಚನೆ ಹೇಳ ಸಲ್ಲ!
ದೇವರೊಬ್ಬನು ಇರಲು, ಅದನವನು ಬಲ್ಲ!

ಬಲಿಯಾಗಿ ಬಂದ ಮುಸಿಲಮ್ಮನನು ಒಪ್ಪಿ
ಗಂಗೆ ತಡೆದಳೊ! ಇಲ್ಲವೇ ಅಪ್ಪಿತಪ್ಪಿ
ಮಳೆ ನಿಂತು ನೀರ ಬರವೇನೊ ಕೊರೆಯಾಗಿ
ಏರಿ ಉಳಿಯಿತೊ! ಇದನು ಹೇಳುವೆನು ಹೇಗೆ?
ಎಂತೆ ಆದರು, ಇನಿತು ದಿಟವೆ ಸರಿ. ನಮ್ಮ
ಮಾತಾಯಿ ಧೀರಸತಿ ದೇವಿ ಮುಸಿಲಮ್ಮ
ಬಾವಿಯನು ಹೊಕ್ಕ ಹೊತ್ತಲೆ ಕಾರಮೋಡ,
ಅದು ಎಂತೊ, ಅದು ಏನೊ, ಜನ ನೋಡ ನೋಡ
ಕರಗಿ ಮರೆಯಾಗಿ ಹೋಯಿತು; ಅದೇ ವೇಳೆ
ಕೋಪಗೊಂಡಿದ್ದ ನದಿ ಮೇಲಿಂದ ಮೇಲೆ
ತರುತಿದ್ದ ನೀರ ನೆರೆಯೂ ಕಡಮೆಯಾಗಿ
ಕೆರೆಯ ತುಂಬಿದ್ದ ಹೊಸ ಜಲ ರೌದ್ರ ನೀಗಿ
ಮೆದುವಾದ ರೀತಿ ಕಂಡಿತು; ಬುಕ್ಕರಾಯ
ಕಟ್ಟಿಸಿದ ಕಟ್ಟೆ ಆ ದಿನ ಮಹಾತಾಯಿ
ಮುಸಿಲಿ ಜೀವವ ತೆತ್ತ ತಪದ ಫಲದಿಂದ
ಮತ್ತೆ ಹೊಸದಾಗಿ ನಿಂತಿತು. ಯಾವ ಬಂಧ
ಎಂತು ಇದ ಮಾಡಿತೋ ಬಲ್ಲವರು ಯಾರು?
ನನಗೆ ಒಪ್ಪಿಗೆಯಿಲ್ಲ, ಕೆರೆಗೆ ಬಹ ನೀರು,
ಒಂದು ದೇವತೆಯೆಂಬ ನುಡಿ; ಅಂತೆ ಅದನು
ಬಲಿಕೊಟ್ಟು ನಿಲಿಸಿಕೊಳಬಹುದೆಂಬ ಹದನು.
ನೀರ ದೇವತೆ ಬಲಿಯ ಬಯಸಿ ಅದ ಪಡೆದು
ಕಟ್ಟೆಯನು ಕಿತ್ತು ಹಾಕದೆ ಕೋಪ ತಡೆದು
ಅಲ್ಲೆ ನಿಂತಿತು ಎನ್ನುವುದಕಿಂತ, ನಾನು
ಇಂತು ಹೇಳುವೆನು: ಮಾನವ ತನಗೆ ತಾನು
ಮನದಿ ಕಲ್ಪಿಸಿಕೊಂಡ ಹುಚ್ಚ ದೇವತೆಗೆ
ಪೂಜೆ ಮಾಡುವ ನೆವದಿ ಇಳಿದಿರುವ ಗತಿಗೆ
ಬೇಸತ್ತು ಬಾನದೈವತ ಬತ್ತಿತೆಂದು.

ಅಂತು ಆ ದಿನ ನಮ್ಮ ಮುಸಿಲಿಯನು ಕೊಂದು
ಊರು ಬಾಳಿತು ; ಅಂದು ಮೊದಲಿಟ್ಟ ಗುಡಿಯು
ಬೇಗದಲೆ ಕಟ್ಟ ಮುಗಿಸಿತು. ನಮ್ಮ ಕಡೆಯು
ಚಿಳ್ಳೆ ಪಿಳ್ಳೆಗೆ ಕೂಡ ಮುಸಿಲಮ್ಮ ಎಂಬ
ಹೆಸರು ಚೆನ್ನಾಗಿ ತಿಳಿದಿದೆ. ಅದನು ತುಂಬ
ಪ್ರೀತಿಯಲಿ ನುಡಿವರು ಅನಂತಪುರದವರು ;
ಬಂದವರಿಗೆಲ್ಲ ಆ ಗುಡಿಯು ತೋರುವರು.

* * *

ಮುಸಿಲಮ್ಮ ಬಲಿಯಾದ ಕತೆ ಓದಿ ರಘುನಾಥ
ಕೈಯ ಕಾಗದವ ಬದಿಗಿಟ್ಟು ತಲೆಯನು ಎತ್ತಿ
ಎಲ್ಲರನು ನೋಡಿದನು. ಯಾರಿಗೂ ಕ್ಷಣಹೊತ್ತು
ನುಡಿಯೆ ಮನಸಿಲ್ಲ. ದುಗುಡ. ರಾಮಕೃಷ್ಣಯ್ಯ
ಆಮೇಲೆ ತಮ್ಮ ಟೀಕೆಯನು ನುಡಿದರು: "ಮುಸಿಲಿ
ತೆಲುಗಿನಲಿ ಮುದುಕಿ. ಮುಸಿಲಮ್ಮನೆನೆ ಯಾವಳೋ
ಮುದುಕಿಯೆಂದೆನ್ನಮನ ಚಿತ್ರಿಸಿತು. ತಾ ಸತ್ತು
ಊರ ಉಳಿಸಿದಳೆನಲು ಯಾವುದೋ ಬೇರೊಂದು
ರೀತಿಯಲಿ ಜೀವವನು ತೆತ್ತಳೆಂದೆಣಿಸಿದೆನು.
ಮನ, ತನ್ನ ತಾನೆ ಅರಿಯದೆ, ಒಳ್ಳಿತಾಯಿತು
ಎಂದು ನೆಮ್ಮದಿ ಕೆಡದೆ ಇತ್ತು. ನಿಜದಲಿ ಮುಸಿಲಿ
ಮೊದಲ ಗರ್ಭದ ಎಳೆಯ ಹೆಣ್ಣೊಂದು ಕಂಡೊಡನೆ
ಜೀವ ಕದಡಿತು. ಇದೂ ಒಂದು ರೀತಿಯ ಹುಚ್ಚು.
ಮುದುಕಿಯಾದರೆ ಏನು? ಸಾವು ಅವಳಿಗು ನೋವೆ.
ಸಾವಿನಲಿ ಮಂಗಳವ ಕಂಡಳೇ, ಎಳೆಯಳಿಗು
ಆ ನೋವು ಸಹ್ಯವೇ. ಮುಸಿಲಮ್ಮನಂದದಲಿ
ಮನೆಗಾಗಿ ಜನಕಾಗಿ ಧಣಿಗಾಗಿ ಛಲಕಾಗಿ
ಸಾವ ಭಯವನು ಮರೆತುತಾಗಿದವರದು ಎನಿತು
ನೂರು ಸಾಸಿರ ನಮ್ಮ ನಾಡಿನಲಿ! ಎಲ್ಲೆಲ್ಲು

ವೀರಕಲ್ಲಿದೆ; ಎಲ್ಲು ಮಾಸ್ತಿಗಲ್ಲಿದೆ; ಎಲ್ಲು
ದೇಹವನು ತೃಣಕಿಂತ ಕಡೆಯೆಂದು ಕಿತ್ತೊಗೆದ
ಅತುಲ ಧೈರ್ಯದ ಸಂಪ್ರದಾಯವಿದೆ. ಮುಸಿಲವ್ವ
ಈ ವೀರ ಪಡೆಯ ಸೈನಿಕಳೊಬ್ಬಳೆಂಬೆನು.
ಎಳೆ ಹೆಣ್ಣು ಧೀರೆ ಮುಸಿಲವ್ವಗೆ ನಮೋ ನಮೋ.
ಸಂಪ್ರದಾಯದ ರೀತಿ, ಮತ್ತು ನಮೋ ನಮೋ.
ಇಂತಪ್ಪ ಧೃತಿಗೆ ಇಂತಪ್ಪ ನಿಃಸ್ವಾರ್ಥಕ್ಕೆ
ದೇವರೆಂಬುದೆ ಹೆಸರು, ಗುಡಿಯೆ ನಿಲ್ಲುವ ತಾಣ.
ದೇವಿ ಮುಸಿಲಿಗೆ ನಮೋ. ಜಲವ ದೇವತೆಯೆಂದು
ಬಗೆದು ಹೆಣ್ಣನು ಅದಕೆ ಬಲಿಕೊಟ್ಟ ಮಂದಿಯನು
ಕತೆ ಸ್ವಲ್ಪ ಹಳಿದಿಹುದು. ಆ ಮಂದಿ ಮಾಡಿದುದು
ಸರಿಯಲ್ಲ ಎಂದು ನಾನೊಪ್ಪುವೆನು. ಆದರೆ?
ಊರು ಉಳಿಯಲಿ ಎಂದು ಒಬ್ಬಳನು ಕೊಲ್ಲುವುದು,
ಎಂದಿದ್ದರೂ ನ್ಯಾಯ. ಅವರ ನಂಬಿಕೆ ತಪ್ಪು.
ನಿಜ. ಇಂದು ತಪ್ಪು. ಅಂದೂ ತಪ್ಪೆ? ಈಗಳೂ
ಸ್ವಾತಂತ್ರ್ಯಕೆಂದು, ದೇಶದ ರಕ್ಷಣೆಗೆ ಎಂದು,
ಜನ ಸಾಯುವರು; ಉಳಿದ ಜನ ಅದಕೆ ಒಪ್ಪುವರು.
ಇವರ ನಂಬುಗೆ ಬಹಳ ಸರಿಯೇನು? ಆ ದಿನಕೆ
ಸರಿಯೆಂದು ತಿಳಿದುದನು ಆ ಮಂದಿ ನಡಸಿದರು.
ಈಗಳೂ ಕುರಿ ಕೋಣ ಇಂತೆಯೇ ಸಾಯುತಿವೆ.
ಮನುಜನೂಟಕೆ ಎಷ್ಟು ದನ? ಹಕ್ಕಿ ಕುರಿ ಹಂದಿ?
ನಿಜದಲಿ ಅಹಿಂಸೆಯೇ ಎಲ್ಲಕೂ ಹಿರಿ ಧರ್ಮ.
ಇದ ಲೋಕ ಕಲಿಯಬೇಕಾಗಿಹುದು. ಕಲಿಯಲಿ.
ಯಾವ ಕಾರಣಕೆ ಆಗಲಿ, ಎಂತೆ ಆಗಲಿ,
ಜೀವವನು ತೆಗೆಯಬಾರದು ಎಂಬ ತತ್ವಾರ್ಥ
ಮನುಜನೆದೆಯಲಿ ಬೇರುಬಿಟ್ಟು ನಿಲ್ಲಲಿ. ಇಂದು,
ನಮ್ಮ ಲೋಕದಲಿ ಎನಿತೋ ರೂಪವನು ಧರಿಸಿ

ಹಿಂಸೆಯನು ಪ್ರೇರಿಸುತಲಿಹ ಗಾಢ ಅಜ್ಞಾನ
ಹರಿದು ಹೋಗಲಿ ಎಂದು ದೈವವನು ಬೇಡುವೆನು
ಹಸುರಾಗಿ ಹಸನಾಗಿ ರಸವಾಗಿ ರುಚಿಯಾಗಿ
ತನಗೆ ಬೇಕಾಗಿದ್ದ ಬಾಳುವೆಯ ಜನಕಾಗಿ
ಸುರಿದಿತ್ತು ದೇವರೊಳಸೇರಿರುವ ಮುಸಿಲಮ್ಮ
ತನ್ನ ಆ ಸ್ಥಲದಿಂದ ಮನುಜ ಹೃದಯವ ಮುಟ್ಟಿ
ಈ ಶುಷ್ಕ ಕಾಷ್ಠವನು ಕೊನರಿಸಲಿ, ಬೋರ್ಗಲ್ಲ
ಕರಗಿಸಲಿ. ಅವಳ ತನ್ನೊಳಗೆ ಅಡಗಿಸಿಕೊಂಡ
ದೈವ ಇನ್ನವಳಂತೆ ಜೀವ ನೋಯದ ತೆರಕೆ
ಮನುಜ ಕುಲವನು ಒಳ್ಳೆ ದಾರಿಯಲಿ ನಡಸಲಿ."
ರಾಮಕೃಷ್ಣಯ್ಯ ಮನ ಬಿಗಿಹಿಡಿದು ತಮ್ಮರಿವ
ಟೀಕೆಯನು ಮುಗಿಸಿದರು. ರಾಮು "ನಾಳೆಯ ಸರತಿ
ಸೀತಣ್ಣನದು" ಎಂದ. ಸೀತಣ್ಣ ಮರುದಿನ
ಒರೆದ ಕತೆ ಮುಂದೆ ಇದೆ. ಹೆಸರು "ಜೀನಿ ಡ ಆರ್ಕ್"

# ಜೀನಿ ಡ ಆರ್ಕ್

ಮುಸಿಲಮ್ಮ ತನ್ನ ಜೀವವ ತೆತ್ತು ಹೆತ್ತೂರ
ರಕ್ಷಿಸಿದ ಪರಿಯು ಕೇಳುವ ಹೊತ್ತಿನಲಿ ನನಗೆ
ಬೇರೊಂದು ದೇಶದಲಿ ಇಂತದೇ ಬೇರೊಂದು
ಹೆಣ್ಣು ತನ್ನೊಂದು ತೆರದಲಿ ನಾಡ ರಕ್ಷಿಸಿದ
ಚರಿತೆ ನೆನಹಾಯ್ತು. ಆ ಹೆಣ್ಣು ಜೀನಿ ಡ ಆರ್ಕ್.
ಫ್ರಾನ್ಸ್ ದೇಶ ಈಗ ಜರ್ಮನರ ಹಗೆಯೆನ್ನುತಿದೆ;
ಆಂಗ್ಲಜನ ನೀಡುತಿಹ ನೆರವಿಂದ ಅದು ಈಗ
ವೈರಿಯನು ತಡೆದು ಜಯದಲಿ ಮೆರೆದು ಲೋಕದಲಿ
ಸ್ವಾತಂತ್ರ್ಯವಾದವನು ನೆಲೆಗೊಳಿಪ ನಾಡಾಗಿ
ನಿಂತಿಹುದು. ಹಿಂದೊಮ್ಮೆ ಆ ದೇಶ ತನ್ನ ಈ
ಆಂಗ್ಲ ಜನರನೆ ಕಾದಿತು. ಆಂಗ್ಲ ಸೈನಿಕರು
ಆರ್ಲಿಯನ್ಸ್ ಎಂಬೊಂದು ಇದರ ಹಿರಿನಗರವನು
ಹಿಡಿದುಕೊಂಡರು. ಫ್ರಾನ್ಸ ರಾಜನಳಿದಿರೆ ಅವನ
ಮಗ ಗಾದಿಯೇರಿ ತಾ ಆ ನಾಡ ದೊರೆಯೆಂದು
ಹೇಳುವುದಕಿಲ್ಲವಾಯಿತು. ಇವರ ಸಾಮಂತ,
ಬರ್ಗಂಡಿ ಸೀಮೆಗರಸಾದವನು, ಆಂಗ್ಲರಿಗೆ
ಜೊತೆಯಾಗಿ, ಫ್ರಾನ್ಸ್ ಹಗೆಯ ಪಾಲೆ ಆಗಲಿ ಎಂದು
ಅರಗುವರಸಿಗೆ ಮಲೆತು ನಿಂತಿಹನು. ತರುಣ ದೊರೆ,
ಹಾವ ಬಾಯಲಿ ಕಪ್ಪೆ ನೋಯುವುದಕೆಷ್ಟೋ
ಅಷ್ಟಕೇ ಜೀವಿಸಿರುವಂದದಲಿ, ಸೋಲುವುದು
ಎಷ್ಟೊ ಅಷ್ಟಕೆ ರಾಜಪುತ್ರನೆನ್ನಿಸಿಕೊಂಡು
ಚೀನ್ಯ ಎಂಬೂರಿನಲಿ ಅಡಗಿಹನು. ಫ್ರೆಂಚ್ ಸೇನೆ
ಒಂದು ಕಡೆ ಸೋತು, ಮತ್ತೊಂದು ಕಡೆ ಸೋಲುವೆನೊ
ಎಂಬ ಅಂಜಿಕೆಯಿಂದ ಹಿಂಜರಿದು, ಮೂರನೆಯ
ಒಂದು ಕಡೆ ಸೋಲುವುದೆ ನಿಜ ಕಾದಿ, ಫಲವೇನು,

ಎಂದು ಧೃತಿಗೆಟ್ಟು ನಿಂತಿದೆ. ನಿಂತುದೇತರದು?
ನೆಲದಿ ಕೆಡೆದಿದೆ. ದಿಕ್ಕುಗೆಟ್ಟು ನಾಡಿನ ಜನತೆ
ಮುಂದೇನು ಎಂದೆ ತೋರದೆ ಕದಡು ಮನಸಿನಲಿ
ಕಂಗೆಟ್ಟು ತೊಳಲುತಿದೆ. ಇಂತ ಹೊತ್ತಲಿ ಒಬ್ಬ
ಎಳೆಹೆಣ್ಣು, ತಾನು ದೈವಾಜ್ಞೆಯನು ಪಡೆದಿಹೆನು,
ಫ್ರಾನ್ಸ್ ದೇಶವನು ಹಗೆಯ ಕೈಯಿಂದ ಬಿಡಿಸುವೆನು,
ಫ್ರಾನ್ಸ್ ರಾಜಪುತ್ರನಿಗೆ ಪಟ್ಟಾಭಿಷೇಕವನು
ನಡೆಸುವೆನು, ಎಂದು ಮುಂಬರಿದು ಬಂದಳು; ಸೋತ
ಸೇನೆಯನು ಗೆಲವಿಗೊಯ್ದಳು; ಹಗೆಯ ಕೈಯಿಂದ
ಆರ್ಲಿಯನ್ಸ್ ನಗರವನು ಬಿಡಿಸಿದಳು; ರಾಜನಿಗೆ
ಪಟ್ಟಕಟ್ಟಿದಳು; ವೈರಿಯ ಕೈಗೆ ಸೆರೆ ಸಿಕ್ಕಿ,
ಅವರಂತೆ ನಡೆದ ಮತವಂತರೆದುರಲಿ, ತಾನು
ಮಾಟಮಾಡಿದಳೆಂಬ ದೂರ ತಲೆಯಲಿ ಹೊತ್ತು,
ನಿರ್ದೋಷಿ, ದೋಷಿಯೆಂದೇ ಅವರು ನಿರ್ಧರಿಸೆ,
ಚಿತೆಯೇರಿ ಧೃತಿಯಿಂದ ಜೀವವನು ಬಿಟ್ಟಳು.
ಸ್ವಲ್ಪವಾದರು ಚರಿತೆ ಓದಿರುವ ಎಲ್ಲರೂ
ಇಷ್ಟು ಸಂಗತಿಯ ಬಲ್ಲರು. ಇದರ ವಿವರವನು
ಬಹುಮಂದಿ ಕಾಣದಿರಬಹುದು. ಅದ ಹೇಳುವೆನು.

ಜೀನಿ ಫ್ರಾನ್ಸಿನ ಒಂದು ಹಳ್ಳಿಯಲಿ ಹುಟ್ಟಿದಳು.
ಡೋಮ್ರೇಮಿ ಎಂದು ಹಳ್ಳಿಯ ಹೆಸರು. ಈ ಹಳ್ಳಿ
ಚೆಲುವಿನ ಲೊರೇಯ್ನ್ ಪ್ರಾಂತದೊಳಗಿಹುದು. ಫ್ರಾನ್ಸಿನಲಿ
ಇಂತ ಚೆಲುವಿನ ಪ್ರಾಂತ ಇನ್ನಿಲ್ಲ. ನಾನೂರು
ವರ್ಷಗಳ ಹಿಂದೆ ಈ ನಾಡಿನಲಿ ಬಾಳ್ಗಿಯ್ದ
ಆ ಜನರ ಬಾಳ್ವೆಯನು ಇಲ್ಲಿ ಬಣ್ಣಿಸಲೆಂತು?
ನೆಲದಗುಣ ವಾಯುಗುಣ ಮಳೆ ಬಿಸಿಲು ಜನದಗುಣ
ಹತ್ತ ಹತ್ತಿರ ನಮ್ಮ ಕನ್ನಡದ ನೆಲ ಗಾಳಿ
ಮಳೆ ಬಿಸಿಲು ಜನದ ಗುಣದಂತೆಯೇ ಇತ್ತೆಂದು

ನನ್ನ ಊಹೆ. ಇಂತು ಬಾಳುತಿಹ ಜನಗಳಲಿ
ಕ್ರೈಸ್ತ ಧರ್ಮದ ಕ್ಯಾಥೊಲಿಕ್ ಮತವೆ ವಾಡಿಕೆ.
ಕ್ಯಾಥೊಲಿಕ್ ಮತ ಸನಾತನ ಧರ್ಮದೊಳಗಿರುವ
ಭಕ್ತಿಮಾರ್ಗದ ಮತಗಳಂತೆ ತಾನೊಂದು ಪಥ.
ದೈವ, ಕೀರ್ತನ, ಪೂಜೆ, ಕಪ್ಪ ಕಾಣಿಕೆ, ಹರಕೆ
ಪ್ರಾರ್ಥನೆಯೆ ಮೊದಲಾದ ನಮ್ಮೆಲ್ಲ ಸರಿತಪ್ಪು
ಎಲ್ಲವೂ ಆದರೊಳಿವೆ. ಶಿಲುಬೆಗೇರಿದ ಕ್ರೀಸ್ತ,
ಆವನ ತಾಯ್ ಮೇರಿ, ಇವರೊಪ್ಪಿ ನಂಬಿದ ದೈವ,
ಈ ಮೂವರನು ನಂಬಿ ಭಕ್ತಿಯಲಿ ಮುಕ್ತಿಯನು
ಸಾಧಿಸಿದ ಎನಿತೊ ಭಕ್ತರು, ಇವರಿಗೊಮ್ಮೊಮ್ಮೆ
ಪ್ರತ್ಯಕ್ಷವಾಗಿ ಎದುರಲಿ ನಿಂತು ದೈವೇಚ್ಛೆ
ಎಂತು ಎಂಬುದನು ತಿಳಿಸಿದ ದೇವದೂತರು,
ಮೈಕಯಲ್, ಗೇಬ್ರಿಯಲ್, ಇವರು ಈ ನಾಡೊಳಿಹ
ಹಸುಮನದ ಜನದ ನಂಬಿಕೆಯ ಪೂಜಾವಸ್ತು.
ದುಡಿವ ಜನ, ದುಡಿಮೆಯನು ನೆನೆದು ಬೆಳೆಯನು ಕೊಟ್ಟು
ಸಲಹುತಿಹ ನೆಲ, ಬೆಳೆಯುತಿಹ ನೆಲಕೆ ನೆರವಾಗಿ
ಮಳೆ ಬಿಸಿಲ ಕರೆವ ಬಾಂದಳ, ಬೆಳಕ ಹಗಲುಗಳು,
ತಾರೆ ತಿಂಗಳ ತಂಪು ಬೆಳಕಿನಲಿ ಬೆಳೆದಿರುಳು,
ಬಾಳುವೆಯ ಹಿಡಿದು ನಡೆಸುವ ಒಂದು ನಂಬಿಕೆ :
ಇಂತೆಲ್ಲ ಸಾಮಗ್ರಿ ನೆರೆದಿರೆ ಲೊರೇಯ್ನ್ ಪ್ರಾಂತ
ಶಾಂತ ಜೀವನದಿ ನಡೆಯುತಲಿಹುದು. ಈ ನಾಡ
ಎಲ್ಲ ಗುಣ ಇಲ್ಲೇನು ಸಾರವಾಯಿತೊ ಎನಲು
ಆದರೊಂದು ಸುಪ್ರಶಾಂತ ಸ್ಥಲದಿ ಡೋಮ್ರೇಮಿ
ವಸತಿ ಮಾಡಿಹುದು.
ಜೀನಿಯ ತಂದೆ ನೆಲಗೆಯ್ವ,
ಕುರಿಯ ಸಾಕುವ, ಒಬ್ಬ ಬೇಸಾಯಗಾರ. ಈ
ಸಾಮಾನ್ಯ ಮನೆತನದ ಹುಡುಗಿ ಎಲ್ಲರ ತೆರನೆ

ಎಳೆತನವ ಕಳೆದು ಊರಿನ ಆಟಪಾಟದಲಿ
ಬೆರೆತು ಬೆಳೆದಳು. ಇಂದು ದೇವ ವಾಸರ, ಇಂದು
ಮೈಕಯಲ್ ದೇವದೂತನ ಚತುರ್ದಶಿ, ಇಂದು
ಮೇರೀ ಮಹಾರಾತ್ರಿ, ಕ್ಯಾಥರಿನ್ ಮಾರ್ಗರೀಟ್
ಅಕ್ಕದಿರ ಪುಣ್ಯದಿನಗಳು ಇಂದು ಇಂದೆಂದು,
ಊರ ಎಲ್ಲಾ ಹಬ್ಬ ಹುಣ್ಣಿಮೆಯ ಉತ್ಸವದ
ಉಸಿರನೆಳೆದಳು. ಎಲ್ಲರಂತೆ ಉತ್ಸವಗಳಲಿ
ಬೆರೆತ ಎಳಗೂಸು ಒಂದಂಶದಲಿ ತನ್ನದೇ
ಒಂದು ರೀತಿಯನು ತೋರಿದಳು. ಉಳಿದೆಳೆಯರಿಗೆ,—
ಎಳೆಯರಿಗೆ ಮಾತ್ರವೇ? ಹಿರಿಯರಿಗು,—ಗೇಬ್ರಿಯಲ್
ಮಾರ್ಗರೀಟ್, ಕ್ಯಾಥರೀನ್, ಯೇಸು, ಮೇರೀ, ಬರಿಯ
ಹೆಸರು; ಬರಿ ಹೆಸರಲ್ಲ, ಎದುರೊಳಿಹ ಮೂರ್ತಿಗಳು;
ಜೀನಿಗಿವರೆಲ್ಲ ತಾಯ್ತಂದೆ ಗೆಳತಿಯರಂತೆ
ನಿಜದ ಜೀವದ ಮಂದಿ. ಎಳೆ ಹುಡುಗಿ ಎಲ್ಲಿಯೋ
ಒಬ್ಬಳೇ ಕುಳಿತುಕೊಂಬಳು. ಮೇರಿ ಮಾರ್ಗರೀಟ್
ತನ್ನೊಡನೆ ನುಡಿಯುತಿಹರೆಂಬಂತೆ ನಡೆಯುವಳು.
ಡೋಮ್ರೇಮಿಯೆಲ್ಲೆಯಲಿ ಒಂದು ಬನ. ಸುತ್ತೆಲ್ಲ
ಕಿರಿಕಿರಿಯ ಮಲೆಗಳಿರೆ ಇಲ್ಲಿ ಮರಗಳ ನಡುವೆ
ತಿಳಿನೀರ ಊಟೆಯೊಂದಿಹುದು. ಸುತ್ತಣ ಬಂಡೆ;
ಹತ್ತು ಕಡೆಯಿಂದಲೂ ಇಳಿವ ಮರಗಳ ಸಾಲು;
ಮಧ್ಯದಲಿ ನಿಬಿಡವಾಗಿಹ ಗುಂಪು ತೋಪು; ಆ
ಮಧ್ಯೆ ಮೇಲುಕ್ಕಿ ನಲಿಯುವ ಚಿಲುಮೆ. ಎಳೆ ಜೀನಿ
ಎಷ್ಟೊಸಲ ಒಬ್ಬಳೇ ಈ ಸ್ಥಳಕೆ ಸಾರುವಳು;
ನೆರಳ ಒತ್ತಡದಿ ಮರದಡಿ ಕುಳಿತು, ಚಿಲುಮೆ ಜಲ
ಕಲಕಲದ ರವದಿಂದ ತನ್ನ ದಾರಿಯ ಹಿಡಿದು
ಹರಿದು ಹೋಗುವುದ ಒಂದೇ ಸಮನೆ ನೋಡುತ್ತ,
ಹೊತ್ತು ಹೋದುದು ಕಾಣದಲ್ಲಿಯೇ ಧ್ಯಾನದಲಿ

ಮೆಯ್ಯ ಮರೆವಳು. ಧ್ಯಾನವೇನೊ ಬಲ್ಲವರಾರು?
ಆ ಬನದ ಮರಗಳಲಿ ಒಂದ ಕಿನ್ನರರ ಮರ
ಎಂದು ಜನ ಹೇಳುವರು. ಕಿನ್ನರರು ಆ ಮರಕೆ
ಆಗಾಗ ಬಂದು ಅದರಡಿ ಕುಣಿದು ಮರೆಯುವರು
ಎಂದು ಅವರಲಿ ಒಂದು ನಂಬಿಕೆ. ಆಗಾಗ
ಯಾವನಾದರು ಒಬ್ಬ ತಾನವರ ಕಂಡೆನು
ಎಂದು ಹೇಳುವುದುಂಟು. ಕಿನ್ನರರ ಕಂಡಳೋ
ಏನೊ ಎಳಗೂಸು ಜೀನಿ? ಇದೇ ಬನದಲ್ಲಿ
ಇದುವೆ ಮರದಡಿ ಅವರು ನರ್ತಿಸುವ ಹೊತ್ತಿನಲಿ
ಕಿನ್ನರಿಯರಲಿ ಒಬ್ಬ ಚೆಲುವೆಯನು ಬೋರ್ಲೆರ್ಮಾ
ಎಂಬ ರಾವುತ ಕಂಡನೆಂದು, ಚೆಲುವಿಗೆ ಸೋತು
ಅಲ್ಲೆ ನಿಂತನು, ಚೆಲುವೆಯೂ ಒಂದು ಕ್ಷಣ ಬಿಟ್ಟು
ಇವನ ಕಂಡಳು, ಅವನು ತನಗೆ ಸೋತಂದದಲಿ
ತಾನು ಅವನಿಗೆ ಸೋತು ಅವನೊಡನೆ ಪ್ರೇಮವನು
ಬೆಳಸಿದಳು, ಅದು ಎಷ್ಟೊ ಕಾಲ ಈ ಪ್ರಣಯಿಗಳು
ಈ ಬನದಿ ಕೂಡಿ ಸುಖಿಸಿದರು, ಎಂದೊಂದು ಕತೆ.
ಎಂದಿನದೊ ಎಂಬ ಈ ಕತೆಯ ಊರವರೆಲ್ಲ
ಆಡಿಕೊಂಬರು. ಜೀನಿ ಕಾದಲರ ಕಂಡಳೋ?
ಕಿನ್ನರರು ಚಿಲುಮೆಯಲಿ ಮಿಾಯುವರು; ಅದರಿಂದ
ಅವರೊಂದು ಮಹಿಮೆ ನೀರಿನಲಿ ಬೆರೆತಿದೆ; ಅದನು
ಕುಡಿಯೆ ಎಲ್ಲಾ ತರದ ಜ್ವರ ವಾಸಿಯಹುದೆಂದು
ಜನತೆ ನಂಬಿಹುದು. ವರ್ಷಕೆ ಒಮ್ಮೆ ಗುರುಕ್ರೀಸ್ತ
ಸ್ವರ್ಗಕೇರಿದ ಹಬ್ಬದಂದು ಊರಿನ ಮಂದಿ
ದೇಗುಲದ ಪೂಜಾರಿಯೊಡನೆ ಇಲ್ಲಿಗೆ ಬಹರು.
ಪೂಜಾರಿ ಮಂತ್ರಗಳ ನುಡಿದು ನೀರನು ಹರಸಿ
ದೈವಪ್ರಸಾದವನು ಅಲ್ಲಿ ಆ ಸುತ್ತಿನಲಿ
ಚೆಲ್ಲುವನು. ಆ ಪೂತಜಲ, ಪೂತವನ, ಪೂತ

ಪಾತ ಆತಪಗಳಲಿ ತನ್ನ ಆ ಅಂತರ್ಯ
ಪೂತವಾಗಿರೆ ಜೀನಿ, ಹೊರಗೆನಿತೊ ಒಳಗನಿತು,
ಜನದೊಡನೆ ಎನಿತೊ ಅನಿತೇ ದೈವವೆಂಬೊಂದು
ತನ್ನ ನಂಬಿಕೆಯು ಸತ್ವದ ಜೊತೆಗೆ, ಬಾಳುತ್ತ
ಹದಿನಾರು ಹರೆಯವನು ಮುಟ್ಟಿದಳು.

ಆಗಳೇ
ಆಂಗ್ಲರುಪಟಳದಿಂದ ಫ್ರಾನ್ಸ್‌ದೇಶ ತಲ್ಲಣಿಸಿ
ಮುಂದುಗಾಣದೆ ಇಹುದು. ಹಗೆಯ ಸೇನೆಯ ಒಂದು
ದಳ ಲೊರೇಯ್ನಿನ ಕೆಲವು ಊರುಗಳ ಮೇಲ್ವಾಯ್ದು
ನಿಶ್ಶಸ್ತ್ರ ನಿಸ್ಸಹಾಯ ನಿರಸ್ತ್ರ ಬಡಪಾಪಿ
ಪ್ರಜೆಯ ಧನ ಧಾನ್ಯವನು ಮಾನವಸು ಕಸಿದಿತು.
ಡೋಮ್ರೇಮಿಯನು ಮುಟ್ಟಿತೋ ಇಲ್ಲವೋ ಕಾಣೆ.
ಆ ಊರ ಮುಟ್ಟಿದರು ಮುಟ್ಟದಿದ್ದರು, ಜೀನಿ
ತನ್ನ ದೇಶದ ಜನದ ದುರ್ಗತಿಯ ಕಣ್ಣಾರ
ಕಂಡು ನೋವುದಕೆ ಬೇವುದಕೆ ಬೇಕೆನಿತನಿತು
ಹತ್ತಿರಕೆ ಸುಳಿದು ಬಂದಿತು. ಜೀನಿ ಒಂದು ದಿನ
ಕಿನ್ನರರ ವನದ ಮಧ್ಯದಲಿ ಚಿಲುಮೆಯ ಬದಿಗೆ
ಕುಳಿತಿರಲು ದೈವ ಅವಳನು ಕುರಿತು "ಜೀನೆಟ್"—
ಜೀನಿ ಎಂಬುದರ ಅಕ್ಕರೆಯ ಆಕೃತಿ ಜೀನೆಟ್,
ಕಿರುಜೀನಿ ಎಂಬ ಅರ್ಥದ ಮಾತು—"ಜೀನೆಟ್,
ಫ್ರಾನ್ಸ್ ದೇಶ ಐದಿರುವ ದುರ್ಗತಿಯ ಕಂಡೆಯಾ?
ವೈರಿಯ ವಿಜೃಂಭಣೆಯ ನೋಡಿದೆಯ? ಅಮ್ಮಯ್ಯ,
ಏಳು; ರಾಷ್ಟ್ರವನು ಈ ಧೂರ್ತರುಪಟಲದಿಂದ
ಬಿಡಿಸು; ನಡೆ" ಎಂದು ಹೇಳಿತು. ದೈವ ಹೇಳಿತೆನೆ
ಏನೆ? ನಿಜವಾಗಿ ದನಿಯೊಂದು ಹೇಳಿದ ತೆರನೆ
ಕಿವಿಗೆ ಕೇಳಿಸಿತು. ಎದ್ದಳು ಜೀನಿ. ಎದ್ದವಳು
"ನಾನೊಬ್ಬ ಎಳೆ ಹೆಣ್ಣು; ಈ ಕಾರ್ಯ ನನ್ನಿಂದ

ಆಗಬಹುದೇ” ಎಂದು ಕೇಳಿದಳು. “ನಾನಿಹೆನು;
ಚಿಂತೆ ಬೇಡೆಲೆ ಅಕ್ಕ; ನಾ ನಿನ್ನ ಜೊತೆಯಲೇ
ನಡೆಯುತಿರುವೆನು,” ಎಂದು ದನಿ ಮರಳಿ ನುಡಿಯಿತು.
ನಡೆದು ಬಂದಳು ಜೀನಿ. ಊರ ಜನರಿಗೆ ದೈವ
ತನಗೆ ಆಜ್ಞೆಯನಿತ್ತ ಪರಿಯಿದನು ಅರುಹಿದಳು.
ನಂಬಿದರೊ ಜನ ಎಂಬಿರಾ? ಅವಳ ನಂಬಿಕೆಯ
ಸ್ವಚ್ಛ ದೀಪ್ತಿಯ ಮುಂದೆ ಜನದ ಅಪನಂಬಿಕೆ
ನಿಲ್ಲಬಹುದೆಂತು? ನೂರಾರು ಜನ ನಂಬಿದರು;
ಒಬ್ಬರಿಬ್ಬರು ನಂಬದಿರೆ ಬಿಡಲಿ. ಹೆತ್ತವನು
ನನ್ನ ಮಗಳಿಗೆ ಹುಚ್ಚು ಎಂದವಳ ಗದರಿದನು;
ದೇಗುಲದ ಪೂಜಾರಿ ಈ ಹುಡುಗಿ ಯಾವುದೋ
ದೆವ್ವದೊಂದಿಗೆ ಮಾತನಾಡಿದಳು ಎಂದನು.
ತಂದೆ ಪೂಜಾರಿ ಆಡಿದ ಮಾತುಗಳ ಜೀನಿ
ಕೇಳಿದಳು. “ನನಗೆ ಹುಚ್ಚೂ ಇಲ್ಲ; ನನ್ನೊಡನೆ
ನುಡಿಯುತಿಹ ಸತ್ವ ಯಾವೊಂದು ದೆವ್ವವು ಅಲ್ಲ;
ದೇವರೇ ನನ್ನೊಡನೆ ನುಡಿದಿಹರು, ನನಗಿಂತು
ಆಣತಿಯ ನೀಡಿಹರು; ಇದಕೆ ಬೇರೆಯ ಸಾಕ್ಷಿ
ಏಕೆ? ನಾ ಇಂದೆ ಯೋಧನ ವೇಷವನು ತಾಳಿ
ನನ್ನ ದೇವರ ಹೆಸರ ಕೇತನವ ಹಿಡಿದೆತ್ತಿ
ಜೈತ್ರಯಾತ್ರೆಯಲಿ ನಡೆವೆನು; ವೈರಿಯನು ಬಡಿದು
ಅವನು ಹಿಡಿದಿರುವ ನಗರವನವನ ಕೈಯಿಂದ
ಬಿಡಿಸಿ ರಾಜಕುಮಾರನಿಗೆ ಪಟ್ಟಕಟ್ಟುವೆನು.
ಆಗ ತಿಳಿವುದು ನಿಮಗೆ, ಆಣತಿಯನಿತ್ತಿಹುದು
ದೈವವೋ ಅಲ್ಲವೋ ಎಂದು” ಎಂದಳು. ಅಂದೆ
ಯೋಧ ವಸ್ತ್ರವ ರಚಿಸಿದಳು; ಒಂದು ಬಾವುಟವ
ಮಾಡಲಪ್ಪಣೆಯನಿತ್ತಳು. ಮಾರನೆಯ ದಿವಸ
ಪುರುಷವೇಷದಲಿ ಬಾವುಟವ ಕೈಯಲಿ ಹಿಡಿದು

ವೈರಿಯನು ಗೆಲ್ದು ತಾಯ್ನಾಡ ಬಿಡಿಸುವ ವ್ರತದಿ
ವಿಜಯ ಯಾತ್ರೆಯಲಿ ಹೊರಟಳು.

ನಡೆದ ಸಂಗತಿ.

ಅಲ್ಲದಿರೆ, ಇದು ಒಂದು ಕಟ್ಟುಕತೆಯೆನಬಹುದು.
ಅಂತ ಅಚ್ಚರಿ ಅಂತ ಅದ್ಭುತದ ವಿವರಗಳು
ಇದರೊಳಿವೆ. ಎಲ್ಲಕೂ ಮೊದಲು ಜೀನೆಟ್ ತೊಟ್ಟ
ಆ ವಸ್ತ್ರ. ಆ ಕಾಲದಲಿ ಅವಳ ಜನದಲ್ಲಿ
ಹೆಣ್ಣಾದವಳು ಗಂಡ ವಸ್ತ್ರವನು ತೊಡುವುದೇ
ದೈವವಿದ್ರೋಹವೆನಿಸಿತ್ತು. ಜೀನಿಯ ತಂದೆ
ಅವಳು ಗಂಡಿನ ಉಡುಪ ತೊಟ್ಟ ಹದನನು ಕೇಳಿ
ಇಂಥ ಪಾತಕಿ ನನ್ನ ವಂಶದಲಿ ಹುಟ್ಟಿದಳೆ
ಅಯ್ಯೊ ಅಯ್ಯೋ ಎಂದು ಅಳಲಿದನು. ಇಂತವರ
ಮಧ್ಯೆ ಜನ್ಮವನೆತ್ತಿ ಬೆಳೆದಿದ್ದ ಈ ಹುಡುಗಿ
ಇಂಥ ವಸ್ತ್ರವ ಧರಿಸಿದಳೆ, ಇದೇ ಅಚ್ಚರಿ.
ಬಾವುಟವ ಹಿಡಿದು ಮುಂದರಿದ ಹುಡುಗಿಯ ಜೊತೆಗೆ
ಎಲ್ಲ ಊರಿನ ಸೈನ್ಯದವರು ನಡೆತಂದರು.
ನೆರೆಯೂರಿನವನೊಬ್ಬ ತನ್ನ ಬಳಿ ಇದ್ದೊಂದು
ಕುದುರೆಯನು, ಕಡಿವಾಣ ಜೀನು ತಂಗು ತಡಂಗು
ಎಲ್ಲವನು ಹಾಕಿ, ಜೀನಿಯ ಮುಂದೆ ನಿಲಿಸಿದನು.
ಜೀನಿ ಎಂದೂ ಕುದುರೆ ಏರಿ ಕುಳಿತವಳಲ್ಲ;
ಆದರೂ, ಏರಿ ವಾಡಿಕೆ ಇದ್ದುದಕು ಮಿಗಿಲು
ಹಗುರಾಗಿ ಅದನು ಏರಿದಳು; ಕಡಿವಾಣವನು
ಎಂತ ರಾವುತನಿಗೂ ಚೆನ್ನೆನಲು ಹಿಡಿದಳು.
ಊರಿಂದ ಊರ ಸಾರುತ, ಧೈರ್ಯಗೆಟ್ಟಿದ್ದ
ಜನಕೆ ಧೈರ್ಯವ ನೀಡಿ ನುಡಿದು ಸಂತಯಿಸುತ್ತ
ಸಣ್ಣೊಂದು ಸೇನೆಯೋ ಹಿಂಗಡೆಗೆ ಬರುತಿರಲು

ಬಾಲೆ, ನಾಲ್ಕಾರು ದಿನ ನಡೆದು, ರಾಜಕುಮಾರ
ಅಡಗಿದ್ದ ಪುರಕೆ ಬಂದಳು.

ಇನಿತೆ ದಿವಸದಲಿ
ಜೀನಿ ಎನ್ನುವ ಹೆಸರು ದೇಶದಲಿ ಎಲ್ಲೆಡೆಯು
ಎಲ್ಲ ಬಾಯಲು ನಲಿಯುತಿಹುದು. ಎಲ್ಲಿಯೊ ಕೆಲರು
ಹೊರತಾಗಿ ಉಳಿದೆಲ್ಲ ಮಂದಿ, ಈ ಬಾಲೆಯನು
ದೇವರೆ ನಿಯೋಜಿಸಿರುವನು ನಾಡ ಹೊರೆವುದಕೆ,
ಎಂದು ನಂಬಿಹರು. ರಾಜಕುಮಾರನಿರುವೆಡೆಗೆ
ಜೀನಿ ಬಂದಳು. ಅವನ ತಾ ನೋಡಬೇಕೆಂದು
ಹೇಳಿ ಕಳುಹಿದಳು. ದಳಪತಿ ದಂಡನಾಯಕರು
ಸೋತಿರುವ ಕಾರ್‍ಯದಲಿ ಎಳೆಹುಡುಗಿ ಗೆಲಬಹುದು
ಎಂದು ನಂಬುವನೆ ದೊರೆಮಗ? ಆದರೂ ಇವಳು
ನೋಡಬೇಕೆನಲು ಬೇಡ ಎಂಬ ಮನಸಿಲ್ಲ;
ಬರಲಿ ಎಂದನು. ಹುಡುಗಿ ಬಂದು ತಲೆಬಾಗಿ ನಿಲೆ,
ಓ ತರಳೆ, ನಾನಲ್ಲ, ಎಂದು ಹಾಸ್ಯದ ನುಡಿಯ
ಆಡಿದನು. ಮದುವೆಯಾಗದ ಹೆಣ್ಣು ಯಾರಿಗೋ
ಬಸುರಾಗಿ, ಯಾರಿಗೆನೆ ಮಿಂಡನನು ತೋರಿಸಲು,
ಅವನು ನಾನಲ್ಲ ಎಂಬಂತೆ ಇಹುದೇ ಇವನ
ಆ ನುಡಿಯ ಹಾಸ್ಯ. ಸಾಮಾನ್ಯದೊಂದೆಳೆಹೆಣ್ಣು
ಇಂತ ನುಡಿಯನು ಕೇಳಿದರೆ ನಾಚಿಕೊಳಬೇಕು.
ದೊರೆಮಗನ ಎದುರಿನಲಿ ನಿಂತಿದ್ದ ಎಳೆ ಹೆಣ್ಣು
ಸಾಮಾನ್ಯ ಹೆಣ್ಣಲ್ಲ. ಜೀನಿ, "ಹಾಗೆನ್ನದಿರಿ,
ನನ್ನೊಡೆಯ; ದೈವಕೃಪೆ ಇದೆ; ನೀವೆ ಈ ನಾಡ
ಆಳುವಿರಿ; ನನ್ನ ನುಡಿಯಂತೆ ನಡೆವುದು" ಎಂದು,
"ಸೇನಾನಿಗಾಣತಿಯ ಮಾಡಿ, ನಾ ವೈರಿಯನು
ಸೋಲಿಸಿಯೆ ಬಹೆನು" ಎಂದಳು. ರಾಜಪುತ್ರನಿಗೆ
ಇವಳ ದಿಟ್ಟದ ನುಡಿಯ ಕೇಳಿ ಅಚ್ಚರಿ; ಅಂತೆ

ಸಂತಸ. ಬಳಿಯ ಮಂದಿಯ ಜೊತೆಗೆ ಮಾತಾಡಿ,
"ಇವಳೇನೊ ಸಾಮಾನ್ಯ ಹೆಣ್ಣಲ್ಲ; ಸೈನಿಕರು
ಇವಳ ದೇವರು ನಡಸುತಿಹನೆಂದು ನಂಬಿಹರು;
ಗೆದ್ದಳೇ ಸಂತೋಷ; ಗೆಲಲಿಲ್ಲ, ಕೊರೆಯೇನು ?
ಈಗ ಇರುವಂತಿಹೆವು." ಎಂದು ಯೋಚಿಸಿ "ಒಳಿತು,"
ಎಂದು ಸೇನಾನಿಯನು ಕರೆದು "ಇವಳಾಜ್ಞೆಯಲಿ
ನಡೆದುಕೊಳ್ಳಿರಿ" ಎಂದು ಹೇಳಿದನು. ಆ ಸಂಜೆ
ಜೀನಿ ಸೇನಾನಿಯೆಡೆ ಎಲ್ಲ ಕಾರ್ಯವ ಕುರಿತ
ಆಳೋಚನೆಯನು ನಡಸಿದಳು. ಎಷ್ಟೋ ಕಾಲ
ಸೇನೆಗಳ ನಡಸಿದ್ದ ಆ ಪ್ರೌಢ ಯೋಧಪತಿ
ಇವಳ ಆಳೋಚನೆಯ ಚಾತುರಿಯ ಪರಿ ನೋಡಿ
ಬೆರಗುಪಟ್ಟನು. ಇವಳು ಹೇಳಿದುದ ಒಪ್ಪಿದನು.
ಮರುದಿವಸ ಇವಳ ನೆರವಿಗೆ ಎಂದು ದಳ ಎರಡ
ಜೊತೆಗೆ ಕಳುಹಿಸಲು ಏರ್ಪಡಿಸಿದನು.

ಸೇನಾನಿ

ಜೀನಿ ಅದು ಮೊದಲು ಆಡಿದ ಮಾತು ನಡೆದ ನಡೆ
ಎಲ್ಲವೂ ಜಗದ ಕಣ್ಣಿಗೆ ಬೆಡಗ ನೀಡುತ್ತ
ಸೋಜಿಗದ ಮಾಲೆಯಾಯಿತು. ಎಂತ ಹಿರಿಯರಿಗು
ಇವಳು ಸಂಕೋಚವಿಲ್ಲದೆ ಆಜ್ಞೆ ಮಾಡುವಳು.
ಗುರು, ಹಿರಿಯಗುರು, ರಾಜಗುರು ಇಂತು ಅಂತೆಂದು
ನುಡಿವುದಕೆ ಹಿಂತೆಗೆದಳಿಲ್ಲ. ರಾಜನ ಕುರಿತು,
ಇಂತ ಕಡೆ ಇರಬೇಕು, ಅಂತಕಡೆ ಬರಬೇಕು,
ಎಂದು ಸುಲಭದಲಿ, ಮರ್ಯಾದೆಯಲಿ, ಬೆಸಸುವಳು.
ಸಣ್ಣ ಜನ ತನಗೆದುರುನುಡಿನುಡಿಯೆ ಜರುಬುವಳು;
ತನ್ನಂತೆ ನಡಸಿಕೊಂಬಳು. ಆರ್ಲಿಯರ್ಸ್ ಪುರಿಗೆ
ಹೊರಟ ಹೊತ್ತಲಿ ಆಳು ಸೇನಾನಿಗಾಗಿ ಹೊಸ

ಹಿರಿ ಕುದುರೆಯನು ತಂದು ನಿಲಿಸಿದನು. ಆ ಕುದುರೆ
ರಾವುತನ ಕೈಗೆ ಅಡಗದೆ ಚೇಷ್ಟೆ ಮಾಡುತ್ತ
ಕುಣಿಕುಣಿದು ಸುತ್ತ ಸುಳಿಯಿತು. ಇದನು ಈ ಹುಡುಗಿ
ಎಂತು ಏರುವಳು ಎಂದೆಲ್ಲರಿಗು ಯೋಚನೆ.
ಜೀನಿ ಇರುಳಲಿ ತಾನು ಸೇನಾನಿಯಾದುದೇ,
ತನ್ನ ಪಾಳೆಯದ ಮುಂಗಡೆ, ದೈವ ರಕ್ಷಿಸಲಿ,
ಎಂಬ ಅರ್ಥಕೆ ಶಿಲುಬೆ ಒಂದ ನಿಲಿಸಿದ್ದಳು;
ಉದಯದಲಿ ಕುದುರೆ ಈ ರೀತಿ ಸಗ್ಗದೆ ತುಡಿಯೆ,
ಇದ ಶಿಲುಬೆಯೆದುರು ತಾ, ಎಂದಲ್ಲಿ ನಡೆದಳು.
ಆಳು ಕುದುರೆಯನು ಶಿಲುಬೆಯ ಎದುರು ತಂದನೇ,
ಏನು ಮಹಿಮೆಯೊ, ಸುಮ್ಮನಾಯಿತದು. ಸೇನಾನಿ
ಕಷ್ಟವಿಲ್ಲದೆ ಅದನು ಏರಿದಳು; ತನ್ನೊಂದು
ವಿಜಯಕೇತನವ ಹಿಡಿದೆತ್ತಿ, "ದೇವರಿಗಾಗಿ,
ಜಯಕಾಗಿ, ಕಾದುವೆನು" ಎಂದು ಘೋಷಿಸಿ ಮುಂದೆ
ಸಾಗಿದಳು. ಅವಳ ಘೋಷದ ಹಿಂದೆಯೇ ಸೇನೆ
"ಜಯ ದೇವರಿಗೆ, ಅವನ ಕೃಪೆ ಪಡೆದ ಬಾಲಿಕೆಗೆ
ಜಯ" ಎಂದು ಕೂಗಿ ಅನುಸರಿಸಿ ಮುಂಬರಿಯಿತು.
ಇಂತು ಮುಂಬರಿದ ದಳ ಆರ್ಲಿಯನ್ಸನು ಸೇರೆ
ಒಂದು ನದಿಯಲಿ ಪ್ರವಾಹಕೆ ಎದುರು ತುಸ ದೂರ
ದೋಣಿಯಲಿ ಸಾಗಬೇಕಿದೆ. ಗಾಳಿ ಪ್ರತಿಕೂಲ;
ನೀರ ದಿಕ್ಕಲೆ ಹಾಯುತಿತ್ತು. ದಳಪತಿಯೊಬ್ಬ,
ಗಾಳಿ ಇಂತೇ ಇರಲು ಕೆಲಸ ಕೆಟ್ಟಿತು, ಎಂದ.
ಜೀನಿ ದೇವಾಲಯಕೆ ಹೋಗಿ ಮಂಡಿಯನೂರಿ
ದೇವರನು ಬೇಡಿಕೊಂಡಳು. ಏನು ಅಚ್ಚರಿ!
ಗಾಳಿ ಅನುಕೂಲ ದಿಶೆಯಲಿ ಬೀಸತೊಡಗಿತು.
ಬಂದ ದಳ ನದಿಯ ದಾಟಿತು; ಒಂದೆ ದಿವಸದಲಿ,
ತನ್ನ ನಡೆಸುವ ಬಾಲೆ ದೈವಬಲ ಪಡೆದಿಹಳು

ಎಂಬ ಧೃತಿಯಲಿ ಕಾದಿ, ಆರ್ಲಿಯರ್ಸ್ ನಗರವನು
ಹಗೆಯ ಕೈಯಿಂದ ಬಿಡಿಸಿತು. ಎಲ್ಲರಿಗು ಮೊದಲು
ಲಗ್ಗೆಯೇರಿದುದಾರು? ಈ ಹುಡುಗಿ. ಹಗೆ ಬಿಟ್ಟ
ಬಾಣಸಂತತಿ ಅವಳ ಮುಟ್ಟಲಾರದೆ ಬದಿಗೆ
ಹಾಯುತಿದ್ದುವು. ದೈವ ಕೃಪೆ. ಇವಳು ದೇವರನು
ಒಲಿಸಿರುವಳೆಂಬ ನಂಬಿಕೆ ಫ್ರೆಂಚರಲಿ ಮಾತ್ರ
ಇರಲಿಲ್ಲ. ಆಂಗ್ಲ ಜನ ಕೂಡ ಇವಳಾವುದೋ
ಮಹಿಮೆಯಿಂದಲೆ ಕಾದುತಿಹಳೆಂದು ನಂಬಿದರು.
ಆರ್ಲಿಯರ್ಸ್ ಕೈತಪ್ಪಿತೋ ಆಂಗ್ಲಸೇನೆಯಲಿ
ಹೊಸತೊಂದಧೈರ್ಯ ಹುಟ್ಟಿತು. ಒಂದು ತಿಂಗಳಲಿ
ಫ್ರೆಂಚ್ ಸೇನೆಗಳು ಆಂಗ್ಲಸೇನೆಗಳ ಹತ್ತಾರು
ಕಿರಿ ಕಿರಿಯ ಕದನದಲಿ ಹಿಂದು ಹಿಂದಕೆ ಅಟ್ಟೆ
ಆ ಪ್ರಾಂತಕೆಲ್ಲ ಹಗೆಯಿಂದ ಬಿಡುಗಡೆಯಾಯ್ತು.
ಅದರ ಮಧ್ಯದ ನಗರ ರೈಮ್ಸ್; ಅದರೊಳಿಹ ಒಂದು
ದೇವ ಮಂದಿರದಲೇ ರಾಜನಿಗೆ ಅಭಿಷೇಕ
ನಡೆವ ಪದ್ಧತಿ. ಫ್ರೆಂಚ ಜನರ ಸಂತಸಕಾಗ
ಮೇರೆ ಇಲ್ಲದೆ ಹೋಯ್ತು. ಎಂತೆಂತ ಯೋಧಪರು,
ಎಂತೆಂತ ಸೇನಾನಿಗಳು, ಸೋತು ಕೈಬಿಟ್ಟ
ಇಂತ ಕಾರ್ಯವ ಇಂತ ಎಳೆ ಹೆಣ್ಣು ಸಾಧಿಸಳೆ!
ದೈವಕೃಪೆ ಇಹುದೆಂದು ತೋರುವರೆ ಇದಕಿಂತ
ನಿಶ್ಚಿತ ಪ್ರಮಾಣವುಂಟೇ? ನಾಡ ಹಿರಿಯುವರು,
ಮಂತ್ರಿ ಸೇನಾಧಿಪತಿ ರಾಜಗುರು, ಎಲ್ಲರೂ
ಸೇರಿ ರಾಜಕುಮಾರನಿಗೆ ಜೀನಿ ಎದುರಿನಲಿ
ರೈಮ್ಸ್ ದೇವಮಂದಿರದಿ ಪಟ್ಟಾಭಿಷೇಕವನು
ನಡಸಿದರು. ದೊರೆಯುಮಗ ನಿಜದಿ ಅಂದೇ ತಾನು
ರಾಜನಾದನು. ಜೀನಿ ತಾನು ನಡಸುವೆನೆಂದ
ಸಾಹಸವ ನಡಸಿ ಸಿದ್ಧಿಯ ಪದದಿ ನಿಂತಳು.

ಸಿದ್ಧಿಯಲಿ ನಿಂತಳೆಂದೆನು. ಜೀವ ಸಿದ್ಧಿಯಲಿ
ನಿಲ್ಲಬಹುದೇ ? ಇಲ್ಲ ಏರುವುದು, ಇಲ್ಲವೇ
ಇಳಿಯುವುದು. ಎಲ್ಲಿಯೂ ನಿಲ್ಲಲಾರದು. ರಾಜ
ಪಟ್ಟ ಕಟ್ಟಿಸಿಕೊಂಬ ಹೊತ್ತಿನಲಿ, ಎದುರಿನಲಿ
ಎಲ್ಲರಿಗು ಹಿರಿಯಳೆಂಬಂತೆ ನಿಂದಿಹ ನಮ್ಮ
ಜೀನಿಯನು ನೋಡಿ ನಾಚಿದನು. ಎಲಎಲ, ಇಂತ
ಒಬ್ಬ ಹೆಣ್ಣಿಂದ ಈ ರಾಜ್ಯವನು ಪಡೆದೆನೇ,
ಇವಳು ಕೊಡಿಸದೆ ನನ್ನ ರಾಜ್ಯ ನನಗಿಲ್ಲವೇ,
ಏನು ಹೀನಾಯ ಇದು, ಎನಿಸಿತವನಿಗೆ. ರಾಜ
ಎಂತು ಮನಗೆಟ್ಟನೋ ಅಂತೆ ಸೇನಾಧಿಪತಿ,
ಅಂತೆ ಆ ರಾಜಗುರು, ದುರ್ಮನದೊಳಾಳಿದರು.
ನಾವು ಮಾಡದ, ನಾವು ಮಾಡಲಾಗದ, ಕಾರ್ಯ
ಯಾವಳೋ ಹೆಣ್ಣಿಂದ ಆಯಿತೇ, ಎಲ ಎಲಾ
ಬಾಳಿ ಫಲವೇನು ಎಂದವು ಅವರ ಮನ ಒಳಗೆ.
ಪಟ್ಟಕಟ್ಟುವ ವೇಳೆ ಸೈನ್ಯದ ಪತಾಕೆಯನು
ರಾಜನೆದುರಲಿ ನಿಲಿಸುವರು; ಇಂತು ವಾಡಿಕೆ.
ಅಂದು ಸೈನ್ಯದ ಪತಾಕೆಯನಂತು ನಿಲಿಸ ತರೆ
ಜೀನಿ ಅದು ಬೇಡವೆಂದಳು. ತಾನು ಹಿಡಿದಿದ್ದ
ಜಯ ಪತಾಕೆಯನಲ್ಲಿ ನಿಲ್ಲಿಸಿರಿ ಎಂದಳು.
ಗೆಲವ ತಂದವಳು. ಪಟ್ಟವ ಕಟ್ಟಿಸುತಲಿಹಳು.
ಬೇಡವೆನೆ ಧೈರ್ಯ ಯಾರಿಗೆ? ಎಲ್ಲ ಸುಮ್ಮನೆಯೆ
ಅವಳಿಚ್ಛೆಯಂತೆ ನಡಸಿದರು. ಆದರೆ ಮನದಿ
ಅದರ ಅಭಿಭವವ ತಳೆದರು. ಜೀವ ಸಿದ್ಧಿಯಲಿ
ನಿಲ್ಲಲಾರದು: ಏರುವುದು; ಇಲ್ಲ ಇಳಿಯುವುದು.
ರಾಜ, ಸೇನಾಧಿಪತಿ, ರಾಜಗುರು, ಎಲ್ಲರೂ
ತನ್ನ ಇಚ್ಛೆಗೆ ತಗ್ಗಿ ನಡೆದುದನು ಕಂಡಂದು
ಜೀನಿಯ ಅಹಂಭಾವ ಚಿಗಿತುದೋ? ಬಲ್ಲೆವೇ?

ಮೂರನೆಯ ದಿನ ಜೀನ್ನಿ, ದೈವ ತನಗೊರೆದಿದ್ದ
ಕಾರ್ಯ ಮುಗಿಯಿತು, ಇನ್ನು ತನ್ನ ಊರಿಗೆ ತಾನು
ಸಾರುವೆನು, ಎಂದು ನುಡಿದಳು. ಹೊಟ್ಟೆಯುರಿ ಮಂದಿ
ಇದುವೆ ಸರಿ ಎಂದು ಒಪ್ಪಿದರು. ಮನ ಒಳಿತಾಗಿ
ನಾಡ ಹಿತವನು ಬಯಸುತಿದ್ದ ಉಪಸೇನಾನಿ
ಡೂನ್ವ, "ಉಂಟೇ ? ರಾಜಧಾನಿ ಪ್ಯಾರಿಸ್ ನಗರ
ವೈರಿಗಳ ಕೈಯಲೇ ಇದೆ. ಅದನು ಬಿಡಿಸದೆ
ದೇವರೊಲಿದಿರುವ ಸೇನಾನಿ ಹಿಂದಿರುಗುವುದೆ ?
ಬೇಡ" ಎಂದನು. ಇವಳು ತೊಲಗಿದರೆ ಒಳಿತೆಂಬ
ಅಲ್ಪ ಜೀವಿಗಳು ಮನಬಿಚ್ಚಿ ನುಡಿವವರಲ್ಲ ;
ಜೀನಿ ಇರಲೆಂಬವರು ದನಿಯೆತ್ತಿ ಬೇಡುವರು.
ಈ ಎಲ್ಲ ಜನದ ಪರಿಯನು ಜೀನಿ ಬಲ್ಲಳು.
ತಿರುಗಬೇಕೆಂದು ಮನ ; ಮುಂದೆ ನಡೆಯೆಂದು ಜನ.
ಹಿಂತಿರುಗಲೇ ಮುಂದೆ ನಡೆಯಲೇ ಎಂದಿವಳು
ಇನಿಸು ಯೋಚಿಸಿ, ಯಾವ ದಾರಿ ಸರಿ ಎಂಬದನು
ನಿಶ್ಚಯಿಸ ಬರದೆ, ಉಪಸೇನಾನಿ ಬೇಡುವನೆ
ಎಂಬ ಕಾರಣದಿಂದ ಮುನ್ನಡೆಯೆ ಒಪ್ಪಿದಳು.
ಜೀನಿಗಿದುವರೆಗೆ ಕೇಳುತಲಿದ್ದ ದನಿಗಳು
ಈಗ ಕೇಳವು. ಕೇಳಿದುವೆ ಏನು ಹೇಳಿದವು
ಎಂದಿವಳು ದೃಢವಾಗಿ ತಿಳಿಯಲಾಗದೆ ಇತ್ತು.
ರಾಜಧಾನಿಗೆ ಸೇನೆ ನಡೆಯುತಿದೆ. ದಾರಿಯಲಿ
ಜೀನಿ ಉಪಸೇನಾನಿಯನು ಕುರಿತು "ಓ ಅಣ್ಣ
ನನ್ನ ಮನ ಈಗ ಡೋಮ್ರೇಮಿಯನು ಕಂಡೇನೆ,
ತಾಯ್ತಂದೆ ಒಡಹುಟ್ಟುಗಳ ಜೊತೆಗೆ ನಿಂತೇನೆ,
ಎಂದಿನಂದದಿ ಕುರಿಯ ಕಾಯ್ದು ಬನದಲಿ ಕುಳಿತು
ಅಂದಿನ ಸಮಾಧಾನವನು ಮತ್ತೆ ಪಡೆದೇನೆ,
ಎಂದು ಹಂಬಲಿಸುತಿದೆ. ನನಗೇಕೊ ಈ ಪಯಣ

ರುಚಿಸದಿದೆ," ಎಂದು ನುಡಿದಳು. ರಾಜಧಾನಿಯನು
ಹಗೆಯ ಕೈಯಿಂದ ಬಿಡಿಸುವ ಯತ್ನದಲಿ ಇವರು
ಹಲವು ದಿನ ಕಾದಿದರು. ಕ್ರೈಸ್ತ ಗುರುವಿನ ತಾಯಿ
ಮೇರಿ ಹುಟ್ಟಿದ ಹಬ್ಬದಂದು ಸೈನ್ಯವನಡಸಿ
ಮುಂದರಿದು ಜೀನಿ ವೈರಿಯ ಕೈಗೆ ಸಿಕ್ಕಿದಳು.
ಬಾಲೆಯನು ಕೈಬಿಟ್ಟು ಹಿಮ್ಮೆಟ್ಟಿ ಫ್ರೆಂಚ್ ಸೇನೆ,
ಮುಂದೇನು ಎಂದು ನಿಂತಿತು.

ಜೀನಿ ಸಿಕ್ಕಿದುದು

ಸಾಮಂತನಾದ ಬರ್ಗಂಡಿಯರಸನ ಒಬ್ಬ
ಸೈನಿಕನ ಕೈಗೆ. ಆ ಕಾಲದಲಿ ಇಂತಪ್ಪ
ಸೆರೆಯ ಹಿಡಿದವನು ತಾ ಹಿಡಿದ ಸೆರೆಯನು ತನ್ನ
ಸ್ವತ್ತು ಎಂಬಂತೆ ತನ್ನಿಚ್ಛೆಯಲಿ ಯಾರಿಗೂ
ಯಾವ ಬೆಲೆಗೂ ಮಾರಬಹುದು. ಜೀನಿ ಡ ಆರ್ಕ್,
ಫ್ರೆಂಚರನು ಜಯಕೆ ನಡಸಿದ ಹೆಣ್ಣುಸೇನಾನಿ,
ಸೆರೆಯಾದಳೆಂದು ಕೇಳಿದುದೆ ಆಂಗ್ಲರ ಒಬ್ಬ
ದಂಡನಾಯಕ ಬಂದು ಅವಳ ಸೆರೆ ಹಿಡಿದಿದ್ದ
ಯೋಧನಿಗೆ ಅವನು ಬೇಡಿದ ಐದುನೂರು ಹಣ
ಹೊನ್ನಿತ್ತು ಆಂಗ್ಲಶಿಬಿರಕೆ ಅವಳನೊಯ್ದನು.

ಜೀನಿ ಜೀವಂತಳಾಗಿರೆ ತಮಗೆ ಜಯವಿಲ್ಲ
ಎಂಬುದೀವೇಳೆಗೆಲ್ಲಾ ಆಂಗ್ಲರದು ಅರಿವು.
ಏನೆ ಆಗಲಿ ಇವಳ ಮುಗಿಸಲೇಬೇಕೆಂದು
ದಂಡನಾಯಕರು ನಿಶ್ಚಯಿಸಿದರು. ಸೆರೆಹೆಣ್ಣ
ತಾವು ಕೊಲಲಾಗದು. ಮತಾಭಿಮಾನಿಗಳಲ್ಲಿ
ಹಲಮಂದಿ, ಇವಳು ದೇವರ ಜೊತೆಗೆ ಮಾತಾಡಿ
ತಾನು ಈ ಕಾರ್ಯವನು ಕೈಕೊಂಡೆನೆಂಬುದನು,
ಮಠದ ಗುರುಗಳಿಗಿಂತ ತಾನು ಮಿಗಿಲೆಂಬಂತೆ

ನಡೆದುದನು, ದೈವವಿದ್ರೋಹವೆಂದೇ ಬಗೆದು
ಈರ್ಷೆಯಲಿ ದೂರುತಿದ್ದರು. ಜೀನಿ ಕೇಳುವುದು
ದೇವರಾಡುವ ಮಾತನಲ್ಲ, ದೆವ್ವದ ಮಾತ,
ಇವಳೊಬ್ಬ ಮಾಟಗಾತಿಯೆ ಸತ್ಯ, ಎಂದವರು
ಗೊಣಗುವರು. ಆ ಕಾಲದಲಿ ಕ್ರೈಸ್ತ ಜನಗಳಲಿ
ಮಾಟಗಾರರ ಬೇಟೆಯೊಂದ ಮತವಂತ ಜನ
ಆಗಾಗ ನಡೆಸುವುದು. ಜೀನಿ ಮಾಟವ ಮಾಡಿ
ಜನಗಳನು ಮರುಳು ಮಾಡಿದಳೆಂದು ದೂರಿಟ್ಟು
ಆಂಗ್ಲನಾಯಕರು ಅವಳನು ಮುಖ್ಯ ಗುರುಮಠದ
ಒಂದು ಸಭೆಯೆದುರು ನಿಲಿಸಿದರು. ಸಭೆಯಲಿ ತುಂಬ
ಆಂಗ್ಲರೆಂತಾಡಿಸಿದರಂತು ಆಡುವ ಮಂದಿ;
ಅಧ್ಯಕ್ಷ ಒಬ್ಬ ಕರಟಕ. ಮೂರು ನಾಲ್ಕೆ ಜನ
ನ್ಯಾಯ ಎಂತಿಹುದು ಅಂತಾಗಲೆಂಬರು. ಅವರೂ
ಮಾಟಗಾರಿಕೆ ಉಂಟು ಎಂದು ಎಲ್ಲರ ತೆರನೆ
ನಂಬಿರುವ ಮಂದಿ. ಅಲ್ಲದೆ ಎಲ್ಲ ಸಭಿಕರೂ
ಯಾವ ತಪ್ಪನು ಎಂತು ಮನ್ನಿಸಿದರೂ ಇವಳು
ಗಂಡುಡೆಯನುಟ್ಟಳೆಂಬುದನು ಎಲ್ಲಕು ಮಿಕ್ಕ
ದೈವವಿದ್ರೋಹವೆನ್ನುವ ಮನೋಧರ್ಮದಲಿ
ಬೆಳೆದವರು, ನಡೆವವರು. ಇವರು ಈ ಎಳೆ ಹೆಣ್ಣ
ದೋಷವನು ನಿರ್ಧರಿಸಲೆಂದು ದುರ್ಯೋಧನನ
ಸಭೆಯಂತೆ ಸೇರಿ ಕುಳಿತರು.

ಇವರ ಮುಂಗಡೆಗೆ
ಹಗೆ ಜೀನಿಯನು ತಂದು ನಿಲಿಸಿದನು. ಹೆಣ್ಣೆಂದು,
ಹದಿನೆಂಟು ಹರೆಯದವಳೆಂದು, ಗಂಡುಡೆಯುಟ್ಟ
ಹೆಣ್ಣೊಡಲು ಎಂದು, ದೆವ್ವದ ಜೊತೆಗೆ ಮಾತಾಡಿ
ಬಲವ ಪಡೆದಿದ್ದ ಗಡುಸಾಳೆಂದು ಸಭೆಯವರು,

ಸಭೆಯು ಜೊತೆಯಲಿ ನೆರೆದ ಜನರು, ದೇವರ ಹೊರತು
ಬೇರೆ ದಿಕ್ಕಿಲ್ಲದೀ ಎಳೆ ಹೆಣ್ಣ, ನೋಡಿದರು ;
ಎಲ್ಲರೂ ತಂತಮ್ಮ ರೀತಿಯಲಿ ತಣಿದರು.
ಅಧ್ಯಕ್ಷ ಮುದಿಯು, ಬೋವೇಪುರದ ಮುಖ್ಯಗುರು,
ಕಾರ್ಯವನು ಮೊದಲುಮಾಡಿದನು. ಈ ನ್ಯಾಯಿಗರು
ನ್ಯಾಯವೆಂದೇ ತಿಳಿದೊ, ಅನ್ಯಾಯವೆಂದರಿತೊ,
ಜೀನಿಯನು ಏನೇನೊ ಕೇಳಿದರು. ಎಲ್ಲಕೂ,
ಏನೊಂದನೂ ಅರಿಯದೆಳೆಹೆಣ್ಣು, ತನ್ನೊಂದು
ಶುದ್ಧ ಮನದಿಂದ ಉತ್ತರವನಿತ್ತಳು. ಅವಳ
ಬುದ್ಧಿ ಬಹು ಸೂಕ್ಷ್ಮವಾಗಿದ್ದುದೂ ಅವಳಿತ್ತ
ಉತ್ತರದ ನುಡಿಯಿಂದ ಕಾಣುವುದು. "ನಿನ್ನೊಡನೆ
ದೈವ ಮಾತಾಡುವುದೆ ?" "ಅಹುದು". "ಅದು ದೇವರೋ
ದೆವ್ವವೋ ನೀನೆಂತು ಬಲ್ಲೆ ?" "ಅದು ಹೇಳುವುದು
ಒಳಿತ ಮಾಡೆಂದು ; ನೀ ಕೆಟ್ಟುದನು ಮಾಡೆಂದು
ಒಮ್ಮೆಯೂ ಹೇಳಿಲ್ಲ." "ಓಹೊ. ದೇವರ ದೂತ
ಗೇಬ್ರಿಯಲ್ ನಿನ್ನ ನೋಡಲು ಬಹನೆ?" "ಕೆಲವು ಸಲ
ಬಂದಿದ್ದನಹುದು" "ವಸ್ತ್ರವ ಧರಿಸಿ ಬಂದನೋ ?
ಬೆತ್ತಲಲಿ ಬಂದನೋ ?" "ತನ್ನೊಬ್ಬ ದೂತನಿಗೆ
ವಸ್ತ್ರವಿಲ್ಲದೆ ಬಿಡಲು ದೇವರು ದರಿದ್ರನೇ ?
ಶಿಷ್ಟರಾದವರು ಸಭ್ಯರು ಎಂತು ಬರಬಹುದು
ಅಂತು ಬಂದನು ಗೇಬ್ರಿಯಲ್" "ನಿನಗೆ ಕೇಳಿಸಿದ
ದನಿಯೆಲ್ಲ ನಿನ್ನ ಊಹೆಯ ದನಿಗಳೆನ್ನುವೆವು.
ಏನು ಹೇಳುವೆ ?" "ನಾನು ಈಗ ಕೇಳುತಲಿರುವ
ನಿಮ್ಮ ದನಿ ಊಹೆಯದೆ ? ಇದು ಎಂತು ಕೇಳುತಿದೆ
ಅಂತೆ ಆ ದನಿಗಳೂ ಕೇಳಿದವು. ಅವು ಊಹೆ
ಇದು ಸತ್ಯ,ಎಂದು ಹೇಳುವಿರೆಂತು ?" "ಗೇಬ್ರಿಯಲ್
ನಿನ್ನೊಡನೆ ಯಾವ ಭಾಷೆಯಲಿ ಮಾತಾಡಿದನು ?"

" ನಿಮ್ಮ ಈ ನುಡಿಗಿಂತ ನಯುವಾದ ಫ್ರೆಂಚಿನಲಿ"
" ದೈವ ಮಾತಾಡಲೆಳಸಿದರೆ ಗುರುಪೀಠದಲಿ
ಮಂಡಿಸಿಹ ಹಿರಿಯರನು ಬಿಟ್ಟು ಈ ನಿನ್ನಂತ
ಸಾಮಾನ್ಯ ಹೆಣ್ಣಿನಲಿ ನುಡಿಯುವನೆ" " ನಾನೊಂದು
ಸಾಮಾನ್ಯ ಹೆಣ್ಣು ನಿಜ; ಆದರವನೆನ್ನೊಡನೆ
ಮಾತನಾಡಿದನು. ಹಿರಿಯರಿಗೆ ತೋರದ ಹಿರಿಯ
ಕೃಪೆಯ ತೋರಿದನು." "ಪಟ್ಟಾಭಿಷೇಕದ ಹೊತ್ತು
ಫ್ರಾನ್ಸ್ ರಾಜಸೇನೆಯ ಪತಾಕೆಯನು ಬದಿಗಿಟ್ಟು
ನೀನು ಹಿಡಿದಿದ್ದುದನು ಮುಂದೆ ನಿಲಿಸಿದೆಯಂತೆ ;
ಇದು ಸರಿಯೆ ? " " ಯುದ್ಧದಲಿ ಗೆಲವ ತಂದ ಪತಾಕೆ
ಅದು. ಗೆಲವ ಫಲವಾದ ಅಭಿಷೇಕದಲಿ ಬೇರೆ
ಯಾವುದಕೆ ಮನ್ನಣೆ? " ಏನನೇ ಕೇಳಿದರು
ಎಳೆಹೆಣ್ಣ ನಾಲಗೆಯ ತುದಿಗೆ ಒಂದಾದರೂ
ತಪ್ಪು ನುಡಿ ಬರದು. ಇವಳನು ಏನು ಮಾಡುವುದು ?
ಒಂದು ಮಾತಿಗೆ ಜೀನಿ ಉತ್ತರವ ಕೊಡಲಿಲ್ಲ.
" ಮುಖ್ಯ ನಗರವ ಮುತ್ತಿದಂದು ಮೇರೀತಾಯ
ಜನ್ಮದಿನವಲ್ಲವೆ ? " " ಇರಬೇಕು " " ಹಬ್ಬದಲಿ
ಆರಾಧನೆಯ ಬಿಟ್ಟು ಮುತ್ತಿಗೆಯ ನಡಸಿದುದು
ಸರಿಯೆಂಬೆಯೊ ?" ಜೀನಿ ತಾನು ಮಾಡಿದ್ದುದು
ತಪ್ಪೆಂದೆ ಮನಗಂಡಳೋ ಏನೊ ? ಈ ನುಡಿಗೆ
ತಲೆಯ ತಗ್ಗಿಸಿ ಕಣ್ಣನಿಳಿಸಿದಳು.

ಐದು ದಿನ
ನಡೆಯಿತು ಮಹಾವಿಚಾರಣೆ. ಏನಗೆಯ್ದರೂ
ಜೀನಿಯನು ಮಾಟಮಾಡುವಳೆಂದು ನಿರ್ಧರಿಸಿ
ಕೊಲೆಯ ವಿಧಿಸುವುದಾಗಲಿಲ್ಲ. ಅಧ್ಯಕ್ಷಗುರು
ತೊಂದರೆಗೆ ಸಿಲುಕಿದನು. ಆಂಗ್ಲ ಅಧಿನಾಯಕರು
ಮಾಟಮಾಡುವಳೆಂಬ ಹೆಸರಿಕ್ಕಿ ಜೀನಿಯನು

ಸುಡಲೆಬೇಕೆಂದು ಹಟವಮಾಡಿದರು. ಬೇರಾವ ದೋಷವೂ ಇಲ್ಲ. ಒಂದೇ ಒಂದು ದೋಷವನು ಇವರು ಜೀನಿಯು ಮೇಲೆ ಹೇರಿದರು. ಮೊದಲ ದಿನ ಜೀನಿ ಗಂಡುಡೆಯುಟ್ಟು ಸಭೆಯು ಮುಂಗಡೆ ಬಂದು ನಿಂತಳಲ್ಲವೆ? ಇದೇ ಘೋರ ಪಾತಕವೆಂದು ಅಧ್ಯಕ್ಷಗುರು ನುಡಿಯೆ, ಜೀನಿ, ಗಂಡುಡೆಯಿಂದ ಇನ್ನು ಅಹುದೇನು, ಹೆಣ್ಣುಡೆಯನೇ ಧರಿಸುವೆನು, ಎಂದು ಒಪ್ಪಿದಳು ; ಸೆರೆಮನೆಯಲ್ಲಿ ಆ ಸಂಜೆ ಹೆಣ್ಣುಡೆಯ ಧರಿಸಿದಳು. ಯಾವ ಪಾತಕಿ ಅವಳ ಏನಮಾಡಲು ಬಂದನೋ ಏನೊ, ರಾತ್ರಿಯಲಿ ಮಾಡದಲಿ ತಾನಿದ್ದ ಸೆರೆಯ ಕೋಣೆಯ ಒಂದು ಕಿಟಕಿಯಲಿ ತೂರಿ ದುಮುಕಿದಳು. ಮೂರಾಳುದ್ದ ಬಿದ್ದು ಮೈ ಕೈ ಗಾಯವಮಾಡಿಕೊಂಡಳು. ಮತ್ತೆ ಸಭೆಗೆ ಬರಲೆರಡು ದಿನವಾಯ್ತು. ಬರುವಂದವಳು ಮತ್ತೆ ಗಂಡುಡೆಯಲಿದ್ದಳು. "ಈ ಅಧರ್ಮವನು ಮತ್ತೆ ಮಾಡಿಹೆಯೇಕೆ" ಎನೆ "ನನ್ನ ಸುತ್ತೆಲ್ಲ ಪುರುಷ ಸೈನಿಕರಿಹರು. ನಾನು ಗಂಡುಡೆಯೊಳಿರೆ ನನ್ನನೂ ಗಂಡಂತೆ ಕಾಣಬಲ್ಲರು ಅವರು. ಹೆಣ್ಣುಡೆಯನುಡಲು ಹೆಣ್ಣೆಂದರಿದು ನಡೆವರು." ಎಂದು ಹೇಳಿದಳು. ಇದು ಹಿರಿದೊಂದು ತಪ್ಪೆಂದು ನ್ಯಾಯಿಗರು ಎಣಿಸಿದರು. ಮಠದ ಕೈಯೊಳಗಿರುತ ಓಡಿಹೋಗಲು ನೋಡಿದಳು ಇವಳು, ಗುರುಮಠವ ಇದುವರೆಗೆ ಅಲ್ಲಗಳೆದಳು, ಈಗ ದ್ರೋಹವನೆ ಎಸಗಿಹಳು, ಎಂದು ಸಾರಿದರು. ಸೆರೆಯೊಳಗಿರುತ ಜೀನಿ ಧೃತಿಗೆಟ್ಟಿದ್ದವೇಳೆ, ನೀ ಮಾಡಿದುದು ತಪ್ಪೆಂದು ಒಪ್ಪಿಕೋ, ತಪ್ಪ ಮನ್ನಿಸಿ ನಿನ್ನ ಬಿಟ್ಟು ಬಿಡುವರು, ಎಂದು ಆಸೆ ತೋರಿಸಿ ಕೆಲರು

ತಪ್ಪೊಪ್ಪಿಗೆಯ ಪತ್ರವೊಂದ ನಿರ್ಮಿಸಿ ಅದಕೆ
ಅವಳ ಗುರುತನು ಹಾಕಿಸಿದರು. ಹಾಕಿಸಿದರೋ
ತಾವೆ ಹಾಕಿದರೊ, ಇದು ಎಲ್ಲ ಬರಿ ವಂಚನೆಯೊ,
ಇದನು ದೇವರು ಬಲ್ಲ. "ಒಪ್ಪಿಗೆಯ ಪತ್ರದಲಿ
ನೀನು ಕೇಳಿದ ದನಿಗಳೆಲ್ಲ ಊಹೆಯವೆಂದು
ನೀನೆ ಹೇಳಿಹೆಯಲ್ಲ" ಎಂದು ಅಧ್ಯಕ್ಷ ಗುರು
ಜೀನಿಯನು ಕೇಳಿದನು. "ನಾನಂತು ಹೇಳಿಲ್ಲ"
ಎಂದು ನುಡಿದಳು ಜೀನಿ. ತಪ್ಪನೊಪ್ಪಿದ್ದವಳು
ತಪ್ಪನೇ ಸಾಧಿಸುತ್ತಿಹಳು ಎಂಬುದು ಒಂದು
ಹಿರಿಯ ದೂರಾಯ್ತು. ಅಂತೂ ಮೂರು ತಪ್ಪಿತಕೆ
ಶಿಕ್ಷೆ ವಿಧಿಸಿತು ಮಠದ ಧರ್ಮಸಭೆ. ಜೀನಿ
ತಾನೆ ಒಪ್ಪಿದ ತೆರಕೆ ಮಾಟ ಮಾಡಿದುದುಂಟು ;
ಅಂತೆಯೇ ಇವಳು ದೈವದ್ರೋಹಿ ; ಅಂತೆಯೇ
ಸಮಕೆ ಧರ್ಮದ್ರೋಹಿ ; ಚಿತೆಯ ಮಧ್ಯದಿ ನಿಲಿಸಿ
ಸುಡುವುದೇ ಶಿಕ್ಷೆ. ದೋಷಿಯನು ಆಂಗ್ಲರ ಕೈಗೆ
ಕೊಟ್ಟುಬಿಟ್ಟರು. ಒಂದು ಚಿತೆ ಸಿದ್ಧವಾಗಿತ್ತು.
ಹಗೆಗಳಾ ಅರಿಯದೆಳೆಹೆಣ್ಣ ಅದರೆಡೆಗೆಳೆದು
ಒಂದು ಕಂಬಕೆ ಕಟ್ಟಿ ನಿಲಿಸಿದರು. ಈ ಚಿತೆಗೆ
ಬೆಂಕಿಯಿಕ್ಕುವುದೆಂಬ ಹಿರಿದಾದ ಮರ್ಯಾದೆ
ಯಾರ ಪಾಲಿಗೆ ಬಂದಿತೋ ಅವನು ಪಂಜಿಂದ
ಅದಕೆ ಉರಿಯನು ಸೋಕಿಸಿದನು. ಹಬ್ಬಿತು ಕಿಚ್ಚು ;
ಚಿತೆಯ ಸುಟ್ಟಿತು ; ಚಿತೆಯ ಮಧ್ಯದಲಿ ಕಟ್ಟಿದ್ದ
ಹಸುಗೂಸು ಪಶುವ ಸುಟ್ಟಿತು. ಕಿಚ್ಚು ಹಾಯ್ದು ಬರೆ
ಜೀನಿ ಕೈಯಲಿ ಒಂದು ಶಿಲುಬೆಯನು ಪಟ್ಟಾಗಿ
ಹಿಡಿದು ಎದೆಗವುಚಿ ನಿಂತಳು. ಒಬ್ಬ ಭಂಡ ಮಗ
ಗಂಡುಡೆಯನುಟ್ಟರೂ ಇವಳು ಹೆಣ್ಣಹುದೆಂದು
ಜನಕೆ ತೋರಿಸಲು, ಅವಳುಟ್ಟಿದ್ದ ವಸ್ತ್ರವನು

ಸೆಳೆದನೆಂಬರು. ಬುದ್ಧಿಕೆಟ್ಟಿರಲು ಮಾನವ
ಏನ ತಾನೇ ಮಾಡಲಾರ?

ಜೀನಿ ಡ ಆರ್ಕ್

ಇಂತು ತನ್ನಿಹಲೋಕಯಾತ್ರೆಯನು ಮುಗಿಸಿದಳು.
ಆಂಗ್ಲ ಫ್ರೆಂಚರ ಯುದ್ಧ ಇನ್ನು ಕೆಲದಿನ ನಡೆದು
ಕೊನೆಗಂಡು ಫ್ರಾನ್ಸ್ ದೇಶ ತನ್ನ ಸ್ವಾತಂತ್ರ್ಯವನು
ಉಳಿಸಿಕೊಂಡಿತು. ಜೀನಿ ಸೆರೆ ಸಿಕ್ಕಿ ಹಗೆಯೆದುರು
ಮಾಟಗಾರಿಕೆಯ ದೂರನು ಹೊತ್ತ ವೇಳೆಯಲಿ
ಅವಳ ಗತಿಯೇನೆಂದು ಯೋಚಿಸದ ಹಿರಿಮಂದಿ,
ಹಲವು ವರ್ಷಗಳಾಚೆ, ನಾಡನುಳಿಸಿದ ಜೀನಿ
ಭಕ್ತಕುಲಮೌಳಿಮಣಿ ಎಂದವಳ ಪೂಜಿಸುವ
ಸಾಮಾನ್ಯ ಜನವ ಮೆಚ್ಚಿಸಲು, ಈ ಬಾಲೆಯನು
ಸಂತಳೆಂದೊರೆಯಬೇಕೆಂದು ಗುರು ಪೀಠದಲಿ
ಬಿನ್ನಪವ ಮಾಡಿದರು. ರೋಂ ಮಹಾಗುರುಮಠ
ಜೀನಿಯನು ಸಂತಳೆಂದಿತು. ಸಂತ ಸತ್ತಗಳ
ವ್ಯತ್ಯಾಸವೇನು ಎಂದೋ ಸತ್ತ ಬಾಲಿಕೆಗೆ?
ಜೀನಿಯನು ಸಾಧು ಎಂದಿವರಿತ್ತ ಹೊಗಳುತಿರೆ,
ಆಂಗ್ಲಜನ, ಅವಳು ಸಾಯುವ ವೇಳೆಗೇ ತುಂಬು
ಬಸಿರಿಯಾಗಿದ್ದಳೆಂದರು. ಹೆಣ್ಣ ತೆಗಳದಿರೆ
ಕೆಲವು ಗಂಡಿಗೆ ತೃಪ್ತಿ ಇಲ್ಲ; ಒಳ್ಳೆಯ ಜನವ
ತೆಗಳದಿರೆ ಕೆಟ್ಟವರ ಹೊಟ್ಟೆ ತುಂಬದು; ಹಗೆಯ
ತೆಗಳದಿರೆ ಮನುಜ ಮನುಜನೆ ಅಲ್ಲ. ಬಸಿರಂತೆ!
ಜೀನಿ ಗಂಡುಡೆಯುಟ್ಟು ನಾಡಸಲಹುವೆನೆಂದು
ಎಂದು ಹೊರಟಳೊ ಅಂದು ತಾನು ಹೆಣ್ಣೆಂಬುದನು
ತೀರ ಮರೆತಳು; ತನ್ನ ಬಳಿಗೆ ಸಾರಿದ ಗಂಡು
ತಾನು ಗಂಡೆಂದು ನೆನೆಯದ ರೀತಿ ಮಾಡಿದಳು.
ಇದು ಎಂತು? ಉಳಿದೆಲ್ಲ ಅದ್ಭುತವನಿಂತೆಂದು

ಹೇಳಬಲ್ಲವರು ಇದನೆಂತೆಂದು ಹೇಳಲಿ.
ಮೊದಲಿಂದ ಇವಳ ಜೊತೆಯಲಿ ನಡೆದ ಡ'ಲವಾಲ್
ಹೇಳಿಹನು. ಜೀನಿ ಬಹು ಚೆಲುವೆಯೇನೂ ಅಲ್ಲ.
ಆದರೂ ರೂಪು ಮತ್ತೂ ನೋಡುವಂತಿತ್ತು.
ನೋಡುವಂತಿತ್ತು ನಿಜ. ನೋಡುವನ ಮನಸಿನಲಿ
ಕೆಟ್ಟಯೋಚನೆ ಮೂಡದಂತಿತ್ತು. ಒಂದು ದಿನ
ಒಂದು ಛತ್ರದ ಅಂಗಳದಲೆ ಆ ಕಡೆಗವಳು
ಸ್ವಲ್ಪ ದೂರದಲಿವನು ಮಲಗಬೇಕಾಯಿತು.
ಹುಡುಗಿ ಉಡುಗೆಯ ತೆಗೆದು ಬೇರೊಂದ ತೊಡುವಂದು
ಇವನಿಗವಳೆದೆ ಕಂಡಿತಂತೆ. ಎಳೆ ಹೆಣ್ಣ ಎದೆ,
ಮಾಟವಾಗಿತ್ತು. ಆದರೆ ಕಂಡವನ ಮನಸು
ತಾಯ ತಂಗಿಯ ಮಗಳ ಎದೆಯ ಕಂಡನೊ ಎನಲು
ಬಯಕೆ ಮೂಡದೆ ಶಾಂತವಾಗಿತ್ತು. ಹಲವಾರು
ತಿಂಗಳೂ ದಿವಸ ಗಂಡಸರೊಡನೆ ನಡೆ ನಡೆದು
ಜೀನಿ ಇವರೊಡನೆ ಬಹು ಸಲಿಗೆಯಲಿ ನುಡಿಯುವಳು.
ಆದರೂ ಒಮ್ಮೆಯಾದರು ಯಾವ ಒಬ್ಬನೂ
ಇವಳೊಡನೆ ಅತಿ ಸಲಿಗೆ ಮಾಡ. ಯಾವನೊ ಒಬ್ಬ
ತಪ್ಪಿ ನುಡಿದನು ; ನಿನ್ನ ದಿನ ಮುಗಿಯಿತೇ ಎಂದು
ಇವಳು ಹೇಳಿದಳು; ಅಂದೇ ಸಂಜೆಯಲಿ ಅವನು
ಹೊಳೆಯಲೀಸುವ ವೇಳೆ ಮುಳುಗಿ ಸತ್ತನು: ಎಂದು
ಸೈನ್ಯಸೈನ್ಯದಲೇ ಪ್ರತೀತಿ. ಇದರಿಂದಲೂ
ಇವಳ ಕುರಿತಾರೂ ಕುಚೇಷ್ಟೆ ನಡೆ ನುಡಿಯರು.
ಆದರೂ ಜೀನಿ ಹಾಸ್ಯವನೊಲ್ಲಳೆಂದಲ್ಲ.
ತರುಣ ದಳಪತಿ ಬೌಡ್ರಿಕೋರ್ ಒಮ್ಮೆ "ಜೀನೆಟ್,
ನಿನಗೇನು, ಮದುವೆಯಾಗುವ, ಮಕ್ಕಳನು ಹೆರುವ,
ಎಂಬ ಆಸೆಯೆ ಇಲ್ಲವೇ?" ಎಂದ. "ಏಕಿಲ್ಲ?"
ಎಂದು ನಕ್ಕಳು ಜೀನಿ : " ಈಗ ನಾ ತೊಡಗಿರುವ

ಕಾರ್ಯವನು ಮುಗಿಸಿ ಊರಿಗೆ ಮರಳಿ ಹಸೆನಿಂದು
ಮೂರು ಮಕ್ಕಳನು ಹೆರುವೆನು." "ಮೂರು ಮಕ್ಕಳನೆ?
ಮೂರೇಕೆ?" "ಒಬ್ಬ ಗುರು, ಒಬ್ಬ ದೊರೆ, ಮತ್ತೊಬ್ಬ
ಸೇನಾನಿ ಆಗಲಿಕೆ". "ಗುರು ದೊರೆಯ ನಾನೊಲ್ಲೆ;
ಆ ನಿನ್ನ ಸೇನಾನಿ ಮಗನ ಪಡೆಯುವ ತಂದೆ
ನಾನಾಗಬಹುದೆ?" "ಆಗದು ಏಕೆ? ಆದರಿದ
ಗೊತ್ತುಮಾಡಲು ಈಗ ಹೊತ್ತಿಲ್ಲ. ಕೈಕೊಂಡ
ಕೆಲಸವನು ಮುಗಿಸಿ ಅಲ್ಲವೆ ನಲವು ಒಲವುಗಳ
ಚಿಂತೆಯನು ಮಾಡುವುದು?" ಎಂತ ಚೆಲುವ ವಿನೋದ!
ಎಂತ ತಿಳಿಯಾದ ನಗೆ! ಪಾಪ! ಹುಡುಗಿಗೆ, ತನ್ನ
ಕಾರ್ಯವನು ಮುಗಿಸಿ, ಮನೆ ಹೆಣ್ಣಾಗಿ ತಾಯಾಗಿ
ಬಾಳ ನಡೆಸುವ ಪ್ರಾಪ್ತಿ ಇಲ್ಲವಾಯಿತು. ಇಂತು
ಮನೆ ಹೆಂಡಿರಾಗಿ ತಾಯಾಗಿ ಬಾಳುವ ಪ್ರಾಪ್ತಿ
ಬಹಳ ಹಿರಿದೆಂದಲ್ಲ; ನಿಜದಿ ಜೀನಿಗೆ ದೊರೆತ
ಹೆಸರಿಗೂ ಮಿಗಿಲಾದುದೆಂದಲ್ಲ. ಎಳೆ ಹೆಣ್ಣು
ಹಾಸ್ಯದಲಿಯಾದರೂ ಬಯಸಿದ್ದ ಬಯಕೆಗಳು
ಶುದ್ಧಾಂಗ ಇಲ್ಲವಾದುವೆ ಎಂದು ಎನ್ನ ಮನ
ಇವಳ ಚರಿತೆಯ ನೆನೆದ ವೇಳೆ ತಳಮಳಿಸುವುದು;
ತಳಮಳಿಸಿ ಆ ಕ್ಷಣವೆ, ಬಾಳು ಇಂತೇ ಎಂದು
ವೈರಾಗ್ಯ ತಾಳುವುದು. ಬಾಳ ನೀಡುವ ದೈವ
ಗಂಡು ಬೆಕ್ಕಂತೆ. ತಾ ಪಡೆದ ಜೀವದಿ ಕೆಲವ,
ಒಳಿತಾವುದೆಂದು ಆರಿಸಿ, ನುಂಗಿ ತಣಿಯುವುದು.
ಇದರಿಂದಲೇ ನಮ್ಮ ಧರ್ಮ ದೈವವನು ಹರಿ
ಹರನೆಂದು ಕರೆದಿಹುದು ಎಂದೆನ್ನ ತಿಳಿವಳಿಕೆ.
ಹರಿ ನಿಜದಿ ಒಲಿದನೇ ತಿರಿವಂತೆ ಮಾಡುವನು;
ಹರ ನಿಜದಿ ಒಲಿದು ಇರದಂತೆ ಮಾಡುವನು; ಇದು

ಜೀವನದ ಸೂತ್ರ. ಜೀನಿಯ ಆತ್ಮ ಬಹು ಒಳಿತು ;
ಅದರಿಂದ ಅದನು ಹರಿಹರ ಮಾಸಲೆಂದುಂಡು
ಅವಳ ಹೆಸರನು ಮಾತ್ರ ಲೋಕದಲಿ ನಿಲಿಸಿಹನು.

*   *   *   *

ಸೀತಣ್ಣ ಕತೆ ಹೇಳಿ ಮುಗಿಸಿದನು. ಮುಸಿಲಮ್ಮ
ಬಲಿಯಾದ ಕತೆಯ ಕೇಳಿದ ವೇಳೆ ಗುಂಪೆಲ್ಲ
ಸುಮ್ಮನೆಯೆ ಕುಳಿತಂತೆ ಈಗಳೂ ಸುಮ್ಮನೆಯೆ
ನಸುಮಿಸುಕದಂತೆ ಕುಳಿತಿತು. ರಾಮಕೃಷ್ಣಯ್ಯ
ಆಗ ಎಂತಂತೆಯೇ ಈಗಳೂ ಕ್ಷಣಬಿಟ್ಟು
ಟೀಕೆಯನು ನುಡಿದರು. “ ಇದೇನು ಹಣೆ ಬರಹವೋ
ನನ್ನ ಹಣೆಬರಹ ನಾಕಾಣೆ. ಬಾಳುವೆಯಲ್ಲಿ
ಸಹಿಸಬಹುದಾದಷ್ಟು ದುಃಖದಲಿ ಕುದಿದಾಯ್ತು.
ಇದು ಸಾಲದೆಂದು, ಮಾಡುವ ಕೆಲಸದಲಿ ಕೂಡ
ಮನದೆದುರು ದುಃಖವೇ ಸಾರುತಿದೆ. ಪಾಠದಲಿ
ಒಥೆಲೊ ಶಾಕುಂತಲವ ಕಲಿಸಬೇಕಾಗಿಹುದು.
ಹಬ್ಬದಲಿ ಕತೆಕೇಳಿ ಸುಖಿಸು ಟೀಕಿಸು ಎಂದು
ಎಲ್ಲ ಕೇಳಿದಿರಿ, ಒಪ್ಪಿದೆನು. ಈ ಸರತಿಯಲಿ
ಎರಡುದಿನ ಇಂಥ ದುಃಖದ ಕತೆಯೆ ಬಂದಿಹವು.
ಇದನೆ ಜನ ಪ್ರಾಪ್ತಿ ಎಂಬುದು. ಒಳಿತು. ರಘುನಾಥ
ಬರೆದ ಕತೆಯಂತೆ ಸೀತಣ್ಣ ಹೇಳಿದ ಕತೆಯೂ
ಹಿರಿದೊಂದು ಜೀವನವ ಚಿತ್ರಿಸಿದೆ. ಮಡಿದವಳ
ಜೀವ ಹಿರಿದೆಂಬ ಭಾವನೆಯ ಆವೇಗದಲಿ
ಎಳೆ ಹೆಣ್ಣಿಗಾದ ಅನ್ಯಾಯ ಎಷ್ಟು ಅಸಹ್ಯ
ಹೇಯವೆಂಬುದನು ಕಾಣದೆ ಹೋಗಬಹುದು ಮನ.
ನಿಜದಿ ನೋಡಿದೊಡೆ ಇಂತಪ್ಪ ಅನ್ಯಾಯವೇ
ಮಾನವನ ಮನಕೆ ಲೋಕವ ಕಾವ ಕಾರ್ಯದಲಿ
ದೇವರೆನ್ನುವ ತತ್ವ ಒಂದಿಹುದೆ ಇಲ್ಲವೇ

ಎಂಬ ಶಂಕೆಯನು ಒಡ್ಡುವುದು. ಕತೆಯಲಿ ಕೊನೆಗೆ
ಸೀತಣ್ಣ ದೇವರನು ಗಂಡುಬೆಕ್ಕೆಂದಿಹುದು
ಸರಿಯೆನ್ನುವರು ತುಂಬ ಮಂದಿ. ಎಂತೇ ಇರಲಿ
ಜೀನಿ ಕೊನೆಯಲಿ ಕೂಡ ಶಿಲುಬೆಯನು ಎದೆಗಪ್ಪಿ
ಧೈರ್ಯದಲಿ ಮಡಿದುದು ಸಮಾಧಾನ ಎನಗೆ. ಇದು
ಒಂದು ಅಚ್ಚರಿ. ಕಷ್ಟಪಡುವ ಭಕ್ತಗೆ ತನ್ನ
ದೈವ ಇಲ್ಲವೊ ಎಂಬ ಶಂಕೆ ತಲೆದೋರದು.
ಅವನ ಕಷ್ಟವ ನೋಡಿ ನಮ್ಮ ಮನದಲಿ ಶಂಕೆ
ಮೂಡುವುದು. ದೈವ ನಿಜವಿರಬೇಕು. ಅದರ ಗತಿ
ನಮ್ಮ ಮನದಷ್ಟಕೇ ಅರ್ಥವಾಗದ ಒಂದು
ಚಿತ್ರಗತಿ ಇರಬೇಕು. ಅಂತಲ್ಲದಿರೆ ಜೀನಿ
ಇಂತ ಅದ್ಭುತಗಳನು ಎಂತು ಮಾಡಲು ಬಹುದು?
ಅಂತೆ ಆ ಹುಡುಗಿ ಕೇಳಿದಳೆಂಬ ಆ ಧ್ವನಿಯು
ನಿಜವೆ ಇರಬೇಕು. ವೈಶಿಕ ಚಿತ್ತವಿಭ್ರಾಂತಿ
ಸಮ್ಮೋಹ ಮೊದಲಾದ ಮಾತಿಂದ ಈ ತೆರದ
ಅನುಭವವ ಬಣ್ಣಿಸುವ ಬುದ್ಧಿವಂತರು, ಜಗದಿ
ತಮ್ಮ ಅನುಭವ ಹೊರತು ಬೇರೆ ಅನುಭವವೆಲ್ಲ
ಸುಳ್ಳೆಂಬ ನಿಲುವಿನಲಿ ಕೆಡುತಿಹರು. ಗ್ರೀಸಿನಲಿ
ಸಾಕ್ರಟೀಸ್ ಅಂದು, ಇಂದಿಗೆ ನಮ್ಮ ದೇಶದಲಿ
ಗಾಂಧೀಮಹಾತ್ಮ, ತಮ್ಮಾಂತರ್ಯದಲಿ ಒಂದು
ದನಿ ನುಡಿವುದೆಂದುದನು ಎಲ್ಲರೂ ಬಲ್ಲೆವು.
ಇಲ್ಲದಿಹ ದನಿಯ ಇದೆಯೆಂಬ ಮರುಳರೆ ಇವರು?
ನಾವು ಬಲ್ಲವರೆ? ಎಳೆಹೆಣ್ಣಾದ ಮಾತ್ರಕೇ
ಜೀನಿ ಕೇಳಿದಳೆಂಬ ದನಿ ಸಾಕ್ರಟೀಸ್ ಗಾಂಧಿ
ತಾವು ಕೇಳಿದೆವೆಂಬ ದನಿಗೆ ಸಮನಾಗದೇ?
ಜೀನಿ ತಾನಿದ್ದ ನಿತುಕಾಲದಲಿ ದೈವವನು
ಸಾಧಿಸಿದಳೆಂದೆ ನಾನಂಬುವೆನು. ಕ್ರೈಸ್ತರಲಿ

ದೈವವನು ನೋಡಿಯೂ ಬಾಳುವುದು ಮನುಜನಿಗೆ
ಸಾಧ್ಯವಲ್ಲ ಎಂದು ನುಡಿ ಇಹುದು. ರಂಗನನು
ಕಂಡಕಣ್ ಇನ್ನೊಂದನೂ ಕಾಣದೆನ್ನುವುದು
ನಮ್ಮವರನುಡಿ. ಜೀನಿ ದೈವವನು ಕಂಡಳು;
ಈ ಬಾಳ ಬಾಳದಾದಳು. ಅವಳು ನಂಬಿದ್ದ
ದೈವ ಅವಳನು ರಕ್ಷಿಸಿರಲೆಂದು ನನ್ನಾಸೆ.
ಇನ್ನೊಂದು ಆಸೆ ನಾ ನಿನ್ನೆ ನುಡಿದಂತಹದು.
ತಪ್ಪು ನಂಬಿಕೆಗೆ ಅನ್ಯಾಯ ಘಾತುಕತನಕೆ
ಬಲಿಯಾದ ಇಂತ ಜೀವಗಳು ಬೇರೆಲ್ಲಿಯೋ
ಉಳಿದಿರುವುದಾಗೆ, ಅವು ಎಲ್ಲ ತಮ್ಮೆಡೆಯಿಂದ
ತಮ್ಮ ಆತ್ಮಪ್ರಭಾವ ಹರಿಸಿ ಲೋಕದಲಿ
ಇನ್ನಾದರೂ ಇಂತ ಅನ್ಯಾಯ ಅಪಘಾತ
ನಡೆಯದಂದದಿ ನೋಡಿಕೊಳ್ಳಲಿ. ಇನ್ನೊಂದು
ಮಾತ ಹೇಳುವೆನು; ಕೋಪಿಸಬೇಡಿ. ಇನ್ನು ಬಹ
ಐದು ದಿನ ಕತೆ ಹೇಳುವರು, ಒಂದೆ ಸಮನಾಗಿ
ರಘುನಾಥ ಸೀತಣ್ಣನಂತೆ ಒಂದೂ ದಿವಸ
ಅಂತರವ ಕೊಡದೆ, ಕೇಳುವ ಹೊಟ್ಟೆಯುರಿವಂತ
ಕತೆಗಳನು ಹೇಳಬೇಡಿರಿ. ಲೋಕದಲಿ ದುಃಖ
ಇಹುದು ನಿಜ. ಅದನು ಕತೆಯಲಿ ಹೇಳಬೇಕು ನಿಜ.
ಆದರೂ ಇಂತು ಒಂದೇ ಸಲಕೆ ಅದರಿಂದ
ಅಭಿಷೇಕ ಮಾಡುವುದು ಬೇಡ." ಟೀಕೆಯ ಮಾತು
ಮುಗಿದಿರಲು ರಾಮು "ನಾಳೆಯ ಸಂಜೆ ದೀಕ್ಷಿತ
ಕತೆ ಹೇಳುವನು" ಎಂದ. "ವಚ್ಚರೋ ವಚ್ಚಲೋ"
ಅವನು ಹೇಳಿದ ಕತೆಯ ಹೆಸರು. ಅದು ಮುಂದೆ ಇದೆ.

*

## "ವಚ್ಚರೋ ವಚ್ಚಲೋ"

ಶ್ರೀರಂಗಪಟ್ಟಣದಿ, ಹಾವಮೆಲ್ವಾಸಿನಲಿ
ಪವ್ವಳಿಸಿ, ಓಡುವಿನಿಯಳ ತಡೆವ ಸರಸದಲಿ
ತೊಡಗಿರುವನಲ್ತೆ ವೈಕುಂಠಪತಿ. ಕಾವೇರಿ,
ಪತಿ ಇಂತು ಅಡ್ಡಗಿಸಿ ದಾರಿಯಲಿ ಕೆಡೆದಿರಲು,
ಅವನ ತಪ್ಪಿಸಲೆಂದು ಒಡನೆ ತಾ ಎರಡಾಗಿ
ಎರೆಯನನು ಬಳಸಿ ಮುಂಬರಿಯುವಳು. ತಾ ಗೆಲಿದೆ
ಎಂದು ಸಂತಸವ ತೋರುತ ಹರಿದು, ಆನಿತರಲೆ
ಎಡದಿಂದ ಲೋಕಪಾವನೆ ಬೀಸಿದಲೆಗಳಲಿ
ಆಸೆಯನುತೋರಿ ಭರದಿಂದೋಡಿ ಜೊತೆಸಾರೆ,
ತಂಗೆಯನು ಬರಸೆಳೆದು ತೋಳತೆಕ್ಕೆಯೊಳಪ್ಪಿ;
ಮರಳಿ ಎದುರಿನಲಿ ದೊರೆ ಕರಿಯುಗಟ್ಟದ ತುದಿಗೆ
ನೆಲಸಿಕಾಣಿಸೆ, ಬೆಗಡುಗೊಂಡು ಬಲಗಡೆಹಾಯ್ದು
ಒಂದೆ ಓಟದಲಿ ಓಡುತ; ಸೋಮನಾಥಪುರ
ಸೋಸಲೆಯ ನಾಡಿನಲಿ ನಗುನಗುತ ಹರಿದಾಡಿ
ತಂಗೆ ಕಪಿಲೆಯನಲ್ಲಿ ಕೂಡುವಳು. ಆನಿತರಲೆ
ನರಸಿಂಹ ರೂಪದಲಿ ಮತ್ತೆ ಹರಿ ಕಂಗೊಳಿಸೆ,
ಎಡಮುರಿದು ಹರಿದು, ತಲಕಾಡ ಮುಂಬದಿಮಳಲ
ಮಾಲಿಂಗಿಮಡುವಾಗಿ, ಕೀರ್ತಿನಾರಾಯಣನ
ಎದುರಿನಲಿ ಎನಸೊ ನಿಂದೊಲೆದು, ಶಿವನಸಮುದ್ರ
ಎತ್ತ ಎನ್ನುತ ಸುಳಿದು, ಆ ಮೇಡಿನಲಿ ವಿಷ್ಣು
ಮತ್ತೊಮ್ಮೆ ಹಾವ ಹಾಸಿನಲಿ ಮೆಯ್ದೋರಿಬರೆ,
ಸಿಲುಕದೋಡುವ ಭರದಿ ಏಗೆಯ್ವೆನೆಂಬುದೇ
ತಿಳಿಯದಾಯಿತೊ ಎಂಬತೆರದಿ ಆ ಬರಚುಕ್ಕಿ
ಗಗನಚುಕ್ಕಿಯಲಿ ಪಾತಾಳದೆಡೆ ದುಮ್ಮಿಕ್ಕಿ
ಕೆಳನಾಡ ಸಾರುವಳು.

ಜಗದಂಬೆ ಈ ತೆರದಿ
ಪತಿಯೊಡನೆ ಸರಸದಾಟವನಾಡಿ ಓಡುವೀ
ಪೂನಾಡು ಕಣಗಾಲ ಸಿರಿಯುಂಗಳವೆ ಮೊದಲು
ಮೂಗೂರು ಬೆಳಕವಾಡಿಗೆ ಮುಗಿವ ನಲುನಾಡ
ಅಂದ ಚಂದವನು ಬಣ್ಣಿಸಲಳವೆ ?  ಹೆತ್ತಾಕೆ
ಎದೆಗಿಟ್ಟು ಸಲಹುತಿಹ ಕಂದನಂದದಿ ನಾಡು,
ಹೊಳೆಯು ತೀರವ ಮುಟ್ಟಿ ಸೊಂಪಾಗಿ ಬೆಳೆದಿರುವ
ಗರಿಕೆಗಳ ಬಯಲೇನು, ಕಾಲುವೆಯು ನೀರಿಂದ
ಹೊರವಾಗಿ ಬೆಳೆದ ಶಾಲಿಗಳ ಮಡಿಯೇನು, ಆ
ನಡುವೆ ಈ ತಂಪನೆರೆಯಲಿ ಬೆಳೆದು ಒತ್ತಾಗಿ
ನಿಂದಿರುವ ತೋಪ ಮರವೇನು, ತೋಪಿನ ಬದಿಗೆ
ಬಾವಿ ದೇಗುಲದಿಂದ ಮೆರೆವ ತುರುಗಿದ ಮನೆಯು
ಊರೇನು, ಊರು ಊರಲಿ ಈ ಸಮೃದ್ಧಿಯಲಿ
ಬಾಳಿ ಬೆಳೆಯುತಲಿರುವ ಜನವೇನು, ದನವೇನು,
ಇಂತೆಲ್ಲ ತೆರನ ಸಂತಸ ಸಂಪದಗಳಿಂದ
ದೇವನಂದನ ತಾನು ಭೂಲೋಕಕ್ಕೈತಂದು
ನಿಂದುದೋ ಎಂಬಂತೆ ಕಣ್ಮನವ ಕಳುತಿಹುದು.

ಇಂತಿರುವ ಚೆಲುವನಾಡಿನ ಮಧ್ಯೆ ಕಾವೇರಿ
ಕಪಿಲೆಯನು ಕೂಡುವೆಡೆ, ಈ ಕಡೆಗೆ ಕೂಡಲು,
ಇತ್ತ ಸೋಸಲೆ, ಇತ್ತ ನರಸೀಪುರದ ಮೂರು
ಅಗ್ರಹಾರಗಳಿಹವು. ಸೋಸಲೆಯೆ ನಮ್ಮೂರು.
ವ್ಯಾಸ ಗುರುರಾಯರಾ ಕಾಲದಲಿ ಈ ನಾಡ
ಅರಸು ನೀಡಿದ ಭಕ್ತಿ ಭರಿತ ಆಹ್ವಾನವನು
ಒಲಿದು ಮನ್ನಿಸಿ ಶಿಷ್ಯರೊಡನಿಲ್ಲಿಗೈತಂದು
ತಮ್ಮ ಪೂಜೆಯ ದೇವರಿಲ್ಲಿ ನಿಂದಿರಲೆಂದು
ಆದಿ ಪೀಠವನು ಮಾಡಿದರು. ಆ ಗುರು ಪೀಠ
ಈಗಳೂ ಇಲ್ಲೆ ಇದೆ. ಇದೆಯೆಂದು ಬಹುದೇನು?

ಆ ಕಾಲ ಕಂಡ ವೈಭವ ಮರಳಿ ಈ ದಿವಸ
ಕಾಣುವುದೆ? ಜನಕೆ ಬೇಕಿಲ್ಲ; ಜನ ಒಲ್ಲದಿರೆ
ಭಕ್ತಿ ತಪ ನಿಲಲಿಲ್ಲ. ಕಾರದಿನ, ಹೊಳೆ ತುಂಬಿ,
ನೀರ ನೆರೆ ಬರೆ, ಎರಡು ದಡ ಅದನು ತಡೆದೊತ್ತಿ
ಇಷ್ಟು ನೀರೆಮಗೇಕೆ ನಡೆ ಮುಂದೆ ಹೋಗೆಂದು
ಅದನು ಅಟ್ಟುವುವು. ತುಂಬಿದ ಹೊಳೆಯ ನೀರೆಲ್ಲ
ಮುಂದು ಮುಂದಕೆ ಹೋಗಿ ಸಾಗರವ ಸೇರುವುದು.
ಇಂತೆ ಧರ್ಮದ ವಾಹಿನಿಯು ಕೂಡ. ಯುಗಕೊಮ್ಮೆ
ಧರ್ಮ ನೆರೆಯುಕ್ಕಿ ಬರುವುದು; ಲೋಕ ಇತ್ತರ್ಧ
ಅತ್ತರ್ಧ ನಿಂತು ಅದ ತಡೆದು ಮುಂದಕೆ ಅಟ್ಟಿ
ತನಗೆಷ್ಟು ಇಷ್ಟ ಅಷ್ಟನೆ ಉಳಿಸಿಕೊಳ್ಳುವುದು.
ವ್ಯಾಸರಾಯರು ಇತ್ತ ಬಿಜಮಾಡಿಸಿದ ಕಾಲ
ಧರ್ಮವಾಹಿನಿ ನೆರೆಯೊಳುಕ್ಕಿ ತುಂಬಿದ ಕಾಲ.
ಆ ಮೇಲೆ ಒಂದೆರಡುನೂರು ವರುಷದವರೆಗು
ಈ ಮೂರು ಅಗ್ರಹಾರದಲಿ ಶ್ರೋತ್ರಿಯ ವೃಂದ
ಚೆಲುವ ಬಾಳನು ಬಾಳಿತಹುದು. ಆ ಕಾಲದಲೆ
ವ್ಯಾಸದಾಸರ ಎರಡು ಕೂಟ ಏರ್ಪಟ್ಟವು.
ಜಾತಿ, ಸಂಸ್ಕಾರ, ಸಂಸ್ಕೃತ ಭಾಷೆ, ಕರ್ಮವನು
ಬಿಡದೆ ನಿಂತುದು ವ್ಯಾಸಕೂಟ; ಗುಣ, ನಡೆ, ಭಕ್ತಿ,
ತಾಯಿ ನುಡಿ, ಸಾಕು ಎಂದುದು ದಾಸ ಕೂಟ. ಗುರು
ವ್ಯಾಸಕೂಟಕೆ ಮೌಳಿ. ಕನಕದಾಸರು ಮೊದಲಿ
ದಾಸ ಕೂಟಕೆ. ತಾವು ಎಷ್ಟು ಶಾಸ್ತ್ರವನೋದಿ
ತಪಗಳನು ಗೆಯ್ದರೂ ಸಿದ್ಧಿಯಲಿ ಕನಕಣ್ಣ
ನಿಜದಿ ತಮಗೂ ಮೇಟಿ ಎಂದು ಗುರು ಹೊಗಳಿದುದ
ಸಂಪ್ರದಾಯದಲಿ ನುಡಿವುದ ಎಲ್ಲ ಬಲ್ಲೆವು.
ಇಂತಿರ್ದ ಕಾಲದಲಿ ನಡೆದ ಸಂಗತಿಯೆಂದು
ಇದನು ಹಿರಿಯರು ಹೇಳುವರು.

ಆದಿಗುರು ಇಲ್ಲಿ
ತಪದಿ ಸಿದ್ಧಿಯ ಹೊಂದಿ ನೆಲದಿ ಮಹಿಮೆಯನಿಟ್ಟು
ದಿವಕೆ ಮರೆದಿರೆ ಅವರ ಕೀರ್ತಿಯನು ಪೋಷಿಸುತ
ಗುರು ಪರಂಪರೆ ನಡೆಯುತಿತ್ತು. ಇಂತಿರೆ ಅವರ
ಬಳಿಕ ಪೀಠಕೆ ಬಂದ ಎರಡನೆಯ ಗುರುಗಳೋ
ಮೂರನೆಯ ಗುರುಗಳೋ ನಿಜಶಿಷ್ಯವೃಂದವನು
ಹೊರೆದಾಳುತಿರುವ ದಿನದಲಿ, ಮಠದ ಸೇವೆಯಲಿ
ಒಂದು ಮನೆತನವಿತ್ತು. ಗುರು ಎರಡು ಹೊತ್ತಿನಲು
ದೈವದಾರಾಧನವ ಗೆಯ್ವಂದು ಎದುರಿನಲಿ
ಇವರೊಳೊಬ್ಬಾತ ವಿಷ್ಣು ಸಹಸ್ರನಾಮವನು
ಪಠಿಸುವುದು ಅವರ ಕಟ್ಟಲೆ. ನಮ್ಮ ಈ ಕತೆಯ
ದಿವಸದಲಿ ಮಠದ ಈ ಸೇವೆಯನು ಸಲ್ಲಿಸುತ
ದಾಯಾದರಿಬ್ಬರಿದ್ದರು. ಅವರೊಳೊಬ್ಬನಿಗೆ
ಸಂಸ್ಕೃತದ ಪರಿಪಾಠ ಕಡಮೆ ; ಮತ್ತೊಬ್ಬಾತ
ಅದನು ಚೆನ್ನಾಗಿ ಬಲ್ಲವನು. ಈ ವಿದ್ವಾಂಸ
ಕಲಿತ ರಾಮಾಚಾರ್ಯ. ಕಲಿಯದಿಹ ದಾಯಾದಿ
ದೊಡ್ಡ ಶಾಮಾಚಾರಿ. ಇಬ್ಬರೂ ಅವನವನು
ತನಗೆ ತಿಳಿದಂತೆ ವಿಷ್ಣುಸಹಸ್ರನಾಮವನು,
ಒಂದು ತಿಂಗಳು ಇವನು ಒಂದು ತಿಂಗಳು ಅವನು,
ದೇವರಿದಿರಲಿ ಪಾಠಮಾಡಿ ವಂಶಕೆ ಬಂದ
ಸೇವೆಯನು ತಮಗೆ ಬಂದಂತೆ ಸಲಿಸುತಲಿಹರು.

ಈ ಸ್ತೋತ್ರ ವ್ಯಾಸಕೃತ. ಇದನು ಭಾರತದಲ್ಲಿ
ಸುರನದೀಸುತ, ಪಿತಾಮಹ ಭೀಷ್ಮ, ಮೊಮ್ಮನಹ
ಧರ್ಮನಂದನ ಯುಧಿಷ್ಠಿರಗೆ ಕಲಿಸಿದನಲ್ತೆ.
ಸರ್ವಲೋಕವನು ನಿರ್ಮಿಸಿದೊಂದು ಪರತತ್ವ
ಅದನು ಒಳಹೊಕ್ಕು ತುಂಬಿರುತ ಮುಂದಕೆ ಹಾಯ್ದು
ಸರ್ವಲೋಕವನು ಪೊರೆಯುತಲಿಹುದು ಎಂಬುದೇ

ಎಲ್ಲ ವೇದದ ಸಾರ. ವ್ಯಾಪಿಸಿರುವುದು ವಿಷ್ಣು.
ಇದರಿಂದ, ಈ ಒಂದು ಪರವಸ್ತುವನು ವೇದ
ವಿಷ್ಣು ಎನ್ನುವ ಹೆಸರನಿಟ್ಟು ಕರೆದಿದೆ. ನಮ್ಮ
ಪೂರ್ವಜರು, ಮನುಜಮಾತ್ರನಿಗೆ ಜಗದೆಲ್ಲೆಡೆಯು
ಇದ ಕಾಣುವುದು ಗುರುತಿಸುವುದೆ ಮುಕ್ತಿಗೆ ಮಾರ್ಗ
ಎಂದು ತಿಳಿದರು. ಅಂತೆ ಇದ ಒಂದು ಪಥಮಾಡಿ
ಲೋಕದಲಿ ನಿಲಿಸಿದರು. ಸೃಷ್ಟಿಯನು ತೀವಿರುವ
ಅಣುರೇಣು ತೃಣಕಾಷ್ಠ, ಕ್ರಿಮಿ ಕೀಟ ಮೃಗ ಪಕ್ಷಿ,
ಶಶಿಸೂರ್ಯ ಗ್ರಹತಾರೆ, ರೋದೋಂತರಾಳದಲಿ
ರವೆಯಾಗಿ ತುಣುಕಾಗಿ ಚೆಂಡಾಗಿ ಗುಂಡಾಗಿ
ಹಿರಿಯ ಅಂಡಗಳಾಗಿ ಹೊಳೆವೆಲ್ಲ ಬೆಳಕಿನಲಿ,
ಪರವಸ್ತುವನು ಕಂಡ ಋಷಿ ಅದರ ಸಂಖ್ಯಾಕ
ನಾಮದಲಿ ಸಾವಿರವನಾಯ್ದು ಪೋಣಿಸಿ ಒಂದು
ಹಾರವನು ಮಾಡಿದನು.

ದೈವವನು ಬಣ್ಣಿಸುವ
ಈ ಹೆಸರುಗಳ ಸಾಲು ಏನೆಂತ ಗುಹ್ಯ ತಮ
ಗಹನ ತತ್ವವನು ಒಳಗೊಂಡಿಹುದು ಎಂಬುದನು
ಹೇಳಲಳವಲ್ಲ. ಆರಂಭ ವಿಶ್ವಂವಿಷ್ಣು ;
ಅಂತ್ಯ ಸರ್ವಪ್ರಹರಣಾಯುಧಃ ; ಈ ಮಧ್ಯೆ
ಪರತತ್ವವನು ಕುರಿತ ಮುಖ್ಯ ಭಾವನೆಯೆಲ್ಲ
ಒಂದೊಂದು ಪದದಿ ರೂಪಾಂತಿಹುದು. ಅವ್ಯಕ್ತ ;
ಅಪ್ರಮೇಯ ಅಮೇಯ ಅನಘ ; ಶೂನ್ಯ ಅಮೋಘ ;
ಧಾತಾ ಅನಿರ್ದೇಶ್ಯವಪು ಅಣು ಬೃಹತ್ ಸ್ಥೂಲ ;
ಕೃಶ, ಅನರ್ಥಾರ್ಥ ; ನಿರ್ಗುಣ ಗುಣಭೃತಾನಂದ ;
ನಿಮಿಷ ಅನಿಮಿಷ, ಕಾಮದಾ ಕಾಮಹಾ, ಕಾಮ ;
ದರ್ಪದಾ ದರ್ಪಹಾ ; ಅಕ್ಷರಕ್ಷರ ಅಮೃತ ;
ಸರ್ವಶರ್ವಸ್ಥಾಣು ; ಶಿವ ಶ್ರೀದ ಶ್ರೀವಾಸ ;

ಅಗ್ರಣೀ ಗ್ರಾಮಣೀ ಅಗ್ರಾಹ್ಯ ದುರ್ಲಭ ;
ದುರ್ಗಮ ದುರಾವಾಸ, ಸುಲಭ ಸುವ್ರತ ಸೂಕ್ಷ್ಮ ;
ನ್ಯಗ್ರೋಧ ಅಶ್ವತ್ಥ ಔದುಂಬರ ; ಅಚಿಂತ್ಯ ;
ಈ ಎಲ್ಲ ಹೆಸರ ಅರ್ಥವ ತಿಳಿಯೆ ವೇದಾಂತ
ಕಲಿಸುವುದು ಬೇರೆ ಉಳಿಯದು.

ಇಂತ ಹೆಸರಿನಲಿ
ನಮ್ಮಲ್ಲಿ ಹಲವರರಿತಿರುವಂತೆ ವತ್ಸರೋ
ವತ್ಸಲೋ ವತ್ಸ ಎಂಬವು ಮೂರು. ಕಲಿಯದಿಹ
ದೊಡ್ಡ ಶಾಮಾಚಾರಿ ಇದನು ಹೇಳುವ ಹೊತ್ತು
ವಚ್ಚ ವಚ್ಚ ಎನ್ನುವನು. ತ್‌ಸದ ಜೋಡುಸ್ವರ
ಅವನ ಬಾಯಲಿ ಏನ ಮಾಡಿದರು ಬರದಿಹುದು.
ಒಂದು ತಿಂಗಳು ನಮ್ಮ ಕಲಿತ ರಾಮಾಚಾರ್ಯ
ವತ್ಸರೋ ವತ್ಸಲೋ ವತ್ಸ ಎಂದುದ ಕೇಳಿ
ಮೂರನೆಯ ತಿಂಗಳಲಿ ದೊಡ್ಡ ಶಾಮಾಚಾರಿ
ವಚ್ಚರೋ ವಚ್ಚಲೋ ವಚ್ಚ ಎಂದುಲಿಯುತಿರೆ
ಸ್ವಾಮಿಗಳು ಏನೊಂದು ಬೇಸರವನೂ ಪಡದೆ
ಪೂಜೆಯನು ನಡೆಸುವರು. ಒಂದೊಂದು ಸಲ ಅಲ್ಲಿ
ಹತ್ತು ಜನ ಸೇರಿರುವ ವೇಳೆ ರಾಮಾಚಾರ್ಯ,
ಇವನಂತ ಬೇರೆ ಜನ, ವಚ್ಚರೋ ವಚ್ಚಲೋ
ಎಂಬ ಪದ ಬಂದೊಡನೆ ತಾಳಲಾರದೆ ಮುಖವ
ಸಿಣುಕುವರು. ದೊಡ್ಡಶಾಮಾಚಾರಿ ತನ್ನುಲಿವು
ಸರಿಯಲ್ಲವೆಂದು ಬಲ್ಲನು. ಏನ ಮಾಡುವುದು ?
ಸರಿಯಾದ ಉಚ್ಚಾರ ಬರದು ನಾಲಗೆ ತುದಿಗೆ.
ಇಂತಿರಲು ಒಂದು ಸಲ ಚಿಕ್ಕಪ್ಪ ದೊಡ್ಡಪ್ಪ
ಪಡೆದ ಈ ದಾಯಾದಿಗಳಲಿ ಏನೋ ಜಗಳ
ಎಂದಿಗಿಂತಲು ಸ್ವಲ್ಪ ಹೆಚ್ಚಾಗಿ ಬೆಳೆಯಿತು.
ಆದರಿಂದ ಒಂದು ದಿನ ದೊಡ್ಡ ಶಾಮಾಚಾರಿ

ಸ್ತೋತ್ರವನು ಹೇಳುತಿಹ ಹೊತ್ತಿನಲಿ ಈ ಮಾತು
ಬಂದಿತೆಂದೊಡನೆ ದಾಯಾದಿ ರಾಮಾಚಾರ್ಯ,
ಬಹು ಬೇಸರವ ತೋರಿ, ಜೊತೆಗೆ ನಿಂತವರೊಡನೆ,
ಪೂಜೆಯಲಿ ಹಾಳು ಈ ಅಪಶಬ್ದ ಕೇಳುವುದು
ಸ್ವಾಮಿಗಳ ಹಣೆಗೆ ಬರೆಯಿತು, ಎಂದು ಗೊಣಗಿದನು.
ಪೂಜೆ ನಡೆಯುವ ವೇಳೆ ಜನ ಮಾತನಾಡುವುದು
ಅನುಚಿತದ ನಡತೆ. ರಾಮಾಚಾರ್ಯ ಇದ ಬಲ್ಲ.
ಆದರೂ ಜ್ಞಾತಿ ಮತ್ಸರದ ಬೇಗೆಯು ಕಾರಿ
ಇನಿಸು ಶಮನವ ಪಡೆಯೆ ಮನಸು ಸೋತನು ಆತ.
ಪೂಜೆಯಲಿ ಕುಳಿತ ಸ್ವಾಮಿಗಳು ಈ ಗೊಣಗಾಟ
ಏನೆಂದು ತಿಳಿದುಕೊಂಡರು. ಇವನ ಕಿರಿತನಕೆ
ತಾವು ಕಿರಿತನವ ಮಾಡುವರೆ? ಎಂದಿನ ರೀತಿ
ಪೂಜೆಯನು ಮುಗಿಸಿದರು.

ಆ ತರುಣದಲಿ ಒಮ್ಮೆ
ಶಿಷ್ಯರಾದವರು ಸೇರಿಹವೇಳೆ, ಸೇವೆಯಲಿ
ಭಕ್ತಿಯೇ ಮುಖ್ಯ ಎನ್ನುವ ಮಾತ ವಿವರಿಸುತ,
ಸ್ವಾಮಿಗಳು ಇಂತು ನುಡಿದರು. ಪೂಜೆ ಮಾಡುವನು
ದೈವದಲಿ ಮನವ ನಿಲ್ಲಿಸಬೇಕು; ಆತ್ಮವನು
ಬುದ್ಧಿಯನು ಎಲ್ಲ ಕರಣವನು ದೈವದಿ ನಿಲಿಸಿ
ಉಸಿರುಸಿರೆ ದೈವವೆನ್ನುವ ಭಾವದಲಿ ಮುಳುಗಿ
ತೇಲುವಂದವ ಕಲಿಯಬೇಕು. ದಿಟವನು ಅರಿಯೆ
ಇಂತು ಮಾಡಿದ ಪೂಜೆಯೇ ಪೂಜೆ. ಇಂಥದೇ
ದೈವವನು ಮುಟ್ಟುವುದು, ಮನುಜನನು ಸಲಹುವುದು.
ಇಂತಲ್ಲದಿಹ ಪೂಜೆ ಪೂಜೆಯಾಕೃತಿ ಮಾತ್ರ;
ಪೂಜೆಯೆಂಬುದರ ಜೀವಾಳ ಅದರೊಳಗಿಲ್ಲ.
ಇದುವೆ ಭಕ್ತಿಯ ಸಾರ. ದೇವರನು ಬೇಡುವುದು;

ಕೂಗುವುದು,ಶರಣು ಹೊಗುವುದು, ಬೇಡಿ ಕಾಡುವುದು.
ಇಂತಪ್ಪ ಎಲ್ಲ ವ್ಯಾಪಾರದಲು ಮಾನವನ
ಅಂತರ್ಯ ಮೊದಲು ಕರಗಿರಬೇಕು. ನಮ್ಮಮನ
ದಿಟದಿ ಕರಗಿರೆ ದೈವ ನಮಗೆ ಕರಗುವುದು ದಿಟ.
ಜೀವ ಕರಗಿತೆ ದೈವ ಕರಗುವುದು. ಜೀವವೇ
ಕರಗದಿರೆ ದೈವ ಕರಗುವುದೆಂತು ? ವಿಧಿ, ಭಕ್ತಿ,
ಎರಡರಲಿ ಭಕ್ತಿಯೇ ಹಿರಿದು. ವಿಧಿ ಸರಿಯಿದ್ದು
ಭಕ್ತಿ ಇಲ್ಲದ ಪೂಜೆಗಳ ದೈವ ಒಲ್ಲದು.
ಭಕ್ತಿಯಲಿ ಗೆಯ್ದ ಪೂಜೆಯಲಿ ತನ್ನನು ಮೀರಿ
ವಿಧಿಲೋಪ ತೊಡಕಿರಲು ದೈವ ಅದ ಲೆಕ್ಕಿಸದು.
ಸ್ತೋತ್ರವನು ಸರಿಯಾಗಿ ಉಚ್ಚರಿಸುವವನ ಮನ
ಎತ್ತಲೋ ಅಲೆಯುತಿರೆ ಉಚ್ಚಾರ ತಹುದೇನ ?
ಬಾಯಿ ತಿರುಗದೆ ನಿನ್ನ ಉಚ್ಚಾರ ಕೆಟ್ಟಿರಲಿ :
ತಿಳಿದಷ್ಟು ಚೆನ್ನಾಗಿ ನುಡಿಯೆ ನುಡಿದುದು ಸಫಲ.
ಬೆಳೆದ ಮಗ ತಂದೆಯನು ಸರಿಯಾಗಿ ಕರೆಯುವನು ;
ಎಳೆ ಹಸುಳೆ ತೊದಲಿ ತಪ್ಪುವನು. ತಂದೆಗೆ ಇವರ
ಎರಡು ದನಿಯುಲು ಒಂದೆ ತರದ ಸುಖ. ಒಂದರಲಿ
ಹೆಚ್ಚು ಸುಖವೆನ್ನೆ, ಹಸುಳೆ ತೊದಲಿ ಕರೆಯುವತೆರನ
ಕೇಳುವುದರಲೆ ಹೆಚ್ಚು. ತಿಳಿಯದವರನು ನೋಡಿ
ಕಲಿತವರು ಬೇಸರುವುದೊಳಿತಲ್ಲ. ಬೆಳೆದಣ್ಣ
ನುಡಿ ಬಾರದೆಳೆಯ ತಮ್ಮನ ಕಾಣುವಂದದಲಿ
ಒಲಿದು ನೋಡುವುದು ಸರಿ. ಸರಿಯಾಗಿ ನುಡಿವುದನು
ಕಲಿಸ ತೊಡಗುವುದು ಸರಿ. ಕಲಿಸಿದುದ ಕಲಿಯದಿರೆ
ಮುದ್ದಾಡಿ ನಲಿಯುವುದು ಸರಿ. ತಾನು ಕಲಿತವನು
ಎಂಬ ಹೆಮ್ಮೆಯ ಭಾವ ಸಲ್ಲ. ಹರಿ ಇದ ಒಲ್ಲ.

ಗುರು ಇಂತು ನುಡಿದಿರಲು, ಒಪ್ಪಿದವರೊಪ್ಪಿದರು.
ಒಪ್ಪದಿದ್ದವರು, "ಇದು ಯಾವ ಊರಿನ ಮಾತು ?

ಉಚ್ಚಾರ ತಪ್ಪಿದರೆ ಮಂತ್ರ ಫಲಿಸುವುದುಂಟೆ ?
ಮನವಿಟ್ಟು ಊದಿದರೆ ಹಸಿ ಸೌದೆ ಉರಿಯುವುದೆ ?
ಮನವನಿಡರೆಂದು ಒಣತರಗು ಉರಿಯದೆ ಇಹುದೆ ?
ಕ್ರಿಯೆ ಮುಖ್ಯ. ಕ್ರಿಯೆಯಾಗದಿರುವ ಬರಿಮನ ಬಂಜೆ"
ಎಂದು ತಂತಮ್ಮೊಳೇ ಆಡಿಕೊಂಡರು. ಕಲಿತ
ನಮ್ಮ ರಾಮಾಚಾರ್ಯ ಒಪ್ಪದವರಲಿ ಒಬ್ಬ.
ಅಲ್ಲದೆಯೂ ಇವನ ಮನದಲಿ ಗುರುಗಳೀ ಮಾತ
ತನ್ನ ಕುರಿತೇ ನುಡಿದರೆಂದೊಂದು ಸಂದೇಹ.
ದೊಡ್ಡ ಶಾಮಾಚಾರಿ ಸ್ವಾಮಿಗಳ ಬಳಿ ಬಹಳ
ಭಕ್ತಿಯಲಿ ಆಷಾಢಭೂತಿಯಾಟವನಾಡಿ
ಗುರುಗಳನು ಮರುಳುಗೊಳಿಸಿಹನು ; ಅವನನು ಕುರಿತು
ಇವರ ಮನದಲಿ ಪಕ್ಷಪಾತವಿದೆ ; ತಾನಂತು
ಅನುಸರಿಸಲಿಲ್ಲೆಂದು ಗುರು ತನ್ನ ವಿಷಯದಲಿ
ಏನೊ ಅಸಮಾಧಾನ ಪಟ್ಟಂತೆ ಕಾಣುತಿದೆ ;
ಎಂದು ಯೋಚಿಸಿ ಇವನು ತನ್ನಸೂಯೆಯು ನೊಗಕೆ
ದಾಯಾದಿಯೊಡನೆ ಗುರುವನು ಹೂಡಿ ನಿಲಿಸಿದನು.
ಗುರು ಇದನು ನೋಡಿದರು; ಇವನನೆಂತಾದರೂ
ಉದ್ಧರಿಸಬೇಕೆಂದು ಅವರು ಮನಮಾಡಿದರು.

ಇಂತು ಕೆಲ ದಿವಸ ಕಳೆದಿರೆ ಇವನು ಒಂದು ದಿನ
ತನ್ನ ಮನೆ ಮುಂದೆ ತಾಳೆಯ ಓಲೆ ಪುಸ್ತಕದ
ಹೇರನಡಕಿದ ಗಾಡಿ ಒಂದು ಹೋಹುದ ಕಂಡ.
ಕಲಿತವನು. ಏನು ಪುಸ್ತಕ, ಎಲ್ಲಿ ಹೋಗುವವು,
ಎಲ್ಲಿಂದ ಹೋಗುವವು, ಎಂದು ಕೌತುಕದಿಂದ
ಗಾಡಿಯವನನು ಕುರಿತು, ಏನು ಪುಸ್ತಕ ಇವು,
ಎಲ್ಲಿಗೊಯ್ಯುವೆ, ಎಂದು ಕೇಳಿದನು. ಗಾಡಿಯನು
ಹೊಡೆಯುತಿದ್ದವನು, ಸಾಸರನಾವ್ದು ಪುಸ್ತಕ,
ದೊರೆಗಳಿಗೆ ಬೇಕಂತೆ, ನಮ್ಮೂರ ಗೌಡಗಳು

ಕಲೆಹಾಕಿ ಕಳುಹಿದರು, ಎಂದು ಹೇಳಿದನು. "ಎಲ
ಇಷ್ಟು ಪುಸ್ತಕವೂ ಸಹಸ್ರನಾಮವೆ ? ಇರದು.
ನೋಡೋಣ" ಎಂದು ರಾಮಾಚಾರ್ಯ ಗಾಡಿಯನು
ಸಾರಿ ಹತ್ತೆಂಟು ಆ ಪುಸ್ತಕವನಲ್ಲಲ್ಲಿ
ತೆರೆದು ನೋಡಿದನು. ಎಲ್ಲಾ ಅದೇ ಸ್ತೋತ್ರದವು.
ಎಲೆಲ ಚೆನ್ನಾಯಿತೇ, ಒಂದೆ ಸ್ತೋತ್ರದ ಇಷ್ಟು
ಪ್ರತಿ ಏಕೆ ರಾಜರಿಗೆ, ಎಂದು ಬೆಕ್ಕಸದಿಂದ
ಇವನು ಜಗಲಿಗೆ ಮರಳಿದನು. ಸ್ವಲ್ಪ ಹೊತ್ತಿನಲಿ
ಮತ್ತೊಂದುಗಾಡಿ; ಅದರೊಡನೆ ಬ್ರಾಹ್ಮಣ ಒಬ್ಬ.
"ಸ್ವಾಮಿ ಇದು ಏನು ಪುಸ್ತಕ" ಎನಲು ಆ ಹಿರಿಯ
"ನಮ್ಮ ರಾಜರಿಗೆ ವಿಷ್ಣುಸಹಸ್ರನಾಮದಲಿ
ಆಸಕ್ತಿ ಹುಟ್ಟಿಹುದು. ಎಂದೆಂದು ಎಲ್ಲೆಲ್ಲಿ
ಭಕ್ತರಾದವರು ಈ ಸ್ತೋತ್ರವನು ಎಂತೆಂತು
ನುಡಿದರೋ ನೋಡಬೇಕೆಂದು ಆಶಿಸಿ ಅವರು
ನಾಡಿನಲಿ ದೊರೆವ ಓಲೆಯ ಪ್ರತಿಗಳನು ತರಿಸಿ
ಎಂದು ಅಪ್ಪಣೆಗೆಯ್ದಿಹರು, ಇಲ್ಲಿ ಸುತ್ತಿನಲಿ
ದೊರೆವ ಪುಸ್ತಕಗಳನು ಒಯ್ಯುತಿರುವೆವು" ಎಂದು
ಹೇಳಿದರು. ನಮ್ಮ ರಾಮಾಚಾರ್ಯ ಗಾಡಿಯೆಡೆ
ಹೋಗಿ ಪುಸ್ತಕ ಒಂದ ಎತ್ತಿದನು. ಅದರಲ್ಲಿ
ಮೊದಲು ತೆರೆದಲ್ಲೆ ಈ ವತ್ಸರೋ ವತ್ಸಲೋ
ಶ್ಲೋಕ ಕಣ್ಣಿಗೆ ಬಿತ್ತು. ಆದರಾಮಾತಲ್ಲಿ
ಇಂತು ಬರೆದಿರಲಿಲ್ಲ. ವಚ್ಚರೋ ವಚ್ಚಲೋ
ವಚ್ಚ ಎಂದಿತ್ತು. ಇದು ಏನು ಅಚ್ಚರಿ ಎಂದು
ಬೇರೊಂದು ಪುಸ್ತಕವ ತೆರೆದಲ್ಲಿ ನೋಡಿದರೆ
ವತ್ಸರೋ ವತ್ಸಲೋ ವತ್ಸ ಎಂದಿದೆ; ಜೊತೆಗೆ,
ದ್ರವಿಡಭಾಷೆಯಲಿ, ಈ ಶಬ್ದಗಳ ಉಚ್ಚಾರ
ಬಾರದವರಲಿ, ವಚ್ಚರೋ ವಚ್ಚಲೋ ವಚ್ಚ

ಎಂದು ಹೇಳುವುದುಂಟು, ಒಬ್ಬ ಹಿರಿಸಾಧುಗಳು
ಇಂತೆನುಡಿದುದು ಉಂಟು, ಎಂದೊಂದು ಟಿಪ್ಪಣಿ.
ಏನು ಆಶ್ಚರ್ಯ ಇದು ಎಂದು ರಾಮಾಚಾರ್ಯ
ತನ್ನ ಜಗಲಿಯ ಸಾರಿದನು, ಗಾಡಿ ಮರೆಯಾಯ್ತು.

ಅಂದು ಸಂಜೆಯಲಿ ರಾಮಾಚಾರ್ಯ ಮಠದಲ್ಲಿ
ತನ್ನ ಸರತಿಯಲಿ ಸ್ತೋತ್ರವಹೇಳಿ, ಸ್ವಾಮಿಗಳು
ಪೂಜೆ ಮುಗಿಸಿದಮೇಲೆ, ಎರಡು ಗಾಡಿಯ ತುಂಬ
ಅಷ್ಟು ವಿಷ್ಣುಸಹಸ್ರನಾಮದೋಲೆಯ ಗ್ರಂಥ
ಅರಮನೆಗೆ ಹೋಯಿತೆಂದೂ, ಅದರೊಳೊಂದರಲಿ
ವತ್ಸರೋ ವತ್ಸಲೋ ವತ್ಸ ಎನ್ನುವ ಶಬ್ದ
ವಚ್ಚರೋ ಇತ್ಯಾದಿ ಇದ್ದವೆಂದೂ, ಅರಿಕೆ
ಮಾಡಿದನು. ಗುರು ಅವನ ಕುರಿತು, “ಆಚಾರ್ಯರೇ,
ನಿಮಗೆ ಪುಸ್ತಕ ಹಿರಿದು; ಪುಸ್ತಕದಲಿಹುದು ಎನೆ
ಒಪ್ಪಿಕೊಂಬಿರಿ ನೀವು. ಪುಸ್ತಕದಿನೋಡಿದಿರಿ ;
ಒಪ್ಪಿಕೊಳ್ಳಿರಿ. ನಾವು ಗುರುಗಳುಪದೇಶವನು
ಸಾರುವೆವು. ಅಲ್ಲಿ ಓಲೆಯಮೇಲೆ ಬರೆದಿಹುದು;
ಇಲ್ಲಿನಾಲಗೆಯ ಮೇಲಿಲ್ಲವೇ? ವಚ್ಚರೋ
ವಚ್ಚಲೋ ವಚ್ಚ ಅಂತಿರಲಿ. ಬಾಲ್ಯದಿ ನಾವು
ಸಾಧು ಒಬ್ಬರನು ಬಲ್ಲೆವು; ಆತ ಯಾವವೋ
ಹತ್ತಾರು ಇಂಥ ಅರೆಕೊರೆಯ ಶ್ಲೋಕಗಳನ್ನೆ
ಇಷ್ಟು ಬಂದಂತು ಹೇಳುವರು. ಅವರೊಂದು ಸಲ
ಹೊಚ್ಚಾಳೊ ಹೊಚ್ಚಳೋ ಹುಚ್ಚಿ ಎಂದೀಮಾತ
ತಪ್ಪು ತಪ್ಪೇ ಹೇಳಿ ಚಿಂತಿಸುತ ಕುಳಿತರು.
ನಮ್ಮ ಜೊತೆಗಿದ್ದ ಒಬ್ಬರು ಇವರ ಪರಿನೋಡಿ
‘ಕ್ಷೀರಸಾಗರಶಾಯಿ ಮಲಗಿಹನು, ಚಳಿಯದಿನ,
ರಾಣಿ ಲಕ್ಷ್ಮೀದೇವಿ ನಿದ್ರಿಸುವ ಅರಸನಿಗೆ

ಚೆನ್ನಾಗಿ ಹೊದಿಸುವರೊ ಹುಚ್ಚಿಯೊಲು ಹೊದಿಸರೋ
ಎಂದು ಯೋಚಿಸುತಿಹರು ಸಾಧುಗಳು' ಎಂದರು.
ವತ್ಸರೋ ಎಲ್ಲಿ, ಹೊಚ್ಚಾಳೊ ಎಂಬುದು ಎಲ್ಲಿ?
ಋಷಿಬರೆದ ನಾಮ ಅದು; ಇದು ಭಕ್ತ ನಿರ್ಮಿಸಿದ
ವಿಷ್ಣುವಿನ ಸಂಸಾರ; ಮಲಗಿರುವ ಮೊಮ್ಮಗಗೆ
ಧಾವಳಿಯ ಹೊದಿಸುವಜ್ಜನ ಮರುಕ, ವಾತ್ಸಲ್ಯ.
ವತ್ಸರೋ ಎಂದು ನಾಮವನು ಲಕ್ಷಣವಾಗಿ
ಉಚ್ಚರಿಸಿ ನಾವು ದೈವವನು ಊಹಿಸಲಿಲ್ಲ.
ಹೊಚ್ಚಾಳೊ ಎಂದು ಅಪಶಬ್ದ ಮಾಡಿದ ಸಾಧು
ವಾತ್ಸಲ್ಯ ಭಕ್ತಿಯಲಿ ಮುಕ್ತಿಯನೆ ಸಾರುವನು.
ನಮ್ಮ ತೋಟದ ಬರಿಯ ಜಾಲಿ ಭಕ್ತನ ವನದಿ
ಕಸ್ತೂರಿ ಜಾಲಿಯಾಗುವುದು; ಇದು ಭೂಗುಣ;
ಮನದಗುಣ; ಹೃದಯಗುಣ. ಇದುಬೇಕು ಮನುಜನಿಗೆ.
ಎಮ್ಮ ಮನ ಎಂದಿಂತು ಸರಳವಪ್ಪುದು ಎಂದೆ
ಹರಿಯನುಗ್ರಹಕೆ ಕಾದಿಹೆವಾವು" ಎಂದರು.

ಅಲ್ಲಿಂದ ಮುಂದೆ ರಾಮಾಚಾರ್ಯ ದಾಯಾದಿ
ದೊಡ್ಡ ಶಾಮಾಚಾರಿ ವಚ್ಚರೋ ವಚ್ಚಲೋ
ಎಂದು ತಪ್ಪನು ಉಚ್ಚರಿಸಿದಂದು ಬೇಸರದೆ
ತಡೆದುಕೊಂಡನು ಎಂದು ನಮ್ಮ ಕತೆಹೇಳುವುದು.

* * *

ಇಂತು ದೀಕ್ಷಿತ ತನ್ನ ಕತೆ ಹೇಳಿ ನಿಲಿಸಿರಲು
ರಾಮಕೃಷ್ಣಯ್ಯ ಟೀಕೆಯನು ನುಡಿದರು: "ಜೀನಿ,
ಮುಸಿಲಮ್ಮ, ಇವರ ಕತೆ ಕೇಳಿ ಸೋತಿದ್ದು ಸಿರು
ಇಂತ ಹಗುರದ ಕತೆಯ ಮನವೊಪ್ಪಿ ಕೇಳುವುದು.
ಶ್ರೀರಂಗಪಟ್ಟಣದಿ ಹಾವಮೆಲ್ವಾಸಿನಲಿ
ಎಂಬ ಮೊದಲನು ಕೇಳಿ ಕತೆಯ ಸಂಗತಿ ಏನೊ

ಹಿರಿದಾಯಿತೇ ಎಂದು ನಾ ಮನದಿ ಹೆದರಿದೆನು
ವರ್ಣನೆಯ ವಿಸ್ತಾರ ಹುಟ್ಟಿಸಿದ ಆ ಭಯವ
ಬರಿದೆನಿಸಿ ಕತೆ ಇಂತು ಲಘುವಾಗಿ ಮುಗಿಯಿತು.
ಇದು ನನಗೆ ಸಂತೋಷ. ಹಕ್ಕಿಗಿಂತಲು ತೋಕೆ
ಮಿಕ್ಕಿತೆನ್ನುವ ರೀತಿ ಅತ್ಯಲ್ಪ ವಸ್ತುವಿಗೆ
ಬಹಳ ಬಿತ್ತರದ ಬಣ್ಣನೆ ಎಂಬಿರೇ? ಅದೇ
ನವಿಲೆಂಬ ಹಕ್ಕಿ. ತಪ್ಪೇನು? ಬಣ್ಣನೆ ಕೇಳಿ
ಆಸೆಪಟ್ಟರೆ ಒಳಗೆ ಹೂರಣವೆ ಇರಲಿಲ್ಲ
ಎಂಬಿರಾ? ಅಂಥದೇ ಭಕ್ಷ್ಯವಿದೆ. ನೀವೆಲ್ಲ
ಉಪಮಾನದಿಂದ ದೀಕ್ಷಿತನ ಹಳಿವುದು ಸಾಕು.
ಕರ್ಜಿಕಾಯನು ಕಾಣದವನು ಅದ ಕರಿಗಡುಬು
ಎಂದು ಅವುಕಿದರೆ ಅದು ಮನೆಯೆಲ್ಲ ಚೆಲ್ಲುವುದು.
ಬಡಿಸಿದವನದು ತಪ್ಪೆ, ಅವುಕಿದವನದು ತಪ್ಪೆ?
ಕತೆಗಾರ ತನ್ನ ನಾಡನು ಬಣ್ಣಿಸುವವೇಳೆ
ಮಾತು ಹೆಚ್ಚುವುದು ಅಚ್ಚರಿಯಲ್ಲ. ಸೋಸಲೆ
ತಲಕಾಡು ತಿರುಮುಕೂಡಲು ಸೋಮನಾಥಪುರ,
ಈ ನಾಡ ಬಣ್ಣಿಸುವ ಆಸೆ ಯಾರಿಗೆ ಇಲ್ಲ?
ಗಾಡಿಗಳು ನಿಜದ ಗಾಡಿಗಳೊ, ಗುರುಗಳ ಮಹಿಮೆ
ತಂದ ಮಾಯದ ಗಾಡಿಗಳೊ ಕತೆಯೊಳುಸಿರಿಲ್ಲ.
ಹಳೆಯ ಕತೆಗಳಲಿ ಇಂತಿಹುದು ಅಚ್ಚರಿಯಲ್ಲ.
ಇನ್ನು ಈ ಕತೆ ಬೋಧಿಸುವ ಶ್ರೇಷ್ಠ ನೀತಿಯನು
ಚಂದ್ರಶತ್ರುಗಳೆಲ್ಲ ಒಪ್ಪುವೆವು. ಅಂತೆನಲು
ಸೋಮ ಅರಿಗಳು. ವತ್ಸ ವತ್ಸ ಎನ್ನುವ ಕಷ್ಟ
ನಮ್ಮ ನಾಲಿಗೆಗೆ ಬೇಡೆಂಬ ಸೋಮಾರಿಗಳು
ಅದನು ಭಕ್ತಿಯ ಹೆಸರಿನಲಿ ಮರಸಿ ಬಾಳುವೆವು.
ಶಬ್ದದುಚ್ಚಾರವೇ ಮುಖ್ಯವೆನೆ ಅರ್ಥದಲಿ
ಮನವಿರಿಸಬೇಡ ಎನ್ನುವ ಮೂರ್ಖರಿರುವಂತೆ,

ಭಾವನೆಯೆ ಮುಖ್ಯವೆನೆ ಶಬ್ದವನು ಇನ್ನೆನಿತು
ಅಪಶಬ್ದ ಮಾಡಿದರು ಆಗಬಹುದೆಂಬರೂ
ಉಂಟು. ಎರಡೂ ಎರಡು ತಪ್ಪು. ಭಾವನೆ ಮುಖ್ಯ.
ನಿಜ. ಅದನು ಸರಿಮಾಡಿಕೊಂಡಿಹುದು ನಿಶ್ಚಯವೊ?
ನಿಜವಾಗಿ, ಸೋಮಾರಿ ತನಗೆ ತಾನೇ, ನನಗೆ
ಭಕ್ತಿ ಇದೆ, ಶಬ್ದದುಚ್ಚಾರ ತಪ್ಪಿದರೇನು
ಎಂದು ನುಡಿವುದರಲ್ಲಿ ಇಂತ ಕತೆ ಬಂದಿಹುದು.
ನ್ಯಾಯದಲಿ, ಕಲಿತವರು ದಡ್ಡಮಂದಿಯ ನೋಡಿ
ತಾವು ಹೆಚ್ಚೆಂದು ಬೀಗುವುದು ಸಲ್ಲದು ಎಂಬ
ತತ್ತ್ವ ಅಷ್ಟೇ ಇದರೊಳೊಳ್ಳಿತಾಗಿಹ ಭಾಗ.
ಗುರು ಒಬ್ಬರಾಡಿದರು: ಯಾವೊಂದು ವಸ್ತುವನು
ಹಿಡಿಯಲೂ ಎರಡು ಹಿಡಿಯುಂಟು; ಅದರಲಿ ಒಂದು
ಸರಿಯಾದ ಹಿಡಿ, ಒಂದು ಸರಿಯಲ್ಲ; ಕರಕಸವ
ಹಿಡಿವವನು ಹಿಳುಕಿನಲಿ ಕೈಯಿರಿಸು, ಅಲಗಿನಲಿ
ಹಿಡಿಯದಿರು. ನುಡಿದ ಸಂದರ್ಭ ಉದ್ದೇಶವನು
ರೀತಿ ಔಚಿತ್ಯವನು ಅರಯಿಸಿ ಇಂತೆಲ್ಲ
ಕತೆಯ ಅರ್ಥವ ತಿಳಿಯಬೇಕು." ಟೀಕೆಯಮಾತು
ಮುಗಿದಿರಲು ರಾಮು ನಾಳೆಯ ಸಂಜೆ ರಾಜಣ್ಣ
ಕತೆ ಹೇಳಬೇಕು ಎಂದನು. ಮಾರನೆಯ ದಿವಸ
ರಾಜಣ್ಣ ಒರೆದಕತೆ "ರಾಮುಪ್ರಿಯ ಉದನ್ತ".

Printed at the B. B. D. Power Press, Cottonpet, Bangalore City,
by U. Narasimha Mallya, Proprietor.

# ವಿಷಯ ಸೂಚಿ

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩
ಯಶೋಧರಾ (ನಾಟಕ)
ಸಣ್ಣ ಕತೆಗಳು ೮
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ನಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

**ಈ ಪುಸ್ತಕಗಳು ದೊರೆಯುವ ಸ್ಥಳಗಳು :—**

**ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ**
**ಬೆಂಗಳೂರು ಪ್ರೆಸ್ ಬ್ರಾಂಚ್ ಡಿಪೊ, ಅವೆನ್ಯೂ ರೋಡ್,**
**"ಕೃಷ್ಣಾ ಬಿಲ್ಡಿಂಗ್ಸ್", ಬೆಂಗಳೂರು ಸಿಟಿ**
**ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು**
**ಸಾಹಿತ್ಯ ಭಾಂಡಾರ, ಹುಬ್ಬಳ್ಳಿ**

# ರಾಮಪ್ರೀಯ ಉದನ್ತ

ಪೂರ್ವದಲಿ ವಾರಣಾಸಿಯ ದೇಶವನು ಆಳ್ದು
ರಾಮನೃಪ ಎಂಬ ಹೆಸರಿನ ಒಬ್ಬ ದೊರೆಯುಂಟು.
ಅರಮನೆಯ ಸುಖದ ಸಂಪದದ ಗರ್ಭದೊಳುದಿಸಿ.
ಕೈಗೆ ಕಾಲಿಗೆ ತೊಡರುವಂತೆ ಸುತ್ತಲು ನೆರೆದ
ಪರಿಚಾರಿ ಜನದ ಮಧ್ಯದೆ ಬೆಳೆದ ಭೂಪಾಲ.
ಒಡಲು ಹರೆಯುವ ಹೊಗುವದಿನಕೆ, ನಂಟನ ಒಂದು
ಅದುವೆ ಹರೆಯದ ಹೆಣ್ಣ ಮದುವೆಯಾದನು; ಅಂತೆ
ಒಂದೆರಡು ವರುಷದಲಿ ತಂದೆ ತೀರಿರೆ ತಾನು
ಗಾದಿಯನು ಏರಿದನು. ಆ ವರುಷ ಕಳೆದೊಡನೆ,
ನೆರೆಯ ರಾಜ್ಯದ ಗೆಳೆಯ ರಾಜನೊಬ್ಬನ ಒಮ್ಮೆ
ಕಂಡಂದು, ಏನೊ ಮಾತಿಗೆ ಬಂದು, ಆ ದೊರೆಯ
ತಂಗಿಯೊಬ್ಬಳನು ಎರಡನೆ ಹೆಂಡಿರಾಗಿರಲು
ಹಸೆನಿಂದು ಕರೆದು ತಂದನು. ಮೂರನೆಯ ವರುಷ
ಹಿರಿಯ ಹೆಂಡಿರು ಒಬ್ಬ ಮಗನ ಹೆತ್ತಳು; ಕಿರಿಯ
ಹೆಂಡಿರಲಿ ಒಂದು ಹೆಣ್ಮಗು. ನಾಡು ಅರಮನೆಯ
ಸಂತಸವ ಹೇಳಲೇತಕೆ? ದೊರೆಗು ಸಂತಸವೆ.
ಮನೆದೈವ ವಿಶ್ವೇಶ್ವರನ ಕರುಣೆಯಿಂದ ನೆಲ
ಅನ್ನಪೂರ್ಣೆಯೆ. ನಾಡಿನಲಿ ಸುಭಿಕ್ಷ. ಇದೇನು
ಇಂಥ ಸೌಖ್ಯದ ಹೊನಲು ಇಂತಹ ಅವಿಚ್ಛಿನ್ನ
ವಾಹಿನಿಯೊಳಾಲಿ ಬರುತಿದೆ ಎಂದು ಜನದ ಮನ
ಬೆರಗುಗೊಂಬಂತೆ ದೇಶವ ಸೌಖ್ಯ ತುಂಬಿಹುದು.
ದಿನ ಕಳೆದು ರಾಜನಿಗೆ ಮತ್ತೊಬ್ಬ ಕುವರನೂ

ಕುವರಿಯಿನ್ನೊಬ್ಬಳೂ ಜನಿಸಿದರು. ಇಂತಿರುತ
ಅರಮನೆಯ ಸೌಖ್ಯ ನಾಡಿನ ಸುಖದ ಕಳಸವೆನೆ
ಅಂತೆ ಬೆಳೆಯಿತು, ಅಂತೆ ಬೆಳಗಿತು. ನೃಪಾಲನಿಗೆ
ಅನುಸರಿಸಿ ಒಲಿವ ರಾಣಿಯರು, ಭುಜದೆತ್ತರಕೆ
ಬೆಳೆದು ನಯದಲಿ ನಡೆವ ಕುವರರು, ಸಮೀಪದಲೆ
ಅರಗುವರರೀರ್ವರನು ಹಸೆನಿಂದು ಸುಖದಿಂದ
ಬಾಳನಡೆಸುತ ಚಿಮ್ಮಿ ನಡೆಯುತಿಹ ಕುವರಿಯರು,
ಸಂತಸದ ಸಾಗರದ ಅಲೆಗಳಂತೆಸೆದಿಹರು.
ನಾಡಜನ, ಪರಿವಾರ, ನೆರೆನಾಡಜನ, ಎಲ್ಲ
ಈತನೇ ಪುಣ್ಯಾತ್ಮ ಎಂದು ಹೊಗಳುತಲಿಹರು.

ಇಪ್ಪತ್ತುವರ್ಷ ಕಳೆಯಿತು ಇಂತು. ಮಳೆ ಗಾಳಿ
ಬಿಸಿಲು ಎಂಬುದನು ಕಾಣದ ನೆರಳ ಒಳಬಾಳ
ಶಾಂತಿ ಸುಖದಲಿ ರಾಮನೃಪ ಎಲ್ಲ ಇಪ್ಪತ್ತು
ವರುಷವನು ಒಂದುದಿನವೆಂಬಂತೆ ಕಳೆದನು.
ಕೊನೆಗೆ ಒಂದಿರುಳು, ಆಪ್ತಾಮಾತ್ಯ ದೇವಲನ
ಸಹಿತ ನಗರದಿ ಗೂಢದಲಿ ನಡೆವ ವೇಳೆಯಲಿ
ನಗರಿಗರ ಬಾಳುವೆಯ ಕೆಲವೆರಡು ಅವಸರವ
ಕಂಡು, ಅದು ಏನೊ ಚಿಂತೆಯಲಿ ಆಳ್ದನು. ಒಬ್ಬ
ಪುಣ್ಯವಂತನ ಭವನದಲಿ ಏನೊ ಉತ್ಸವ.
ನೂರಾರುಮಂದಿ ಕೈಸಾಲೆಯಲಿ ನೆರೆದಿದೆ.
ಅರಮನೆಯ ಗಾಯಕ ಉಮೇಶ್ವರ ಸ್ವರನಿಧಿ
ಸಭೆಯ ಮುಂಗಡೆ ಕುಳಿತು ಒಂದು ರಾಗವ ಹಿಡಿದು
ಹಾಡಿದನು. ದೊರೆ ಮಂತ್ರಿ, ಯಾರೊ ಬೀದಿಯಮಂದಿ

ಎಂಬಂತೆ, ಹೊರಗೆ ನಿಂತರು, ಹಾಡಕೇಳಿದರು.
ಸ್ವರನಿಧಿಯ ಗಾಯನವ ದೊರೆ ಕೇಳಿಬಲ್ಲನಲೆ.
ಆದರಾಸಭೆಯ ಮುಂಗಡೆಯ ಹಾಡಲಿ ಅವನು
ಅದು ಏತರದೊ ಒಂದು ಹೊಸಪರಿಯ ಚಳಕವನು
ತೋರಿದನು. ದೊರೆ ಅದನು ನೋಡಿ, ತನ್ನೆದುರಿನಲಿ
ಹಾಡುವಂದಿವಸನು ಏತಕೆ ಇಂತು ಹಾಡನು,
ಎಂದು ಆರಯ್ದುಕೊಂಡನು. ಮುಂದೆ ನಡೆದಿರಲು
ಒಂದು ಮನೆ ಮುಂಗಡೆಯ ಕೋಣೆಯಲಿ ಗಂಡೊಬ್ಬ
ಹೆಣ್ಣು ಒಬ್ಬಳು ನುಡಿದುಕೊಂಡಿಹುದು ಕೇಳಿಸಿತು.
"ನೀನು ಯಾವಳ ಎಡೆಯೊ ಇರುಳರ್ಧವನು ಕಳೆದು
ಈಗ ನನ್ನೆಡೆಗೆ ಬರುತಿಹೆಯ? ಇದು ಒಲುಮೆಯೆ?
ಮದುವೆಯಪ್ಪಂದು ಇಂತೆಯೆ ಇದ್ದೆವೇ ನಾವು?
ಇನ್ನು ಈ ಬಾಳಿನಲಿ ಸುಖವೆ ಮರ‍್ಯಾದೆಯೆ?"
ಹೆಣ್ಣಿಂತು ನುಡಿದಿರಲು ಗಂಡು, "ಕೋಪಿಸಬೇಡ,
ಅಂದು ಒಲಿದವನೆ ಇಂದೂ ಒಲಿದು ಬಳಿಸಾರಿ
ಬೇಡೆನೇ ಈಗ? ಯಾರಲಿ ಹೋಗಿ ಏನಾದೆ
ಎಂಬ ನುಡಿಯೇಕೆ? ನೀನೇ ಈಗಲೂ ನನ್ನ
ಮನದನ್ನೆ. ತಪ್ಪಿದೆನೆ ಮನ್ನಿಸು; ಮಾರ್ಪಡದೆ
ಒಲವಿಂದ ಕಾಣು," ಎಂದಿಹನು. ಆರೆಕೊರೆನುಡಿ
ಒರ್ವರೊರ್ವರಲಿ ನಡೆಯುತಲಿಹವು. ರಾಮನೃಪ
ಮುಂದೆ ಸಾರಿದನು. ಇಬ್ಬರು ಮುಂದೆ ನಡೆದಿಹರು;
ಹಿಂದೆ ರಾಜ ಅಮಾತ್ಯ. ಮುಂಗಡೆಯ ಇಬ್ಬರಲಿ
ಒಬ್ಬ ಹೇಳುತಲಿಹನು: "ನೀವು ಆ ದಿನ ಗೆಯ್ದ
ಸಾಹಾಯ್ಯವನು ಎಂತು ಕೊಂಡಾಡಿ ತೀರಿಸಲಿ?"

ಇನ್ನೊಬ್ಬನೆಂದ: "ಬಹು ಸಾಹಾಯ್ಯವೇ? ಹತ್ತು
ಹೊನ್ನು, ಅಲ್ಲವೆ?" "ಹತ್ತು ಹೊನ್ನು ಸಾವಿರದಂತೆ
ಹತ್ತು ಸಾವಿರವಂತೆ ನನ್ನ ರಕ್ಷಿಸಿತು. ಇದ
ಜನ್ಮದಲೆ ನಾ ಮರೆಯಲಾರೆ. ಕೆಲಸವ ಮುಗಿಸಿ
ಇಂದೆ ಹಿಂದಿರುಗಿದೆನು. ಕಂಡು ಇದ ಬಿನ್ನವಿಸೆ
ಬಳಿಗೆ ಬಂದೆನು. ಔತಣಕೆ ಸಾರಿಹುದು ತಿಳಿದು,
ಉಚಿತ ಅನುಚಿತ ಏನೆ ಇರಲಿ, ಕಾಣದೆ ಮನಸು
ತಡೆಯದಿರೆ, ಅಲ್ಲೆ ಐತಂದು ಕಂಡೆನು. ತಂದೆ
ಮಗನಿಂದ ಎಂತಂತೆ ಮುಂದೆ ತಾವೆನ್ನಿಂದ
ಸೇವೆಯನು ಕೊಳಬೇಕು." ಇಂತು ನುಡಿಯುತಲಿವರು
ಮುಂಗಡೆಯ ಒಂದು ಮನೆಯೆದುರಿನಲಿ ನಿಂತರು.
ದೊರೆ ಮಂತ್ರಿ ಮುಂದೆ ನಡೆದಿರೆ ಒಂದು ಕೇರಿಯಲಿ
ಒಂದು ಮನೆ. ಬಾಗಿಲಲಿ ಮನೆಯಾತ ಕಂದನನು
ಸಂತಯಿಸುತಿಹನು; ಒಳಗಡೆ ಹೆಣ್ಣು ಬೇನೆಯಲಿ
ಮೊರೆಯುತಿರುವುದು ಕೇಳುತಿದೆ. ನೃಪತಿ ಮಂತ್ರಿಯನು
ಕುರಿತುನೋಡಿದನು. ದೇವಲ, "ಹೌದು, ಪ್ರಭು, ಪ್ರಸವ,"
ಎಂದು ನುಡಿದನು. ಇವರು ಅಂತೆ ಮುಂದರಿದರು.

ಇದು ನಡೆದ ಇರುಳ ಕೊನೆಯಲಿ ರಾಮ ನರಪತಿಗೆ
ಏನು ಎಂತೆಂದು ತನಗೇ ತಿಳಿಯದೊಂದಂದ
ಬಾಳು ಬೇಸರವೆಂದು ನಿರ್ವೇದ ಮೂಡಿತು.
ಏಗೆಯ್ವುದೆಂದು ತೋರದೆ ನೃಪತಿ ಕೆಲದಿವಸ
ರಾಜಗುರುಗಳ ಸನ್ನಿಧಿಯಲಿ ವಾಡಿಕೆ ಮೀರಿ
ಮತ್ತಷ್ಟು ಹೊತ್ತು ಕುಳಿತನು, ಏನ ಹೇಳಿದರು

ಅದ ಕೇಳಿ ನೋಡಿದನು. ಮನದ ಬೇಸರ ಅಂತೆ
ಅಚಲವೆನೆ ನಿಂತೆ ಇದ್ದಿತು. ನಾಲ್ಕು ದಿನ ಕಳೆದು
ದೊರೆ ತಾನು ವೈರಾಗ್ಯ ತಳೆದು ರಾಜ್ಯವನುಳಿದು
ವನಕೆ ಸಾರುವೆನೆಂದು ರಾಣಿಯರು, ಮಗ, ಮಗಳು
ಮಂತ್ರಿಗಳು ಎಲ್ಲರಿಗೆ ತಿಳುಹಿದನು.

ಅರಮನೆಯ
ಅಲ್ಲೋಲಕಲ್ಲೋಲ ಎನಿತು, ಹೇಳುವುದೆಂತು?
ಅರಗುವರ ತಂದೆಯೆಡೆಗೈತಂದು, ತನ್ನಿಂದ
ಯಾವ ಅಪರಾಧವೂ ಆಗದಲೆ, ಆಗಿರಲು
ಅದನು ಮನ್ನಿಸಿ ತಂದೆ ಎಂದಿನಂದಕೆ ತಾವೆ
ರಾಜ್ಯವನು ಆಳುತಿರಬೇಕು, ಎಂದನು. ಹಿರಿಯ
ರಾಣಿ ಏಕಾಂತದಲಿ ಕಾಲಬಳಿಯಲಿ ಕುಳಿತು,
ತಾನೇನೊ ಸವತಿ ಮತ್ಸರದಿಂದ ಕಾಂತನಲಿ
ಎಂದೂ ಅಸೂಯೆ ಗೆಯ್ದುದು ಇಲ್ಲ, ಗೆಯ್ದಂತೆ
ದೊರೆಗೆ ಕಂಡಿದ್ದಿತೇ ಅವರು ಅದ ಮನ್ನಿಸಿ
ಮೊದಲಂತೆ ಇರಬೇಕು, ಸಂನ್ಯಾಸ ಗಿಂನ್ಯಾಸ
ಇವುಗಳ ಪ್ರಸಕ್ತಿಯನು ಬಿಡಬೇಕು, ಎಂದಳು.
ಕಿರಿಯಾಕೆ ಅಂತೆಯೇ, ತನ್ನ ತಪ್ಪೇನಿಸುದು
ಅದ ತಿಳಿಸಿ ತಿದ್ದಿ ಕಾಪಿಡಬೇಕು, ಅದ ಬಿಟ್ಟು
ಕಾಡಸೇರುವೆನೆನ್ನಲೇಕೆ, ಅರಮನೆಯೆಲ್ಲಿ
ಕಾಡೆಲ್ಲಿ, ಈ ಸುಖದ ಬಾಳ ಬಾಳಿದವೊಯ್ಗೆ
ಕಾಡಬಾಳುವೆ ಸಹಿಸಬಹುದೆ, ಎಂದಳು. ಹಿರಿಯ
ಕಿರಿಯ ಮಗಳುದಿರು ಸಂಗತಿ ತಿಳಿದು ಬಂದವರು
ಇಬ್ಬರೂ ಕಣ್ಣೀರು ಸುರಿಸಿದರು. ಕಿರಿಯಮಗ

ಬೇರೆ ಇಂತೇ ನುಡಿದು ಕಾಡಸಾರುವ ಮಾತು
ಬೇಡ ಎಂದನು. ಅಂತೆ ಮಂತ್ರಿಗಳು ಗುರುಗಳು,
ತಮ್ಮತಮ್ಮವು ಮಾತ ಅರುಹಿದರು. ರಾಮನೃಪ
ಕುವರನಿಗೆ ವಿಶ್ವಾಸದಿಂದ, ರಾಣಿಯುದಿರಿಗೆ
ದಾಕ್ಷಿಣ್ಯದಿಂದ. ಮಕ್ಕಳಿಗೆ ಭರದೊಲವಿಂದ,
ಗುರುಗಳಿಗೆ ಭಕ್ತಿ, ಮಂತ್ರಿಗಳಿಗನುನಯದಿಂದ,
ತನ್ನ ನಿಶ್ಚಯವ ವಿವರಿಸಿ, ಯಾವ ಒಬ್ಬರದು
ಯಾವುದೇ ಅಪರಾಧದಿಂದ ಬೇಸರಗೊಂಡು
ತನಗೆ ವೈರಾಗ್ಯ ಬಂದಿಲ್ಲ, ಬಾಳಿದುದಾಯ್ತು,
ಇನ್ನು ಆಗುವುದು ಏನಿದೆ, ಇದೇ ಸುಖವಸತಿ,
ಇದುವೇ ಸಮಾಧಾನ, ಇಂತು ಇಪ್ಪತ್ತಲ್ಲ
ನಾಲ್ವತ್ತು ವರುಷ ಬಾಳಿದರು ಬೇರೇನುಂಟು,
ದೈವಕೃಪೆಯಿಂದ ಬಾಳುವೆ ಇನಿತು ವರ್ಷಧಿನ
ಸೌಖ್ಯದಲಿ ನಡೆದಿಹುದು, ಈಗ ಈ ಸ್ಥಲದಿಂದ
ಮುಂಬರಿವುದೆಂತು ಅದ ತಾನು ಯೋಚಿಸಬೇಕು,
ತನ್ನ ಯೋಚನೆಗೆ ಮನೆ ಮಂದಿ ಹಿರಿಯರು ಎಲ್ಲ
ನೆರವಾಗಬೇಕು, ವೈರಾಗ್ಯವನು ಕೊಳ್ಳುವೆನು,
ಕಾನನವ ಸಾರುವೆನು, ಯಾರೆ ಆಗಲಿ ಇದಕೆ
ಅಡ್ಡಿಬರುವುದು ಬೇಡ, ಎಂದು ಒಪ್ಪಿಸಿದನು.
ಇಂತು ನಿಶ್ಚಯವಾಗಿ ದೊರೆ ಮೂರು ದಿವಸದಲಿ
ಒಳಿತೆಂದು ಕಂಡ ಶುಭದಿನ ತನ್ನ ಕುವರನಿಗೆ
ಪಟ್ಟವನು ಕಟ್ಟಿ ಮರುದಿನ ತಾನು ಹೊರಡುವನು
ಎಂದು ಎಲ್ಲರಿಗು ತಿಳಿಸಿದನು. ಅಂತೇ ಎಸಗಿ
ಗೊತ್ತಾದ ಹೊತ್ತಿನಲಿ ರಾಜಧಾನಿಯನುಳಿದು

ಹೊರಟೆ ಹೊರಟನು. ಒಬ್ಬ ಆಳು ಜೊತೆಗಿರಲೆಂದು
ಅರಸಿಯರು ಮಕ್ಕಳು ಬೇಡಿದರು. ದೊರೆ ಒಲ್ಲ.
ಮೂರುದಿವಸಕೆ ತಕ್ಕ ಆಹಾರ ಎನಿತನಿತ
ತಾನೆ ಕೊಂಡನು. ಮಂದಿ ಹಿಂದೆ ಐತರೆ ಅವರ
ನಿಲಿಸಿದನು. ಹಿರಿಯಾಕೆ ರಾಣಿ, ಮಗ ಹೊಸರಾಜ,
ಉಳಿದ ಮಂದಿಗು ನಾಲ್ಕು ಹೆಜ್ಜೆ ಮುಂದಕೆ ನಡೆದು
ದೊರೆಯ ಬೀಳ್ಕೊಂಡರಪ್ಪುದು. ಕೊನೆಯ ನುಡಿಯಾಗಿ
ಅರಗುವರ ನರಪತಿಗೆ, ನೀವು ಕಟ್ಟಾಯದಲಿ
ನಡೆಸಿರಲು ನಾನು ದೊರೆಯಾಗಿಹೆನು, ಈಗಲೂ
ಈ ರಾಜಪದವಿ ನಿಮ್ಮತ್ತೆ, ನಾನು ನಿಮಗಾಗಿ
ರಾಜನಾಗಿಹೆನು, ಈ ರಾಜ್ಯವನು ಆಳುವೆನು,
ಎಂದೆ ಸರಿ ನೀವು ಹಿಂದಿರುಗಿ ಬರಬಹುದೆನಿಸೆ
ಮತ್ತೆ ನಾನಿದನು ನಿಮ್ಮಡಿಯೊಳರ್ಪಿಸುವವನು,
ಈ ಮಾತು ನೆನಪಿರಲಿ, ಎಂದು ಬಿನ್ನವಿಸಿದನು.
ದೊರೆ ಮಗನ ಕುರಿತು, ಅಪ್ಪಾಜಿ, ಬರಬೇಕೆಂದು
ಮನವಾಗೆ ಬರಲೆಬರುವೆನು, ನೀನೆ ಆಳುತಿರೆ
ನಾನು ಜೊತೆಯಲಿ ಇಹೆನು, ಅದರೊಳೇತರ ತಪ್ಪು,
ಇಂಥ ಸಂಕೋಚ ನನಗಿಲ್ಲ, ನಿನಗೂ ಬೇಡ,
ಎಂದು ಸಂತಯಿಸಿದನು. ಆ ಇರ್ವರೂ ನಿಲಲು
ತನ್ನಂತೆ ತಾನು ನಡೆದನು.

ಐದುವರ್ಷ ದಿನ
ಕಳೆದಿಹುದು. ಜನ ರಾಮನೃಪನ ನೆನೆಯುವ ಹದನ
ಬಿಡುತಿಹುದು. ಹೊಸರಾಜ ಪೊಸಬನೆನ್ನುವ ಭಾವ
ಜನಕೆ, ಜನದಂತೆ ಅವನಿಗೆ, ಮರೆಯುತಿರುವುದು.

ಒಂದುದಿನ ವಾರಣಾಸಿಯ ಬೇಡನೊಬ್ಬವನು
ಮೃಗಮಾಂಸಕೆಂದು ದೂರದ ಕಾನನವ ಸಾರಿ
ಹಿಂದಿರುಗಿದವನು ಗೆಳೆಯರಲಿ ಈ ಸುದ್ದಿಯನು
ತಿಳಿಸಿದನು. ದೂರದಾ ಕಾನನದ ಮಧ್ಯದಲಿ
ಇವನು ಸುಳಿಯುತಿರೆ ತಮಸಾನದಿಯ ಬದಿಯೊಂದು
ಸುಂದರ ವನಪ್ರದೇಶದಲಿ ಕುಟಿಯೊಂದರಲಿ
ರಾಮನೃಪ ಕಣ್ಗೆ ಕಂಡನು. ಅವನು ವನಚಾರಿ
ತರುಣಿಯೊಬ್ಬಳನು ಕೈಹಿಡಿದಿಹನು. ಅವಳಿಂದ
ಒಂದು ಮಗುವನು ಪಡೆದಿಹನು. ಇವನ ಸುದ್ದಿಯನು
ಕೇಳಿ ಗೆಳೆಯರು, ಹುಚ್ಚ ಈ ಮಾತ ಇನ್ನೆಲ್ಲು
ಹೇಳದಿರು, ದೊರೆತನವ ತೊರೆದು ರಾಜ್ಯವನುಳಿದು
ರಾಣಿ ಮಗ ಮಗಳು ಅರಮನೆ ಬೇಡವೆಂದ ದೊರೆ
ಕಾಡ ಗುಡಲಲಿ ಕಾಡಹೆಣ್ಣೊಬ್ಬಳನು ಕೂಡಿ
ಮಗನ ಪಡೆದಿಹನೆನಲು ಹೇಳುವನೆ ಮರುಳ ದಿಟ,
ಕನಸಿನಲಿ ಕಂಡು ನಿಜವೆಂದು ತಿಳಿದೆಯ ಎಂತು,
ಎಂದು ಬಾಯ್ತುಡೆದು ನಿಲಿಸಿದರು. ಅವರಿಗೆ ಬೇಡ
ಇಂತು ಒರೆದನು: "ನಿಮ್ಮ ಇನಿಬರಲಿ ಯಾರೆ ಸರಿ
ನನ್ನೊಡನೆ ಬನ್ನಿ. ನಾ ಕರೆದೊಯ್ದು ತೋರುವೆನು.
ನೋಡಿ ನಾನಾಡಿದುದು ಸಟೆಯೊ ದಿಟವೋ ಹೇಳಿ."
ನಾಲ್ಕು ದಿವಸದ ಪಯಣ; ಕಾಡು ತಮಸೆಯ ಬದಿಗೆ;
ಮಾತೋ ಅಸಂಬದ್ಧ. ಇರುವೆಡೆಯಲೇ ಇವನು
ನುಡಿವನುಡಿ ಹುಚ್ಚೆಂದು ಕಂಡಿರಲು ಆ ಹುಚ್ಚ
ಸಿದ್ಧಾಂತಪಡಿಸುವರೆ ಅಷ್ಟೆಲ್ಲ ಕಷ್ಟವನು
ಕೈಗೊಂಬನಾವ? ಅಲ್ಲಿಗೆ ಮಾತು ನಿಂತಿತು.

ಆದರೆಯೂ ರಾಜನನು ಕುರಿತ ಕತೆ, ಬಾಯಿಂದ
ಬಾಯಿ, ಬಾಯಿಂದ ಬಾಯನು ಸಾರಿ ಮರುದಿವಸ
ಅರಮನೆಯ ಜನವ ಮುಟ್ಟಿತು. ರಾಣಿಯರು ದೊರೆ
ಜೇಡನನು ಕರೆಸಿದರು. ವಿವರವನು ಕೇಳಿದರು.
ಅವನು ತಾ ಕಂಡ ವಿವರವನಿಂತು ಅರುಹಿದನು.
ಇವನು ಜಿಂಕೆಯನರಸಿ ನಡೆಯುತಿರೆ ತಿಳಿನೀರ
ಹೊಳೆಯ ತೀರದ ಚೆಲುವ ವನದಲಿಹ ಕುಟಿಯೊಂದ
ಕಂಡನಪ್ಪುದು. ಅದರ ಎದುರು ಹಿರಿಯುವನೊಬ್ಬ
ಮಗುವೊಂದ ಎತ್ತಿ ನಿಂತಿಹನು. ಕಾಡವನಲ್ಲ.
ನಾಗರಿಕ ಮೂರ್ತಿ. ನೋಡಲು ರಾಮುನೃಪನಂತೆ
ಕಂಡನಪ್ಪುದು. ಇವನು ನಂಬನು. ಅದೇಕ್ಷಣ
ಆತ ಪ್ರೀಯಾ ಎಂದು ಕೂಗಿದನು. ಇವನಿಗೆ
ದನಿಕೂಡ ನೃಪನದೆನ್ನಿಸಿತು. ಅಚ್ಚರಿಗೊಂಡು
ಇದರ ಪರಿಯನು ತಿಳಿಯಬೇಕೆಂದು ಇವನಲ್ಲಿ
ಮರದ ಮರೆಯಲಿ ನಿಂತನಹುದು. ಕುಟಿಯೊಳಗಿಂದ
ಚೆಲುವೆಣ್ಣು ತರುಣಿಯೊಬ್ಬಳು ಬಂದು, ಏನೊಡೆಯ,
ಎಂದು ಕೇಳಿದವಳು. ಎಳೆಯನ ಜೊತೆಗೆ ನಿಂತಿದ್ದ
ಹಿರಿಯನಾತ, ಚಿಣ್ಣನನು ನೋಡಿಕೊ ನಾ ಇನಿಸು
ಹಣ್ಣು ತಿರಿಯಲು ಹೋಗುವೆನು, ಎಂದು ಹೇಳಿದನು.
ಬಾಲನನು ಅವಳ ಕೈಗಿತ್ತು ತಾ ಒಂದತ್ತ
ನಡೆದು ಹೋದನು. ರೂಪು, ನುಡಿವ ತರ, ನಡೆವ ತರ,
ಎಲ್ಲವೂ ರಾಮುನೃಪನದು. ಕುಟಿಯ ಬಳಿಗೈದಿ
ಇವನು ಆ ಚೆಲುವೆಯನು, ಅವ್ವ ಈ ಹಿರಿಯುವರು
ಯಾರು, ಎಂದನು. ನನ್ನ ಕೈಹಿಡಿದ ಒಡೆಯರು

ಎಂದೊರೆದಳವಳು. ಹುಟ್ಟಿಂದ ನಿಮ್ಮವರೇನು
ಎನೆ ಇವನು, ತರುಣಿ, ಉಂಟೇ ವಾರಣಾಸಿಯಲಿ
ರಾಜರಾಗಿದ್ದವರು, ತಪಕೆಂದು ವನಕೈದಿ
ಇಲ್ಲಿ ನಿಂತರು, ವೈಗೆ ಒಂದು ರೀತಿಯು ಕಜ್ಜಿ
ಎಂತೊ ಬರೆ ತೊಳಲುತಿದ್ದರು, ಆಗ ಒಂದು ದಿನ
ನಾನು ಇವರನು ಕಂಡು ಒಂದು ಸೊಪ್ಪನು ಅರೆದು
ಮೈಗೆ ಹಚ್ಚಿದೆನು, ಅದು ವಾಸಿಯಾಯಿತು, ನನ್ನ
ಸೇವೆಯನು ಮೆಚ್ಚಿ ಒಡೆಯರು ನನ್ನ ದಣಿಯಾಗಿ
ಕೈಯ ಹಿಡಿದರು, ಎಂದು ಹೇಳಿದಳು. ದೊರೆಯು ಮಗ
ಚೆಂದವಾಗಿದ್ದಾರೆ ಎನಲಿವನು, ಆ ತಾಯಿ,
ಹೆಮ್ಮೆ ಸಂತಸದ ನಗೆಯಿಂದ, ಅಹುದೆಂಬಂತೆ
ಸಮ್ಮತಿಯ ತೋರಿದಳು. ಇನಿತು ವಿವರವ ಕೇಳಿ
ಸಂದೇಹವೇನುಳಿಯಬಹುದು? ಆದರು ರಾಜ,
ಮುಖ್ಯಮಂತ್ರಿ ಕಹೋಳನನು ಕರೆಸಿ, ಸಂಗತಿಯ
ವಿವರದಲಿ ತಿಳಿಸಿ, ಯಾವನೆ ಒಬ್ಬ ಗೂಢಚರ
ಕಾನನಕೆ ಹೋಗಿ ಈ ವಿವರವೆಲ್ಲವ ತಾನೆ
ಕಣ್ಣಿಂದ ಕಂಡುಬರುವಂತೆಸೆಗಬೇಕೆಂದು
ಬೇಡಿದನು. ಮಂತ್ರಿ, ಈ ಮಾತು ನಿಜವೇ ಇರಲಿ
ಅಲ್ಲದೆಯೆ ಇರಲಿ ಪರಿಕಿಸಲೇಕೆ, ಪಿತೃದೇವ
ಅವರಿಚ್ಛೆ ಎಂತು ಅಂತಿರಲಿ, ಇರುವೆಡೆ ಇರಲಿ,
ಇದು ನನ್ನ ಮನದೆಣಿಕೆ, ಬಿನ್ನವಿಸದಿರಲಾರೆ,
ಎಂದು ನುಡಿದನು. ರಾಜ, ಪಿತೃದೇವರಿಗೆ ಅದೇ
ಇಷ್ಟವೆನ್ನುವುದು ಕಂಡರೆ ಅಂತೆ ಆಗಲಿ,
ಆ ಮುನ್ನ ಅವರು ರಾಜ್ಯಕೆ ಮತ್ತೆ ಬರುವರೇ

ಎಂಬುದನು ನಾವು ಕೇಳಲೆ ಬೇಕು, ಎಂದನು.
ಮಂತ್ರಿ ಮನದಲಿ ಏನು ಯೋಚಿಸಿದನೋ. ಒಂದು
ಕ್ಷಣ ಸುಮ್ಮನಿದ್ದು ಅಪ್ಪಣೆ ಜನವ ಕಳುಹುವೆ
ಎಂದು ನುಡಿದನು.

ನಾಲ್ಕು ದಿನ ಕಳೆಯೆ ಗೂಢಚರ
ಕಾನನಕೆ ಸಾರಿ ರಾಮುನೃಪಾಲನನು ಕಂಡು
ಹಿಂದಿರುಗಿ ಬಂದು ಆವರೇ ಅಹುದು ಎಂಬುದನು
ಬಿನ್ನಯಿಸಿದನು: ಮಂತ್ರಿ ಇದ ದೊರೆಗೆ ಅರುಹಿದನು.
ದೊರೆ ಒಡನೆ, ನಾಳೆ ನಾನೇ ರಾಜರನು ಕಾಣ
ಹೊರಡುವೆನು, ಜೊತೆಗೆ ಬರಲಿಚ್ಛೆ ಉಳ್ಳವರಾದ
ಕೆಲಮಂದಿ ಬರಬಹುದು, ತಂದೆ ರಾಜ್ಯಕೆ ಮರಳಿ
ಬಹರೆಂದು ನನಗೆ ತೋರುತಿದೆ, ಬರುವುದೆ ನಿಜವೆ
ನಾನವರ ಕರೆದು ತರುವೆನು. ಅವರದಾಗಿರುವ
ಸಿಂಹಪೀಠವನು ಅವರಿಗೆ ಬಿಟ್ಟುಕೊಡುವೆನು,
ಎಂದು ನುಡಿದನು. ಮಂತ್ರಿ ಅಪ್ಪಣೆಯ ತಲೆಗಿಟ್ಟು,
ಒಡೆಯರಾಣತಿಯಂತೆ, ಎಂದು ತಲೆಬಾಗಿದನು.

ಸುದ್ದಿ ಹರಡಿತು. ಕುವರನಿಚ್ಛೆಯನು ತಿಳಿದುದೇ
ತಾಯದಿರು ತಾವು ಜೊತೆಯಲಿ ಬಂದು ರಾಜನನು
ಕರೆಯಲೆಳಸಿದರು. ಮಂತ್ರಿಗಳದೂ ಇದೆ ಆಸೆ.
ಊರಜನವೇ ಜೊತೆಗೆ ಬರಲು ಬಯಸಿತು. ರಾಜ,
ಇನಿತು ಜನಬೇಡ, ಗುಂಪನು ನೋಡಿಯೇ ತಂದೆ
ಬೇಸರಿಸಬಹುದು, ತಾಯದಿರು, ಮಂತ್ರಿ ಕಹೋಳ,
ತಂದೆಯಾಪ್ತಾಮಾತ್ಯದೇವಲರು, ಜನರಪರ

ಹತ್ತು ಜನ ಶ್ರೇಣಿಮುಖ್ಯರು, ಒಂದು ದಳ ಸೇನೆ,
ಇನಿಬರೇ ಸಾಕು ಎಂದನು. ಇನಿತು ಜನ ಹೊರಟು
ರಾಜನಿರುವೆಡೆಗೆ ಸಾರಿದರು.

ಆಶ್ರಮ ಇನ್ನು
ಇನಿಸು ದೂರದೊಳಿರುವ ವೇಳೆ ಆಪ್ತಾಮಾತ್ಯ
ದೇವಲ, ಕಹೋಳನನು ಕುರಿತು, ಇಂತೆಲ್ಲರೂ
ಒಮ್ಮೆಯೇ ಬಳಿಗೆ ಸಾರದೆ ನಮ್ಮ ಯಾರೊಬ್ಬ
ಮೊದಲು ದೊರೆಗಳ ಸನ್ನಿಧಿಯ ಸೇರಿ ಅವರ ಮನ
ಎಂತಿಹುದು ತಿಳಿದು ಆ ಬಳಿಕ ಉಳಿದವರೆಲ್ಲ
ಕಾಣಬರುವುದು ಒಳಿತು ಅಲ್ಲವೇ, ಎಂದನು.
ದೊರೆ ಕಹೋಳರ ಮನಕೆ ಈ ಸಲಹೆ ಒಪ್ಪಿರಲು
ಅವರು ದೇವಲನನ್ನೇ ಮೊದಲು ಕಾಣಿಸಿಕೊಳಲು
ಮುಂದೆ ಕಳುಹಿದರು. ಒಡೆಯನ ಮತ್ತೆ ಕಾಣುವೆನೆ
ಎಂಬ ಸಂತಸ, ಕಾಣುತಿಹ ಸನ್ನಿವೇಶ ಇದು
ಎಂತಹ ವಿಚಿತ್ರ ಎನ್ನುವ ಬೆರಗು, ಮಧ್ಯದಲಿ
ಹತ್ತು ಕವಲಾಗಿ ಹರಿದಿರೆ ಮನಸು, ಈ ಮಂತ್ರಿ
ಆಶ್ರಮದ ಕುಟಿಯ ಹತ್ತಿರಕೆ ಬಂದನು. ಎಂತು
ಕರೆಯುವುದು, ಏನಗೆಯ್ವುದು, ಎಂದು ಆರಯಿಸೆ
ಅವಕಾಶವಿಲ್ಲದಂದಕೆ ಒಂದು ಬದಿಯಿಂದ
ಯಾರೊ ಇವನನು ನುಡಿಸಿದರು. ಅತ್ತ ತಿರುಗಿದನೆ
ಎದುರಿನಲಿ ರಾಮನೃಪ. ಏನೆಂದು ನುಡಿಸುವುದು
ಏನತಿಳಿಸುವುದು ಎಂದಾರಯಿಸಲವಕಾಶ
ಇಲ್ಲದಂದಕೆ ಆತ ಮಂತ್ರಿಯನು ನುಡಿಸಿದನು.
"ಹತ್ತು ದಿವಸದ ಹಿಂದೆ ಇಲ್ಲಿ ಬಂದವರಾರೊ

ಪ್ರೀಯೆಯುನು, ನಾನು ಯಾರೆಂದು ಕೇಳಿದರಂತೆ.
ಅಂದೆ ನಾನೆಂದುಕೊಂಡೆನು, ಇನಿತರಲೆ ನೀವು
ಯಾರೊ ಒಬ್ಬರು ಇತ್ತ ಬಂದೆ ಬರುವಿರಿ ಎಂದು.
ಆಪ್ತರಾದವರೆ ಬಂದಿರಿ. ತುಂಬ ಸಂತೋಷ.''
ಇಂತೆಂದು ರಾಜ ಪ್ರೀಯಾ ಎಂದು ಕರೆಕೊಟ್ಟು
ಮಂತ್ರಿಯನು ಕುರಿತು, ''ಈ ಸ್ಥಲಚೆನ್ನವಾಗಿಹುದು
ಅಲ್ಲ?'' ಎಂದನು. ಇವನು ಮಾರ್ನುಡಿವ ಮುನ್ನವೇ
ಕುಟಿಯಿಂದ ಹೊರಗೆ ಮಗುವನು ಎತ್ತಿಕೊಂಡವನ
ಚೆಲುವೆ ಬಂದವಳು, ಕರೆದಿರ ಒಡೆಯ, ಎಂದಳು.
ದೊರೆ, ನೋಡು ಅಂದು ನಿನ್ನನು ನಾನು ಯಾರೆಂದು
ಕೇಳಿದರೆ, ಅವರ ಕಡೆಯಿಂದ ಜನ ಬಂದಿಹರು,
ಎಂದು ಹೇಳಿದನು. ಹೆಣ್ಣಿನ ಮುಖದ ಬಣ್ಣವೇ
ಬೇರೆಯಾಯಿತು. ಅವಳು ಮಗುವನೆಳೆದೆದೆಗಪ್ಪಿ
ಇವರೆಡೆಗೆ ಓಡಿಬಂದಳು; ಕಂದನನು ದೊರೆಯ
ಕಾಲಬಳಿ ಇಟ್ಟು, ಈ ಮಗುವ ಕೈಬಿಡಬೇಡಿ,
ನಾನು ಏನಾದರೂ ಆದೇನು, ಏನಿಲ್ಲ
ನೀರಸೇರಿದರೆ ಆಯಿತು, ಚಿಣ್ಣಗೇನು ಗತಿ,
ಎಂದು ಕಾಲೆಡೆಗೆ ಬಿದ್ದಳು. ರಾಮನೃಪ ನಗುತ
ದೇವಲನ ಕಡೆ ಒಮ್ಮೆ ನೋಡಿ ಅವಳನು ಹಿಡಿದು
ಎತ್ತಿ ನಿಲಿಸಿದನು; ಕಂದನ ಎತ್ತಿಕೊಂಡನು;
ಅವಳ ಕುರುಳನು ನೇವರಿಸುತ ಇಂತೆಂದನು:
''ಏಕೆ ನಿನಗದರ ಅಂಜಿಕೆ. ಮುನ್ನ ಕಂಡವರು
ಬಂದು ನೋಡಿದರು. ಆಯಿತು ಏನು? ನಾ ನಿನ್ನ
ಬಿಡುವ ಮಾತಿದರೊಳೇನುಂಟು? ಸುಮ್ಮನೆ ನೀನೆ

ಭಯಪಟ್ಟುಕೊಳುತಿರುವೆ.'' ಒಡೆಯನೀ ನುಡಿಯಿಂದ
ಹೆಣ್ಣಮೊಗವನು ಕವಿದ ಮುಗಿಲು ಮರೆಯಿತು. ಚೆಲುವೆ
ಕಣ್ಣತೇವದಲಿ ನೋಟದ ಹೊಳಪು ಹೊಸತೆನಿಸೆ
ಕಂದನನು ಎತ್ತಿ ಮುದ್ದಿಸಿ ದೊರೆಗೆ ನೀಡಿದಳು.
ಮುದ್ದಿಸಲು ಅವನು ಬಾಗಿದನೆ ತನ್ನಯ ತಲೆಯ
ಅವನ ಭುಜದೆಡೆಗೆ ಸೋಕಿಸಿ ಒಲವ ತೋರಿದಳು.
ಪೂರ್ವದರಸನ ಕಾನನ ಪ್ರಣಯದೀ ದೃಶ್ಯ
ಮುಗಿದನಂತರ ದೇವಲನು ಆತನನು ಕುರಿತು,
ರಾಣಿಯರು, ಕುವರಾರ, ಮಂತ್ರಿ, ಶ್ರೇಣೀಮುಖರು,
ಉಳಿದ ಜನ, ಬಂದಿರುವ ಸಂಗತಿಯ ಬಿನ್ನವಿಸಿ
ಅವರು ಬಳಿಸಾರಲಪ್ಪಣೆಯ ಬೇಡಿದನು. ದೊರೆ,
“ನಾನೀಗ ಒಬ್ಬ ವನಚಾರಿ, ನನ್ನೆಡೆ ಬರಲು
ಅದು ಯಾರೆ ಆಗಲಿ, ಅಪ್ಪಣೆಯ ಬೇಡುವುದು
ಅವರು ಬೇಡಿದ ಅಪ್ಪಣೆಯ ನಾನು ನೀಡುವುದು,
ಈ ಎಲ್ಲ ರಾಜಾಲಯೋಚಿತ ವ್ಯವಹಾರ
ಯಾವುದೂ ಬೇಡ. ಬೇಕೆಂದವರು ಬರಬಹುದು.
ಯಾರಿಗೂ ಸ್ವಾಗತವೆ,'' ಎಂದು ನುಡಿದನು. ಮಂತ್ರಿ
ಸಂತೋಷ ಎಂದು ಹಿಂದಿರುಗಿ ಕಾದಿಹ ಜನಕೆ
ಇದ ಅರುಹಿದನು. ಎಲ್ಲರೂ ಸಾರಿ ಬಂದರು.
ಬಂದು ಅಂದಿನ ತಮ್ಮ ರಾಜನನು ಕಂಡರು.

ಬಂದು ಕಾಲನು ಸೋಕಲೆಂದು ಬಾಗಿದ ಮಗನ
ರಾಮನೃಪ ನೆಗಹಿ ಮೇಲೆತ್ತಿ ಎದೆಗಪ್ಪಿದನು.
ಏಕೆ ಇನಿಸೊಂದು ತೊಂದರೆ, ಇನಿತು ಜನವೇನು,

ಎಂದು ಮರ್ಯಾದೆಯನು ನುಡಿದು, ರಾಣಿಯರ ಕಡೆ
ನೋಡಿದನು. ಅವರು ಬಳಿಸಾರಿ ಕಾಲಿಗೆ ಬಾಗಿ
ಮತ್ತೆನಿಲೆ, ಹೆರವರಿಗೆ ಎಂತಂತೆ ಮುಗಿದಿರುವ
ಕೈಯಿಂದ, ಎಲ್ಲರೂ ಕ್ಷೇಮವೆ, ಎಂದೊರೆದು,
ಮುಖ್ಯಮಂತ್ರಿ ಕಹೋಳನನು ಕುರಿತು ನಗೆಯಿಂದ
ಕುಶಲವನು ಕೇಳಿ, ಶ್ರೇಣೀಮುಖ್ಯರನು ನೋಡಿ,
ಆರೋಗ್ಯವೇ ಎಂದು ಬೆಸಗೊಂಡು, ಎಲ್ಲರೂ
ನಮಿಸಿ ಉಚಿತದಲಿ ನುಡಿದಿರೆ, "ಎಲ್ಲ ಬಂದಿಹಿರಿ,
ನನಗೆ ಇದು ತುಂಬ ಸಂತಸ; ಆದರ ಮಧ್ಯದಲಿ
ಅದು ಎನಸೊ ಚಿಂತೆ ಒಂದಿದೆ. ನಮ್ಮ ಗುಡಿಸಿಲಲಿ
ರಾಜರಾಣಿಯರು ಮಂತ್ರಿಗಳು ಇಂತಹ ಜನವ
ಕರೆದು ಕುಳ್ಳಿರಿಸಿ ಸತ್ಕರಿಸುವರೆ ಅನುವಿಲ್ಲ.
ಇಲ್ಲೆ ಮರದಡಿ ಹುಲ್ಲಮೇಲೆ ಕುಳ್ಳಿರಬಹುದೆ
ಅರೆಗಳಿಗೆ ಮಾತಾಡಲಹುದು," ಎಂದನು. ಎಲ್ಲ
ಅಲ್ಲೆ ಕುಳಿತರು. ರಾಮನೃಪ ಕುಟಿಯ ಒಳಹೊಕ್ಕು
ಕಾಡಹಣ್ಣುಗಳೊಂದು ಹೆಡಿಗೆಯನು ತಂದನು.
ಅವನು ಹೇಳಿರಬೇಕು, ಅವನ ಹಿಂದೆಯೆ ಪ್ರೀಯೆ
ಮಡಕೆಯಲಿ ನೀರ ತಂದಳು. ರಾಮನೃಪ ಅದನು
ಎಲ್ಲರಿಗು ನೀಡ ಹೊರಟನು. ಮಂತ್ರಿ ದೇವಲ
ತಾನು ಆ ಸೇವೆ ಮಾಡುವೆನೆನಲು, ಛೇ ಉಂಟೆ,
ಅರಮನೆಯ ಗೃಹಮೇಧ ಅಲ್ಲ ಇದು, ವನಚಾರಿ
ನಾನು ಯಜಮಾನ, ನೀವತಿಥಿಗಳು, ಕುಳ್ಳಿರಿ,
ಎಂದು ಅವನನು ತಡೆದು ತಾನೆ ಎಲ್ಲರ ಸಾರಿ
ಪರಿಚರಿಸಿದನು. ಇನಿತರಿಂದಲೇ ಹೊಸರಾಜ,

ಈ ರಾಮನನು ತಾನು ಕರೆಯಬಂದುದು ಅಂದು
ಆ ರಾಮನನು ಭರತ ಕರೆಯ ಹೋದಂತೆಯೇ
ಆಯಿತೆಂದರಿತುಕೊಂಡನು. ತಂವೆ ಪ್ರೀತಿಯಲಿ
ತಂದು ನೀಡಿದ ಹಣ್ಣು ಮೆಲುವಂತೆ ತೋರುತ್ತ
ಇಂತು ನುಡಿದನು: "ಒಡೆಯರಿಲ್ಲಿ ವನಚರರಾಗಿ
ಗೃಹಮೇಧ ನಡೆಸುತಿರುವರು ಎಂಬ ಸಂಗತಿಯ
ತಿಳಿದು ತಾಯದಿರು ಮಂತ್ರಿಗಳು ನಗರಶ್ರೇಷ್ಠಿ
ಮುಖರು ಅಂತೆಯೆ ತಾನು ಸನ್ನಿಧಿಗೆ ಬಂದಿಹೆವು.
ಅಂದು ಅರಸರು ವನವ ಕುರಿತು ಹೊರವಂಟಂದು
ತಾನು ಬಿನ್ನವಿಸಿದುದು ದೊರೆಗೆ ನೆನವಿರಬೇಕು.
ಅವರು ಬೆಸಸಿದರೆಂದು ತಾನು ಪೀಠದಿ ಕುಳಿತು
ರಾಜನಾಗಿಹನು. ಎಂದವರು ಮನವಮಾಡಿದರೆ
ಅಂದು ಹಿಂದಿರುಗಿ ಬರಬಹುದು. ಕಾದಿದೆ ಗಾದಿ.
ತಪಸ ಮಾಡುವುದಾಗೆ ವನವೊಳಿರುವುದು ಸಹಜ.
ಬಾಳ ನಡಸುವ ಇಚ್ಛೆ ಇರಲು ವನದಲಿ ಏಕೆ?
ಅರಮನೆಗೆ ಬಂದು ನಡೆಸಲಿ. ಇದನು ಎಲ್ಲರೂ
ಬೇಡಿಕೊಂಬೆವು." ರಾಮನೃಪ ಮಗನ ನುಡಿಕೇಳಿ
ಸಂತಸದ ನಗೆಯ ಮೊಗದಲಿ ಇಂತು ನುಡಿದನು.
"ವನಕೆ ಬಂದವನು ಸಂಸಾರದಲಿ ನಿಂದಿಹುದ
ತಿಳಿದು ಇವರೆಲ್ಲ ತನ್ನನು ಕರೆಯ ಬಂದಿಹುದು
ಸಹಜ. ಗಾದಿಯಲಿ ಕುಳಿತಿರುವ ಮಗ ಅದನುಳಿದು
ಮತ್ತೆ ತಂದೆಗೆ ಕೊಡುವೆನೆನುವುದು ಉದಾತ್ತ. ಈ
ಮಗನ ಪಡೆದಾಕೆ ಸುಪ್ರಜೆಯೆ ಸರಿ. ದೊರೆತನದ
ಬೆಲೆಯೆನಿತು ಎಂದು ಇಪ್ಪತ್ತು ವರ್ಷದಿ ತಾನು

ಪಡೆದ ಅರಿವನು ತನ್ನ ಮಗ ಇಂತ ಎಳವೆಯಲಿ
ಪಡೆದನೆಂಬುದು ತುಂಬ ಸಂತೋಷ. ತಾನಂದು
ದೊರೆತನವ ಬಿಟ್ಟು ಬಂದವನು ಪದವಿಯ ಮರಳಿ
ಬಯಸಿದನೆ ಮರಳಿ ನಗರಕೆ ತಾನೆ ಬರುವವನು.
ನಿಜಕೆ ಅವನಿಗೆ ಈಗ ನಗರನಾಡರಮನೆಯ
ಬಾಳ್ವೆಯಲಿ ಬಯಕೆಯೆಂಬುದೆ ಇಲ್ಲ. ಪೂರ್ವದಲಿ
ರಾಜರಾದವರು ವಾನಪ್ರಸ್ಥ ಧರ್ಮದಲಿ
ನಗರ ಅರಮನೆಯ ತೊರೆದೆಂತು ಹೊರಟರು ಅಂತೆ
ತಾನಾದರೂ ಅವ ಅಲಂಬುದ್ಧಿಯಿಂದಲೇ
ಉಳಿದು ಬಂದನು. ಇಲ್ಲಿ ಬೇರೆ ರೀತಿಯ ಬಾಳು
ರುಚಿಸಿತೆನೆ ಅರಮನೆಯ ಬಾಳು ರುಚಿಸುವುದೆಂದು
ತಿಳಿಯಲಾಗದು. ಪೂರ್ವಿಕರು ಒಂದು ರೀತಿಯಲಿ
ವನದಿ ಬಾಳಿದರು; ತನ್ನದೆ ಒಂದು ರೀತಿಯಲಿ
ತಾನಾದರೂ ಬಾಳುತಿಹನು. ತನ್ನ ಕುಮಾರ
ರಾಣಿಯರು ಮಂತ್ರಿಗಳು ಜನಪದ ಪ್ರಮುಖರು
ತನ್ನ ಇಲ್ಲಿರಲು ಬಿಡಬೇಕು. ವರ್ಷದೊಳೊಮ್ಮೆ
ಒರ್ವರೊರ್ವರ ನೋಡುವಾಸೆ ಮನದಲಿ ಮೂಡೆ
ಎಂದೆ ಸರಿ ಬರಬಹುದು; ಒಂದು ದಿನ ಜೊತೆಗಿದ್ದು
ಹಿಂದಿರುಗಬಹುದು. ಎಲ್ಲರ ಸೌಖ್ಯವನು ತಿಳಿಯೆ
ತನಗಾದರೂ ಆಸೆಯುಂಟು. ಇನಿತಕೆ ಮಿಕ್ಕ
ಸಂಬಂಧವನ್ ಇವರು ಬಯಸಬಾರದು, ತಾನು
ಬಯಸಲಾರನು.''

ರಾಮುನೃಪ ಇಂತು ನುಡಿಯುತಿರೆ
ಪ್ರೀಯೆ ಮನೆಗೆಲಸವನು ಮುಗಿಸಿ ಮಗುವಿನ ಜೊತೆಗೆ

ಕುಟಿಯಿಂದ ಹೊರಗೆ ಬಂದಳು. ಬಂದು ಹಗುರದಲಿ
ಅವನ ಪಕ್ಕದಲಿ ಕುಳಿತಳು. ಕಂದನನು ಅವನ
ಅಂಕದಲಿ ಇರಿಸಿದಳು. ಇದು ಎಲ್ಲವನು ಅವನು
ಸಂಕೋಚದೊಂದು ಲವಲೇಶ ಇಲ್ಲದ ರೀತಿ
ಸ್ನೇಹದಲಿ ತಾಳಿದನು. ಬಂದಿದ್ದ ಯಾರೆ ಸರಿ
ಇದ ನೋಡಿ ಅಳುಕದಿದ್ದವರಿಲ್ಲ. ತುಸುಹೊತ್ತು
ಅವರೊಳಾರೂ ನುಡಿಯಲಿಲ್ಲ. ಕೊನೆಗೆ ಕಹೋಳ
"ಒಡೆಯರೀರೀತಿ ಬೆಸಸಿದುದು ಅರಗುವರರಿಗೆ,
ತಾಯಿದಿರು ಹಿರಿಯರಸಿ ಕಿರಿಯರಸಿ ಈರ್ವರಿಗೆ,
ತನಗೆ, ಅಂತೆಯೆ ಜೊತೆಗೆ ಬಂದಿದ್ದ ಎಲ್ಲರಿಗೆ,
ಮನದಾಳದಾಸೆಯನು ಮುರಿದಲ್ಲಗಳೆಯಿತು.
ದೊರೆ ತಮ್ಮ ಬಿನ್ನಹವ ಮತ್ತೆ ಗಮನಿಸಬೇಕು"
ಎಂದು ಬೇಡಿದನು. ರಾಮನೃಪ, "ಒಳ್ಳಿತು, ಮುಂದೆ
ರಾಜಧಾನಿಗೆ ಬಂದು ಮೊದಲಂತೆ ಬಾಳುವುದು
ತನಗೆ ರುಚಿಸುವುದಾಗೆ ತಾನು ಬರಲುಳ್ಳವನು.
ಇದಕೆ ಸಂದೇಹವೇ ಬೇಡ. ಈ ಹೊತ್ತಿನಲಿ
ತನ್ನ ಮನ ಅಂತಿಲ್ಲ. ಆದರಿಂದ ತಾ ಆಗ
ಮತ್ತೆ ಏನನೆ ಹೇಳುವಂತಿಲ್ಲ," ಎಂದನು.

ಇನ್ನು ಮಾಡುವುದೇನು? ಮುಖ್ಯ ಮಂತ್ರಿ ಕಹೋಳ
ಅರಗುವರನನು ಕುರಿತು, ಒಡೆಯರ ಅಭಿಪ್ರಾಯ
ತಿಳಿಯಿತಲ್ಲವೆ, ಇನ್ನು ಹಿಂದಿರುಗಲಪ್ಪಣೆಯೆ,
ಎಂದು ಕೇಳಿದನು. ರಾಜಕುಮಾರ, ತಂದೆಯನು,
ಅವನ ತೊಡೆಯಲಿ ಕುಳಿತ ಮಗು, ಪಕ್ಕದಲಿ ಕುಳಿತ

ವನಚಾರಿ ತರುಣಿಯನು, ಒಂದು ನೋಟದಿ ನೋಡಿ.
ತನ್ನ ಹಡೆದವನು ರಾಜ್ಯವನಾಳ ಬಲ್ಲವನು
ಈ ಅಕಿಂಚನ ಜೀವನವನು ಬಯಸುವನಲ್ಲ,
ಇವನು ರಾಜರವಂಶದಲಿ ಹುಟ್ಟಿಯೂ ಒಬ್ಬ
ಅಲ್ಪ ಜೀವಿಯೆ, ಯಾವುದೋ ಪೂರ್ವಸಂಸ್ಕಾರ
ಇಂತಿವನ ಒಂದು ಉನ್ನತಿಯ ಬಾಳುವೆಯಿಂದ
ಬೇಸರುವ, ಕಾಡಬಾಳ್ವೆಯಲೊಂದು ಸವಿಕಾಂಬ,
ರೀತಿ ಸೆಳೆದಿದೆ, ತನ್ನ ತಾಯ ಹೆಂಡಿರು ಎಂದು
ತನ್ನ ಮಗು ಎಂದವನು ಈ ಹೆಣ್ಣು ಈ ಮಗುವ
ಇಂತು ತನ್ನದು ಎಂಬನೇ ಎಲಎಲಾ, ಎಂದು
ಮನದಿ ಯೋಚಿಸಿ ಹೊರಗೆ ಇಂತು ನುಡಿದನು. "ತಂದೆ
ಏನ ಸರಿ ಎನ್ನುವರು ಅದು ತನಗೆ ವೇದವಿಧಿ;
ತನಗೆ ಸರಿಯೆಂದು ಕಂಡುದ ತಾನು ಬಿನ್ನವಿಸಿ
ಬೇಡಿದನು; ಹಿರಿಯರಾ ಬೇಡಿಕೆಗೆ ಕಿವಿಗೊಟ್ಟು
ತಮಗೆ ಸರಿಯೆಂದುದನು ಬೆಸಸಿಹರು; ತಾನಿನ್ನು
ಒತ್ತಾಯ ಮಾಡಿ ಕಾಡಲು ಎಳಸುವವನಲ್ಲ;
ಅವರು ಆಶೀರ್ವದಿಸಿ ಅಪ್ಪಣೆಯ ನೀಡಿದರೆ
ತಾವೆಲ್ಲ ಹಿಂದಿರುಗುವವರು." ದೊರೆ ಒಳಿತೆಂದು
ಮೃದುಹಾಸದಿಂದ ತಲೆಯನು ಬಾಗಿ ಒಪ್ಪಿದನು;
ಮೆಲ್ಲನೆದ್ದನು. ಎಲ್ಲರೂ ಎದ್ದು ನಿಂದಿರಲು
ಮಗನ ಬಳಿಗೈತಂದು ಅವನ ಒಲವಿಂದಪ್ಪಿ,
ಇಪ್ಪತ್ತುವರ್ಷ ರಾಜ್ಯವನಾಳಿ ಅನುಭವಿಸಿ
ನಾನು ಅದ ಬಿಡಲು ನಿಶ್ಚಯಿಸಿದೆನು, ಚಿಕ್ಕಂದೆ
ಪದವಿಯೊಳುದಾಸೀನನಾಗಿಹುದು ನೀನೆಂಥ

ಸಂಸ್ಕಾರವಂತ ಜೀವನು ಎಂದು ತೋರುತಿದೆ,
ಈ ಅರಿವಿನಲೆ ಬಾಳು ನಡಸು, ನಿನಗೊಳಿತಹುದು,
ಎಂದು ಆಶೀರ್ವದಿಸಿ; ಉಳಿದೆಲ್ಲ ಮುಂದಿಗೂ
ಕೈಯಮುಗಿದನು. ಅವರು ಮರಳಿ ಕೈಮುಗಿದಿರಲು
ಹಿಂದಿರುಗಿ ತನ್ನ ಕುಟಿಯೆಡೆಗೆ ನಡೆದನು. ಪ್ರೀಯೆ
ಕಂದನನು ಎತ್ತಿಕೊಂಡವಳೆ ಒಡೆಯನ ಹಿಂದೆ
ಸಾರಿದಳು.

ಬಂದಿದ್ದ ಮಂದಿ ಹಿಂದಿರುಗಿತು.
ಒಂದೊಂದು ಮನದೊಳೊಂದೊಂದು ಯೋಚನೆ. ಅದರ
ಪರಿಯ ಬಣ್ಣಿಸಲೇಕೆ? ಆಸಿಬರಲಿ ಹಿರಿಯರಸಿ
ತನ್ನೊಳೇ ತುಂಬ ನೊಂದಳು. ದೇವಲನ ಕರೆದು,
ಅರಸರೆಡೆಸಾರಿ ತನ್ನದು ಒಂದು ಬಿನ್ನಪವ
ಅವರಲಿ ನಿವೇದಿಸಿರಿ, ಅವರು ವಾನಪ್ರಸ್ಥ
ಜೀವನವ ನಡಸಬೇಕೆನೆ ಜೊತೆಗೆ ಹಿರಿಯರಸಿ
ತಾನು ನಿಲುವುದು ಒಪ್ಪು, ಎಳೆಯ ಹರೆಯದ ಒಬ್ಬ
ವನ್ಯ ಬಾಲಿಕೆಯು ಜೊತೆಯಲಿ ಇಹುದು ವ್ರತವಲ್ಲ,
ತಾನು ವನದಲಿ ನಿಲಲು ಒಡೆಯರನುಮತಿಸಲಿ,
ಎಂದು ಬೇಡಿದಳು. ದೇವಲ ದೊರೆ ಕಹೋಳರಿಗೆ
ಈ ಮಾತ ತಿಳಿಸಿ, ಅವರಾಗಬಹುದೆನೆ, ಮತ್ತೆ
ರಾಮನೃಪನೆಡೆಗೆ ಸಾರಿದನು; ದೊರೆ ಇದ ಕಂಡು
ಹೊರಗೆ ಬರೆ ತಕ್ಷಂತೆ ಇದನು ಬಿನ್ನವಿಸಿದನು.
ಬಿನ್ನಹದ ಎಲ್ಲ ನುಡಿಯನು ಕೇಳಿ ರಾಮನೃಪ
ತನ್ನ ಮನವನು ಅವನೊಳಿಂತು ತೆರೆದಿರಿಸಿದನು.
"ಕೇಳು, ದೇವಲ, ನಾನು ರಾಜಪದವನು ಬಿಟ್ಟು

ಕಾನನಕೆ ಬರುವಂದು ಬಾಳಿನಲಿ ರುಚಿಕೆಟ್ಟು
ಸಂನ್ಯಾಸಿಯಪ್ಪ ಸಂಕಲ್ಪದಲಿ ಬರಲಿಲ್ಲ.
ಆ ಬಾಳು ಸಾಕು ಎನಿಸಿರೆ ಅದನು ಬಿಡಬೇಕು
ಎಂದಷ್ಟೆ ನನ್ನ ಆಗಣ ಮನಸು. ಒಂದಿರುಳು
ನಾವು ಜೊತೆಯಲಿ ಸುಳಿಯುವಂದು ನಡೆದವು ನಾಲ್ಕು
ಸಂಗತಿಯ ನೀನು ನೆನಪಿಗೆ ತಹುದು ಸಾಧ್ಯವೇ?
ಆ ಮುನ್ನ ಅಂಥ ಸಂಗತಿಯ ಕಂಡಿರಲಿಲ್ಲ
ಎನಲಾರೆ. ಆದರಾದಿನ ಅವನು ಕಂಡುದೇ
ಮನಕದೇತರದೊ ಬೇಸರು ಕವಿದುಕೊಂಡಿತು.
ಆಗ ಬಾಳುತಲಿದ್ದ ಬಾಳು ಸಾಕೆನಿಸಿತು.
ಅರಮನೆಯ ಗಾಯಕಶಿಖಾಮಣಿ ಸ್ವರನಿಧಿ
ಅಂದು ತನ್ನೊಬ್ಬ ಗೆಳೆಯನ ಮನೆಯ ಮದುವೆಯಲಿ
ಹಾಡಿದೊಂದುತ್ಸಾಹದಿಂದ ನನ್ನೆದುರಿನಲಿ
ಅರಮನೆಯ ಮಂಟಪದೊಳೊಂದು ದಿನ ಹಾಡನಲ!
ನಾನು ನೊರೆ; ಕೈತುಂಬ ಹೊನ್ನ ನೀಡುತಲಿದ್ದೆ.
ಇವನ ಗಾನಶ್ರದ್ಧೆಯನು ನನ್ನ ಔದಾರ್ಯ
ಕೊಳ್ಳಲಾರದೆ ಸೋತಿತಹುದು. ಆ ಬಡಪಾಯಿ
ತನಗದೇತಕೊ ಅಲ್ಪಧನವ ನೀಡಿದ ಒಬ್ಬ
ಧನಿಗೆ ಅದು ಎಷ್ಟು ಕೃತಜ್ಞತೆಯ ನುಡಿದನು.
ಅರಸಾಗಿ ನಾನು ಇಂತಹ ಸಹಾಯವನೆನಿತು
ನೀಡಿರಲು ಬೇಡ? ಆದರೆ ಅದನು ಪಡೆದವರು
ಇದಕೆ ನಾಲ್ಮಡಿಮಿಗಿಲ ನೆರವ ಪಡೆದೂ ಅದರ
ನಾಲ್ಕರಲಿ ಒಂದಂಶ ಉಪಕಾರ ಪಡೆಯರು.
ಒಬ್ಬ ಹೆಂಡಿರು ತನ್ನ ಗಂಡ ತನ್ನನು ಬಿಟ್ಟು

ಬೇರೆ ಹೋದನೆ ಎಂದು ಬೇಸರದಿ ದೂರಿದಳು.
ರಾಜನಿಗೆ ಹೆಂಡಿರಿಂತಹ ಮಾತ ನುಡಿವಳೇ?
ದೊರೆಯೊಲವು ಒಲವಲ್ಲ. ಹಣಕೆ ಪದವಿಗೆ ಕೊಂಡ
ಒಡಲುಗಳ ಮಾರಾಟ. ಬೇರೆ ಹೆಂಡಿರ ಬಳಿಗೆ
ಹೋದನೆಂಬುದು ತಪ್ಪೆ? ಹೋಹುದೇ ಸರಿ. ಬೇರೆ
ಹೆಣ್ಣು ಅದು ಯಾರೆ ಆದರು ಸಮನೆ. ದೇವರ,
ರಾಜರಾಣಿಯರ ಈ ಸಂಬಂಧವನು ನೀನು
ಮದುವೆಯೆನ್ನುವೆಯ? ಕೊನೆಯಲಿ ನೋಡು, ಮನೆಯಾಕೆ
ಬೇನೆಪಡುತಿರೆ ಗಂಡನಾದವನು ಹಿರಿಮಗುವ
ಆಡಿಸುತ ಬೇನೆ ತಿಂಬನು. ರಾಣಿ ರಾಜನಿಗೆ
ಹೆಂಡಿರೆನಿತೋ ಅನಿತೆ ರಾಜ ಅವಳಿಗೆ ಗಂಡ.
ಹೆಣ್ಣು ಹಾರಿವ ಮೊಟ್ಟೆ ಇಡುವ ಹೊತ್ತಲಿ ಬೇನೆ
ತಿನ್ನುತಿರೆ ಗಂಡು ಹೆಂಡಿರ ಹತ್ತಿರವೆ ಸುಳಿದು
ಕನಿಕರವ ತೋರುವುದು. ರಾಜ ಇದಗೆಯ್ಯನಲ!
ಅವನುಸಿರ ಪರಿಪಾಕ, ನೋಡು. ಪಾರಿವದುಸಿರ
ಪರಿಪಾಕಕೆಣೆಯಲ್ಲ. ಅರಸು ಬಾಳುವ ಬಾಳು,
ತಿರುಳತುರಿದೆಸೆದು ಕರಟವನುಳಿಸಿಕೊಂಡಂತೆ,
ಒಡಲ ಕಡೆಗಣಿಸಿ ವಸ್ತ್ರವನಪ್ಪಿಕೊಂಡಂತೆ,
ಮರಳ ಬೇಯಿಸಿ ಒಗ್ಗರಣೆ ಹಾಕಿ ತಿಂದಂತೆ,
ಬಾಳ ಸಾರವ ತೊರೆದು ತೋರಿಕೆಯನೇ ಹಿರಿದು
ಮಾಡಿ ಒಣಗಿದ ಮರವೆ ಮರವೆಂಬ ಪರಿಯೆಂದು
ನನಗೆ ಆ ರಾತ್ರಿ ಕಂಡಿತು. ಮೂರುದಿನ ತಡೆದು
ಕೊನೆಗಿನ್ನು ತಡೆಯಲಾಗದೆ ರಾಜ್ಯವನು ಬಿಟ್ಟು
ಹೊರಟ ಬಿಡುವುದು ಎಂದು ನಿಶ್ಚಯಿಸಿಕೊಂಡೆನು.

ಇಲ್ಲಿ ಮತ್ತೇನೆ ಇರಲಿಲ್ಲ. ಬರಿಶೂನ್ಯವೂ
ಅಲ್ಲಿ ಬಾಳಿದ ಬಾಳಿಗಿಂತ ಚೆನ್ನವೆ ಸರಿ.
ಈಗ ನೋಡಿಲ್ಲಿ ನಿಜವಾದ ಬಾಳುವೆಯಿದೆ;
ವೇಷ ತೋರಿಕೆಯ ಕಾಣದ ಹೆಣ್ಣು ಜೊತೆಗಿದೆ;
ಮನದೊಳಿಲ್ಲದ ಕೃತಜ್ಞತೆಯ ನುಡಿಯುವ ಮಂದಿ,
ಉಪಕಾರಕಷ್ಟೆ ಹಾಡುವ ಮಹಾಸ್ವರನಿಧಿ,
ಇಂಥ ಹುಸಿಜನವಿಲ್ಲ. ಆ ಬಾಳುವೆಯ ಬಿಟ್ಟು
ಇಲ್ಲಿಬಂದಿಹ ನಾನು ನಾಟ್ಯರಂಗವ ಬಿಟ್ಟು
ಮನೆಗೆ ಬಂದಿಹ ನಟನ ತೆರನಿಹೆನು. ಅರಸಿತಿಗೆ
ನನ್ನ ವಿಷಯಕೆ ಚಿಂತೆಬೇಡ. ಉಳಿದೆಲ್ಲರಿಗು
ಇದೆ ಮಾತು ಹೊಂದುವುದು. ನಿಮಗೆ ಅದು ರುಚಿಸುತ್ತಿದೆ;
ಆ ಬಾಳ ನೀವು ಬಾಳಿರಿ. ನನಗೆ ರುಚಿಸುವುದು
ಈ ಬಾಳು. ಇದನು ನಾ ಬಾಳುವೆನು. ಎಂದೆಸರಿ
ನಿಮಗೆ ಅದರಲಿ ನನಗೆ ಬಂದ ಬೇಸರು ಬರಲು
ಇತ್ತ ಬನ್ನಿರಿ. ಅಂದು ಇದರ ಸವಿಯರಿಯುವಿರಿ.''
   ದೊರೆಯ ಮಾತನು ಕೇಳಿ ಕೈಮುಗಿದು ಬೀಳ್ಕೊಂಡು
ಮಂತ್ರಿ ಪಾಳೆಯಕೆ ಬಂದನು. ನೃಪರು ಸದ್ಯದಲಿ
ಯಾರೆ ಆಗಲಿ ತಮ್ಮ ಬಳಿಗೆ ಬರುವುದು ಬೇಡ
ಎಂದು ಬೆಸಸಿದರು, ಎಂದನು. ರಾಣಿ, ತನ್ನಿಂದ
ಸೇವೆಯನು ಕೊಂಡು ಸುಖಿಸಿದ ರಾಜ ವನಚಾರಿ
ಇಂತ ಹೆಣ್ಣಲಿ ಸುಖವ ಕಾಣುತಿರುವನು ಎಂತು,
ನೋಡೆ ಗಂಡಿನ ಬುದ್ಧಿಯೇ ಇನಿತು, ಎಂದೆಣಿಸಿ
ಸುಮ್ಮನಾದಳು.

ರಾಮನೃಪನಲ್ಲಿಯೇ ನಿಲಲು
ಇವರೆಲ್ಲ ಮರಳಿ ನಗರಕೆ ಬಂದು ಸೇರಿದರು.

* * *

ರಾಜಣ್ಣ ಕತೆಹೇಳಿ ಮುಗಿಸಿರಲು ರಾಮಣ್ಣ,
"ಈ ಕತೆಯ ಕುರಿತು ನಾನೇ ಟೀಕೆ ಹೇಳುವೆನು.
ಗೆಳೆಯ ರಾಜಣ್ಣನಿಗೆ ಈ ಕತೆಯ ಹೇಳುವರೆ
ಇಷ್ಟವೇ ಇಲ್ಲ. ಇದು ಏನು ಬಹುಕತೆಯೆಂದು
ಹೇಳಬೇಕೋ ಎಂದ. ನಾನು ಇದನೇ ಹೇಳು
ಎಂದು ಹಠಮಾಡಿರಲು ಹೇಳಿಹನು. ಕತೆ ನನಗೆ
ಚೆನ್ನವಾಗಿಹುದು. ನಿಮಗೂ ಚೆನ್ನ ಕಂಡಿರಲಿ
ಎಂದು ಎನ್ನಾಸೆ. ಇನಿತೇ ಟೀಕೆ. ಇದುವರೆಗೆ
ಹದಿಮೂರುಮಂದಿ ಗೆಳೆಯರು ಕತೆಯ ಹೇಳಿಹರು.
ಉಳಿದ ಗೆಳೆಯರಲಿ ಆರುಜನ ಕತೆ ಹೇಳದೆ
ಈ ಊರ ಬಿಡಲಾಗದೆಂದು ನಿಶ್ಚಯಿಸಿಹರು.
ಇನ್ನು ನಾವಿಲ್ಲಿರುವ ಮೂರು ದಿನದಲಿ ದಿನಕೆ
ಎರಡು ಕತೆ ಆಗಬೇಕಾಗಿಹುದು. ಎಲ್ಲಿಕತೆ
ಇದುವರೆಗೆ ಬಂದ ಕತೆಗಳ ಸಮಕೆ ಬೆಳೆವುದಕೆ
ಅವಕಾಶವಿಲ್ಲ. ನಾಳೆಯ ಸಂಜೆ ಕಸ್ತೂರಿ
ಒಂದು ಕತೆಯನು, ಮತ್ತೆ ಪಟ್ಟಾಭಿ ಇನ್ನೊಂದ
ಹೇಳುವರು. ಆವರೆ ಟೀಕಿಸುವರು" ಎಂದನು.
ಮರುದಿವಸ ಕಸ್ತೂರಿ ಒರೆದ ಕತೆ ಮುಂದೆ ಇದೆ.
ಅದನು "ದೇಶಾಚಾರ" ಎಂದಿಲ್ಲಿ ಕರೆದಿದೆ.

# ದೇಶಾಚಾರ

ನಮ್ಮ ಈ ದೇಶವನು ಒಂದುವರೆ ಶತಮಾನ
ಅಧಿರಾಜ ಪದವಿಯಲಿ ಆಳಿರುವ ಬಿಳಿಯಜನ
ಬಹುವೇಳೆ ತಕ್ಕನಿತು ತಿಳಿವಿಂದ ಆಳಿಹರು.
ಕೆಲವೇಳೆ ಒಬ್ಬಿಬ್ಬ ಅವಿವೇಕಿ ಅಲ್ಲಲ್ಲಿ
ಪೆಚ್ಚುಬಿದ್ದಿಹನು. ಇಂಥವರಲ್ಲಿ ಒಬ್ಬಾತ
ಮದರಾಸ್ ಗವರ್ನರೊಬ್ಬನು. ಹೆಸರ ಮರೆತಿಹೆನು.
ಬಿಳಿಯಜನ ಆರ್ಕಾಟ್ ನವಾಬರಿಗೆ ಸಾಹಾಯ್ಯ
ನೀಡುವಂತಾಡಿ ಅವರನು ಹಿಡಿದ ರೀತಿಯನು
ಚರಿತೆಯಲಿ ನಾವು ಓದಿಹೆವು. ಅದು ಮೊದಲಾಗಿ
ಆರ್ಕಾಟ್ ನವಾಬರಿಗೆ ಮದರಾಸ್ ಗವರ್ನರಿಗೆ
ಬಹಳ ನಯ ವಿನಯ ವಿಶ್ವಾಸ ದಾಕ್ಷಿಣ್ಯಗಳ
ವಿನಿಮಯದ ನಡೆ ಬಳಕೆಯಾಗಿ ಬೆಳೆದೆಸೆದಿಹುದು.
ಹೊಸ ಗವರ್ನರ್ ಬಂದ ಕೆಲ ದಿವಸದಲಿ ಅವನ
ಭೇಟಿಯನು ಕೊಳುವುದು ನವಾಬರಲಿ ಮರ್ಯಾದೆ.
ಅಲ್ಲದೆಯೆ ತಮ್ಮ ವಾರ್ಷಿಕ ರಾಜವೇತನವ
ಸ್ವಲ್ಪ ಹೆಚ್ಚಿಸಬೇಕು ಎಂದಿವರು ಬೇಡಿರುವ
ಒಂದು ಬೇಡಿಕೆ ಗವರ್ನರ ಮುಂದೆ ತಂಗಿಹುದು.
ಇಂತು ಮರ್ಯಾದೆ ಅನುನಯ ಬೆರೆತು ಸೆಳೆದಿರಲು
ಅವರು ಮದರಾಸ್‌ಪುರದ ತಮ್ಮ ಅರಮನೆಗೆಂದು
ಹೊರಟು ಬಂದರು. ಬಂದ ದಿನವೆ ಪ್ರಭುವನು ಕಂಡು
ಮರ್ಯಾದೆ ತೋರಿದರು. ಪ್ರಭು ಗವರ್ನರು ಅವರ
ಉಚಿತದಲಿ ಮಾತನಾಡಿಸಿ ಮಾರನೆಯ ದಿವಸ

ಅವರು ತನ್ನಲಿ ಭೋಜನಕೆ ಬರಲು ಸಂತಸ
ಎಂದು ಕರೆದನು. ನವಾಬರು ಒಪ್ಪಿ ಮರುದಿವಸ
ಅಂತೆ ಬಂದರು. ಭೋಜನದವೇಳೆ ಆಮಾತು
ಈಮಾತು ಏಮಾತನೋ ಆಡುತಾಡುತ್ತ
ತನ್ನ ಕೈಯೊಳಗಿದ್ದ ಒಂದು ಉಂಗುರದಮಣಿ
ಬಹು ಅಪೂರ್ವದ ತೆರನದೆಂದು ಅದ ಬೆರಳಿಂದ
ತೆಗೆದು ಪ್ರಭುವಿಗೆ ನೀಡಿದರು. ಅವನು ಅದ ಹಿಡಿದು
ಇಂತಂತು ನೋಡುತಿರೆ, ಅದರ ಚೆಲುವನು ಚೆನ್ನ
ಅರಿಯುವರೆ ಅದನು ಬೆರಳಿನಲಿ ಧರಿಸುವುದೆ ಸರಿ,
ಎಂದು ಅದ ಪ್ರಭು ಗವರ್ನರ ಬೆರಳಿಗಿಕ್ಕಿದರು.
ಊಟ ಮುಗಿಯಿತು. ನವಾಬರು ಮನೆಗೆ ಹೊರಡುವರು.
ಪ್ರಭು ಗವರ್ನರ್ ಉಂಗುರದ ಹದನ ಮರೆತಂತೆ
ಸುಮ್ಮನಿದ್ದನು. ಅದನು ಕೊಡಿ ಎಂದು ಕೇಳುವುದು
ಅನಿತೇನು ಉಚಿತವಲ್ಲದ ಮಾತು. ಕೇಳದಿರೆ
ಅದು ಮರಳಿ ತಮಗೆ ಬರುವುದು ಎಂತು? ವಿಧಿಯಿಲ್ಲ
ಎಂದು ಚಿಂತಿಸಿ ನವಾಬರು ತೀರ ಹೊರಟು ಬಹ
ಕ್ಷಣದಲ್ಲಿ ಎಂತೊ ನೆನೆದಂತೆ, ಆ ಉಂಗುರವ
ಕೊಳ್ಳುವುದ ಮರೆತೆ, ಎಂದರು. ಗವರ್ನರ್ ಪ್ರಭು
ನಗೆಯ ಸೋಗಿನಲಿ, “ಉಂಟೆ? ನೀವು ಅದ ನನಗೆ
ತೊಡಿಸಿದಿರಿ. ಇಂತು ತಮ್ಮನ್ನರೆನ್ನನ್ನರಿಗೆ
ಯಾವುದೇ ಭೂಷಣವ ತೊಡಿಸಿದರೆ ಅದ ನಮಗೆ
ನೀಡಿದಂತೆಯೆ. ಇಂತು ನಮ್ಮ ದೇಶಾಚಾರ,”
ಎಂದು ನುಡಿದನು. ನಗೆಯೊ ನಿಶ್ಚಯವೊ ಆಗಳೇ
ನಿರ್ಧರಿಸಿ ತಿಳಿವ ಸಂಗತಿಯಲ್ಲ. ಮರುದಿವಸ

ಮತ್ತೆ ಕೇಳುವುದೆಂದು ಯೋಚಿಸಿ ನವಾಬರು
ಅರಮನೆಗೆ ಹಿಂತಿರುಗಿದರು. ನಡೆದ ಹದನಿದನು
ತಮ್ಮ ಬೇಗಮಿಗೆ ಅರುಹಿದರು. "ಈ ಜನ ನಮಗೆ
ಕೊಡುತಿರುವ ರಾಜವೇತನವ ಹೆಚ್ಚಿಸಬೇಕು
ಎಂದು ಕೇಳಿಹೆವು. ಅದು ದೊರೆಯಲಿಕೆ ಈ ಪ್ರಭು
ನೆರವಾಗಬೇಕು. ಖಂಡಿತಮಾಡಿ ಉಂಗುರವ
ಕೊಡಲೆ ಬೇಕೆನೆ ವೇತನದ ಹೆಚ್ಚಿಗೆಗೆ ಎಲ್ಲಿ
ಕಲ್ಲುಹಾಕುವನೊ," ಎಂದರು. ಇವರ ನುಡಿಕೇಳಿ
ಬೇಗಂ, "ಇದೆಂತ ಅಂಜಿಕೆ! ಇವನು ಮಾಡಿಹುದು
ಇವನ ಹಿರಿಯರಿಗೆ ತಿಳಿದರೆ ಇವನ ಮರ್ಯಾದೆ
ಉಳಿಯುವುದೆ?" ಎಂದು ಕೇಳಿದರು. "ಈ ಜನಗಳು
ಕಿರಿಯ ಹಿರಿಯರು ಎಲ್ಲ ಒಂದೆ ರೀತಿಯ ಮಂದಿ.
ಹಿರಿಯರಿಗೆ ತಿಳಿಸುವರು ಯಾರು? ತಿಳಿಸಿದೆ, ಇವನು,
ಏನಯ್ಯ ಹಾಸ್ಯವನು ನಿಜವೆಂದೆ ತಿಳಿದಿರಾ
ಎಂದು ನುಸುಳಿದರೆ ಆಗದೆ? ತುಂಬ ಅಲ್ಪ ಜನ.
ಹಣದಾಸೆಯಲಿ ಇವರು ಯಾವುದಕು ಹೇಸರು,"
ಎಂದರು ನವಾಬ. ಬೇಗಂ ಒಂದು ಅರೆಗಳಿಗೆ
ಏನೊ ಯೋಚಿಸುತಿದ್ದು, "ಒಳಿತು, ನಾಳೆಯ ದಿವಸ
ಪ್ರಭುವ ನಮ್ಮರಮನೆಗೆ ಭೋಜನಕೆ ಕರೆಯಿರಿ.
ಅವರ ಸತಿಯೊಡನೆ ಬರುವಂತೆ ಬೇಡಿರಿ. ನಾನು
ಮಧ್ಯಾಹ್ನ ಅವರ ಮುಖತಃ ಕಂಡು ಕರೆಯುವೆನು
ಎಂದು ತಿಳಿಸಿರಿ," ಎಂದು ಹೇಳಿದರು. ಮರುದಿವಸ
ಇಂತೆ ಆಯಿತು. ಗವರ್ನರ್ ರಾತ್ರಿ ಭೋಜನಕೆ
ಅವನ ಸತಿಯೊಡನೆ ಬಂದಿಹನು. ಪರದೆಯ ಮರೆಗೆ

ಬೇಗಂ, ನವಾಬರೂ ಪ್ರಭುಗಳೂ ಆದರಿತ್ತು,
ಭೋಜನಕೆ ಮಂಡಿಸಿದರಹುದು. ಪ್ರಭುವಿನ ಪತ್ನಿ
ಮೊದಲು ಒಳಗಡೆ ಬೇಗಮರ ಜೊತೆಗೆ ತುಸಹೊತ್ತು
ಸಲ್ಲಾಪ ನಡೆಸಿ ಊಟಕೆ ಹೊರಗೆ ಬಂದರು.
ಊಟ ಮುಗಿದಿರೆ ಮತ್ತೆ ಮಾತನಾಡುವ ಎಂದು
ಒಳಗೆ ಹೋದರು. ಎಷ್ಟೊ ಹೊತ್ತಾದರೂ ಆಕೆ
ಮತ್ತೆ ಹೊರಗಡೆಗೆ ಬಾರರು. ಪ್ರಭು ನವಾಬರನು
ತಮ್ಮ ಮನೆಯಾಕೆಯನು ಕರೆಯುವರೆ ಬೇಡಿದನು.
ಅವರು ಆಳನು ಕರೆದು ಇದ ಒಳಗೆ ತಿಳಿಸೆಂದು
ಆಜ್ಞೆಮಾಡಿದರು. ಆಳಾದವನು ಒಳಹೋಗಿ
ಮರಳಿ ಬಂದವನು, ಬೇಗಂಸಾಹೆಬಾ ಅವರ
ಕರೆಯುತಿಹರೆಂದು ನುಡಿದನು. ನವಾಬರು ತಾವೆ
ರಾಣಿವಾಸಕೆ ಹೋಗಿ ಹಿಂತಿರುಗಿ ಬಂದವರು
ಪ್ರಭುಗಳಲಿ ಇಂತು ಬಿನ್ನಯಿಸಿದರು. "ಪ್ರಭುವರರ
ಸತಿ ರಾಣಿವಾಸದಲಿ ಸಲ್ಲಾಪಮಾಡುತ್ತ
ಬೇಗಮರು ಹೊರಗೆ ಬಂದಂದು ಧರಿಸುವ ಬುರುಕಿ
ಎಂತಿರುವುದೆಂದು ನೋಡಲು ಬಯಸಿದರು. ಬೇಗಂ
ಅದನು ಅವರಿಗೆ ನೀಡಿದರು. ಆಕೆ ಬುರುಕಿಯನು
ಇಂತಂತು ನೋಡಿ ಮನಸೋತು ಅದನಳವಟ್ಟು
ಅಲ್ಲಿ ಕುಳಿತಿಹರು. ಬುರುಕಿಯ ಧರಿಸಿ ಈರೀತಿ
ರಾಣಿವಾಸದಲಿ ಕುಳಿತವರು ಮಾಸ್ಲೆಮರಾಗಿ
ಬೇಗಮರ ಸವತಿಯಾದಂತೆ ಸರಿ. ಈ ಹದನ
ತಮ್ಮ ಬೇಗಂಸಾಹೆಬಾ ಪ್ರಭುಗಳೆಡೆಯಲ್ಲಿ
ಬಿನ್ನವಿಸಬೇಕೆಂದು ಬಯಸಿದರು." ಪ್ರಭುವಿಗೆ

ಮುಖಕೆಟ್ಟು ಸ್ವಲ್ಪ ಕಕವಮುಕನಾಯ್ತು. ಕೋಪವೂ
ಬಂದಿತೆನೆ ಸುಳ್ಳಲ್ಲ. ಆದರೂ ಅದತಡೆದು
ಅವನು, ಇದು ಒಂದು ನಗೆಯೆಂಬಂತೆ, "ಸಂತೋಷ,
ಬುರುಕಿಯನು ತೆಗೆದಿಟ್ಟು ಹೊರಗೆ ಬರಬಹುದಲ್ಲ,"
ಎಂದು ನುಡಿದನು. ನವಾಬರು ನಕ್ಕು, "ಅಳವಡಲು
ಅಧಿಕಾರವುಂಟು. ಅದ ತೆಗದಿಡುವ ಅಧಿಕಾರ
ಇಲ್ಲ. ಇದು ನಮ್ಮ ದೇಶಾಚಾರ," ಎಂದರು.
ಪ್ರಭು ನವಾಬರ ಉಂಗುರವನು ಒಂದಕೆಕೊಟ್ಟು
ತಮ್ಮ ಸತಿಯನು ಹೊರಗೆ ಕರೆಸಿಕೊಂಡರು ಎಂದು
ಹೇಳಬೇಕೆ? ಮನೆಗೆ ಬಂದು ಸತಿ ಪ್ರಭುವಿಗೆ
"ಅದು ಎಷ್ಟು ಮಾತು ಅದು? ತಾಸರ್ಧ ಕಳೆದರೂ
ನೀ ನವಾಬರ ಜೊತೆಗೆ ಆಡುತಿದ್ದುದು? ನಾನು
ಹೊರಡುವೆನು ಎನಲು, ಬೇಗಂ, ನವಾಬರ ಜೊತೆಗೆ
ಪ್ರಭು ಏನೊ ಗುಪ್ತ ನುಡಿಯುತಲಿಹರು, ಮುಗಿದೊಡನೆ
ನಮಗೆ ತಿಳಿಸುವರು, ಅದುವರೆಗೆ ಇಲ್ಲಿಯೆ ಇರಲಿ
ಎಂದು ಆಜ್ಞಾಪಿಸಿಹರಂತೆ, ತುಸತಾಳಿರಿ,
ಎಂದು ನನ್ನನು ತಡೆದು ನಿಲ್ಲಿಸಿದರು. ಅದೇನು
ಅಂಥ ಗುಪ್ತದಮಾತು?" ಎಂದು ಕೇಳಿದರು. ಪ್ರಭು,
"ನೀನು ಬುರುಕಿಯನು ಏತಕೆ ಹಾಕಿಕೊಂಡೆ?" ಎನೆ
ಸತಿ, "ಬುರುಕಿ ಹಾಕಿಕೊಂಡೆನೆ, ಇಲ್ಲವಲ್ಲ, ಇದ
ಯಾರು ಹೇಳಿದರು?" ಎಂದರು. ಪ್ರಭು ಗವರ್ನರಿಗೆ,
ಉಂಗುರವ ಕಳುವುದಕೆ ತಾನು ದೇಶಾಚಾರ
ಒಂದ ಕಲ್ಪಿಸಿದಂತೆ ಬೇಗವೊ ನವಾಬರೊ
ಅದು ಮರಳಿ ಬರಲೆಂದು ತಮ್ಮ ದೇಶಾಚಾರ

ಒಂದ ಕಲ್ಪಿಸಿ ಜೊತೆಗೆ ತಮ್ಮ ಸತಿ ಬುರುಕಿಯನು
ಅಳವಟ್ಟ ಕತೆಯು ಕಟ್ಟಿದರೆಂದು ತಿಳಿಯಿತು.

*  *  *

ಕಸ್ತೂರಿ ಕತೆಹೇಳಿ ಮುಗಿಸಿರಲು ಪಟ್ಟಾಭಿ,
"ಈ ಕತೆಯು ಮೇಲೆ ಟೀಕೆಯು ನುಡಿದು ಒಡನೆಯೇ
ನಾನೊಂದು ಕತೆಹೇಳಬೇಕೆಂದು ರಾಮಣ್ಣ
ಏರ್ಪಾಡುಮಾಡಿಹನು. ಕತೆಯಲ್ಲೇ ಆ ಕೊರತೆ
ಇದೆ ಎಂದು ಕಂಡದಕು ಹೆಚ್ಚು ಜಂಭವ ಹೊಡೆದು
ಒಡನೆ ಕತೆ ಒಂದ ಹೇಳುವ ಧೈರ್ಯಯಾರಿಗಿದೆ?
ಯಾರಿಗಾದರು ಇರಲಿ, ನನಗಿಲ್ಲ. ಕಸ್ತೂರಿ
ಸೊಗಸಾದ ಕತೆಯು ಸೊಗಸಾಗಿ ಹೇಳಿಹನು ಸರಿ.
ಇನ್ನು ನಾನೊಂದು ಕತೆ ಮಾಡುವೆನು. ಅದು ಇನಿತು
ಸೊಗಸಲಾರದು. ಆದರೂ ಅವನ ನಾನೆಂತು
ಬೆನ್ನ ತಟ್ಟಿಹೆನು ಅಂತೆಯೆ ನನ್ನನೂ ಅವನು
ಬೆನ್ನತಟ್ಟುವನೆಂದು ನಂಬಿಹೆನು. ತಟ್ಟನೇ,
ಮಾಡಿದುಪಕಾರವನು ಮರೆತವರ ಪುಣ್ಯವನು
ಕಟ್ಟಿಕೊಂಬನು. ಅವನ ಇಷ್ಟಪಂತೆಸಗಲಿ.
ಇನ್ನು ನಾನಿಲ್ಲಿ ಕತೆಮಾಡಲೇ ಬೇಕೆಂದು
ರಾಮಣ್ಣ ಒತ್ತಾಯಮಾಡಿರುವ ಕಾರಣ
ಒಂದವಾಡುವೆನು. ಕುಳಿಕುಳಿತಂತೆ ಕತೆ ಒರೆವ
ಚಾತುರ್ಯ ನನಗಿಲ್ಲ. ಮೊದಲೆ ಬರೆದಿಹ ಒಂದು
ಕೃತಿಯನೋದುವೆನು," ಎಂದನು. ಅವನು ಒಪ್ಪಿಸಿದ
ಪದ್ಯ, ಗುರು ಮುರುಳಸಿದ್ಧರು, ಅವರು ತರಿಸಂದ
ಕರವೀರಪುರದ ಕಾಮಾಕ್ಷಿ ಹೆಸರಿನ ಒಬ್ಬ
ಜೋಗಿನಿ, ಇವರ ಕುರಿತುದು. ಇದಕೊ ಮುಂದೆ ಇದೆ..

# ಸಿದ್ಧರ ಕಿನ್ನರಿ

ಕರವೀರದ ಚೆಲುವಿನ ಕರುನಾಡಿಗೆ
ಮರುಳಸಿದ್ಧ ಗುರು ಬರುತಿಹರು
ಪರಿವಾರಿಸಿ ಬಹ ಜೀವರ ಪಾವನ
ಮಾಡುವಾತುಮುವ ತರುತಿಹರು;
ಬರಗಾಲವ ಕೊನೆಗಾಣಿಸಲೆಳಸಿದ
ನೀರು ಕಾರ ದಿನ ಮುಗಿಲಾಗಿ
ಸಾರಿ ಮುಂಬರಿವ ತೀರು ತಂಪೆದೆಯು
ಸೂಸಿ ಮುಂದುಮುಂದಕೆ ಸಾಗಿ

ತುಂಬು ಚೆಲುವ ಜೋಗಿನಿಯರ
ಸಿದ್ಧಿಯು ಮರುಳತಾಣವೀ ಕರವೀರ
ಮನವ ಮೋಹಿಸುವ ರೂಪಿನ ಪುತ್ಥಲಿಗಳು;
ತನುಲತೆಗಳು ಸುಕುಮಾರ;
ಮಳೆಗಾಲದ ಕಾರ್ಮೋಡವ ಸೀಳುವ
ಮಿಂಚಿನ ಬಳ್ಳಿಗಳನೆ ಹಿಡಿದು
ಕಣ್ಣು ಸೋಲಿಸಲು ಗೆಯ್ದ ಶಲಾಕೆಗಳೆನೆ
ನಿಲುವುವು ಬಳುಕಿ ಸೆಟೆದು.

ಆಸೆ ಬೀತುದೆನ್ನುವ ಜಂಭದ ಸಂನ್ಯಾಸಿ
ಇತ್ತ ಬರದಿರೆ ಲೇಸು:
ಎನಿತೇ ಬೀತರು ಈ ಎಡೆ ಮತ್ತೊ ತಲೆಯಿಡುವುದು
ಬಯಕೆಯ ಮೋಸು.

## ನವರಾತ್ರಿ

ಕೊಂಕುವ ಹುಬ್ಬೋ, ಮಿಂಚುವ ಕಣ್ಣೋ,
ಚೆಂದುಟಿಯಂಚಿನ ನಗುಸರವೋ,
ಗಲ್ಲದ ಸುಳಿಯೋ, ಯಾವುದೊ ತಟ್ಟಿತು:
ಒಳಗಳುಕಿತು, ಮನವೋ ನರವೊ

ಆಶೆಯ ತೋರರು, ಮೋಸವ ಮಾಡರು,
ಮಾಡರು ಏನೂ ವ್ಯಾಪಾರ:
ನಿಲುವ ನಿಲುವಿನಲಿ, ನೋಡುವ ಪರಿಯಲಿ,
ಆ ಬರಿನಗೆಯಲಿ ವ್ಯಾಪಾರ
ಮಳೆಯಾಗಿ ಸುರಿದು ಹೊನಲಾಗಿ ಹರಿದು
ಎದುರಿರುವ ಗಂಡ ಗೆಲ್ಲುವುದು.
ಗಂಡಿಗೆ ಕೊರೆಯೋ ಮಿಗಿಲೋ ಆಯಿತೆ
ಎದುರುಸಿರು ಬೀಳಲಿಲ್ಲಹುದು.

ಉಮಾಮಹೇಶರು ಸಂವಾದಿಸಿ ಗೆಯ್ದರು
ಸಮಯವ ಕೈಲಾಸದಲಿ;
ದೇವಿಯು ಊಳಿಗವೀಯೆಡೆ ವಾಸಿಸಿ,
ಯಾವನೆ ಬಂದರು ಪೇಸದಲಿ,
ತಾವಾಗಿ ಬಯಕೆ ತಾಳದೆ ತೋರದೆ,
ಬಯಕೆ ಕಂಡಿತೇ ಪೂರಯಿಸಿ,
ನೆರವಾಗಬೇಕು ವೈರಾಗ್ಯದ ಜನ
ತಾವೇ ತಮ್ಮನು ಆರಯಿಸೆ.

ಇವರೇ ಜೋಗಿನಿ ಕುಲ. ಈ ಕುಲದಲಿ
ಚೆಲುವಲಿ ಉಳಿದೆಲ್ಲರಮೀಟಿ
ಬಾಳುತಲಿರುವಳು ಅಂದಿನಕಾಲಕೆ
ತಾಯಿ ದೇವಿಯರ ಒರಿಚೇಟಿ
ಕಾಮಾಕ್ಷಿ ಹೆಸರ ಜೋಗಿನಿ. ಕಣ್ಣಲಿ
ಮುಸುಗೂಡಿದ ಮೋಹದ ಸರಸಿ
ನೋಡಬಂದ ನೋಟವನು ಮುತ್ತಿ
ಮುಂಗೆಡಿಸಿ ನುಂಗುವುದು ಆವರಿಸಿ.

ಮರುಳಸಿದ್ಧಗುರು ಬರುತಿಹರೆನೆ
ಕಿರಿ ಜೋಗಿನಿಯರು, ನಮ್ಮನ್ನರಿಗೆ
ಸಾಧ್ಯನಲ್ಲ ಈ ಸಿದ್ಧ, ನಮ್ಮ
ಗುಣ ಸಾಲದಿಂತ ಶತಮೊಂಡರಿಗೆ,
ಕಾಮಾಕ್ಷಿ ಒಬ್ಬಳಿವನಿಗೆ ಸರಿ,
ಕಾಮಾಕ್ಷಿಯೆ ಇವನನು ಪರಿಕಿಸಲಿ,
ಎಂದು ಸುಮ್ಮನೆಯೆ ನಿಂದರು,
ನಂಬಿಕೆ ಕೆಟ್ಟು ತಂತಮ್ಮ ಸರಕಿನಲಿ.

ಮರುಳಸಿದ್ಧ ಗುರುವಿಗೆ ಕರೆಬಂದಿತು :*
ಜೋಗಿನಿವಾಡಕೆ ಬಿಜಗೆಯ್ದು
ಹೆಣ್ಣುಮಕ್ಕಳಿಗೆ ತೋರಬೇಕು, ಅದು
ಎಂಥ ಸಿದ್ಧಿ ಅವ ನಾಲ್ಕೈದು.

## ನವರಾತ್ರಿ

ಆಗಲಿ ಎಂದರು ಮುರುಳಸಿದ್ಧಗುರು ;
ನಡೆತಂದರು ಜೋಗಿನಿ ಮುಟಕೆ:
ನಗೆಯು ಮೂಡಿಸಿತು ಅವರಾ ಮನದಲಿ
ಈ ನುಡಿಗಳ ಹೆಣ್ಣಿನ ಕಟಕಿ.

ಎಷ್ಟು ಮಂದಿಯೋ ಸಿದ್ಧರು ಮೊದಲಲಿ
ಈ ತಾಣಕೆ ಬಂದಿದ್ದವರು:
ಒಬ್ಬರಿಲ್ಲ ಅವರಲಿ ಗೆದ್ದಾತನು,
ಬಂದ ಎಲ್ಲರೂ ಬಿದ್ದವರು.
ಮುರುಳಸಿದ್ಧನೂ ಬೀಳುವನೆಂದೇ
ಬಗೆದಳು ಜೋಗಿನಿ ಕಾಮಾಕ್ಷಿ;.
ಬಾ ಬಾರ ಎಂದು ಚೆಲುವೇ ಕರೆದಿರೆ
ಉಂಟೆ ಕೈಗೆ ಸಾರದ ಪಕ್ಷಿ?

ಕೆನೆವಾಲ ಬಿಳುಪು. ತಾವರೆಯು ಕೆಂಪು,
ಗಜನಿಂಬೆಹಣ್ಣು ಬಣ್ಣಗಳು
ಇನಿತು ಇನಿತು ಸಲಿ ಬೆರೆತು ಕಣ್ಣಿಗಿನಿದಾದ
ಬಣ್ಣಗಳ ಹೆಣ್ಣುಗಳು
ಸುತ್ತಲು ಬಳಸಿರೆ ಮಧ್ಯೆ ಕಾಮಾಕ್ಷಿ
ಸಿದ್ಧನ್ನೈತರವ ಕಾದಿಹಳು.
ತನಗೂ ಸೋಲದ ಸಿದ್ಧನೆ ಎಂಬ
ಅಹಂಕೃತಿ ಭಾವದಿ ಸೇದಿಹಳು.

ನುಡಿಯಲು ಆರದ ಊಹಿಸ ಬಾರದ
ಏನೊ ಬಣ್ಣ ಮಿರುಗುವ ನೆತ್ತಿ;
ಅರುಗನುಳಿದು ಹಣೆಗಿಳಿದು ಸುಳಿವ ಮುಂಗುರುಳು;
ಇನಿಸು ಮೇಲಕೆ ಎತ್ತಿ
ಎಳೆಹರೆಯ ಕೊಂಕ ಗೆರೆಯೊಂದು ಬಿಂಕ
ಮುರಿದಿಲ್ಲಿ ಬಂದುದೆನೆ ಹುಬ್ಬು;
ಇದೆ ಕೊ ಕಾಮಾಕ್ಷಿ ಎಂದೊರೆವ ಅಕ್ಷಿ,
ಬಾ ಸೋಲು ಎನ್ನುತಿಹ ಕೊಬ್ಬು.

ಬಂದರು ಗುರುಗಳು ಜೋಗಿನಿ ವಾಡಕೆ;
ಕಂಡರು ಎಲ್ಲಾ ಹೆಂಗಳನು;
ಕಂಡರು ಶಿವನನು; ಅವನನು ಅಗಲದೆ
ನಿಂದಿಹ ಮಾತೆಯ ಕಂಗಳನ ;
ತನ್ನನು ತನ್ನಂತಹ ಕೋಟ್ಯಂತರ
ಜೀವರಾಶಿಯನು ಪಡೆವುದಕೆ
ಹೆಣ್ಣಾಗಿಹ ಶಿವನೊಡಲರ್ಧಗಳನು
ಕಂಡರು; ಸಂದರು ಶಿವಪದಕೆ.

ಶಿವಪದಕೆ ಸಂದು, ಭವ, ಭಕ್ತಬಂಧು,
ಎಲ್ಲೆಡೆಯು ಕಂಡು ಪೊರೆಯೆಂದು
ಮನಸಿನಲಿ ಸುಂದರೇಶ್ವರನ ಹಿಡಿದು,
ತೋರಿಸಿದ ಪೀಠಕ್ಕೈತಂದು

ಮುಂಡಿಸಿದರಹುದು. ಕಾಮಾಕ್ಷಿ ಅವರ
ಎದುರಿನಲಿ ಕುಳಿತು ಕೈಮುಗಿದು
ಕಣ್ಣಾರ ನೋಡಿ ತಣಿದಳೀತನನು
ಸೋಲಿಸುವೆನು ಎಂದೇ ಬಗೆದು

ಗುರುಗಳು ಪಡೆದಿಹ ಸಿದ್ಧಿಯ ಪರಿಯನು
ಅನುಗ್ರಹಿಸಿ ತೋರಿಸಬೇಕು,
ತೋರಿಸುವೆವು ನಾವೂ ಗುರುಕೃಪೆಯಲಿ
ನಮಗೆ ಸಿದ್ಧಿಸಿಹ ಬರಹೋಕು.
ಎಂದು ನಕ್ಕು ನುಡಿದಳು. ನಕ್ಕರು ಗುರು;
ಆಗಲಿ ಎಂದರು. ಕಾಮಾಕ್ಷಿ,
ಏಕೆ ಮರುಳು? ನಿನ್ನುದರದಿ ನಿಲ್ಲದು,
ಜೀರ್ಣವಾಗದಲೆ, ಈ ಮಕ್ಷಿ.

ಸಾರಿದಳಣಿಮಾಸಿದ್ಧಿಗೆ ಜೋಗಿನಿ;
ಸವೆದು ಸವೆದು ಅವಳಾಗಾತ್ರ
ಕಿರಿಕಿರಿದಾಯಿತು, ಕಾಣದೆ ಹೋಯಿತು,
ಉಳಿಯಿತೇತರದೊ ತನ್ಮಾತ್ರ.
ಗುರುಸಿದ್ಧರಿದನು ನೋಡುತಲಿದ್ದರು;
ಅವಳು ಆಯ್ತಿನ್ನು ಎಂದೆನಲು
ಮಗುವಿನ ಶಕ್ತಿಯ ನೋಡಿದ ತಂದೆಯ
ಮೆಚ್ಚು ಮನದಿ ಹರಿಯಿತು ಹೊನಲು.

ಅವಳಾದಾ ತನ್ಮಾತ್ರದಿ ಶಿವನನು
ಕಾಣುತ, ಓ ಶಿವ ನಾ ನಂದಿ
ಎಂದರು ಸಿದ್ಧರು; ರಕ್ಷಿಸು ಎಂದರು,
ತನ್ಮಾತ್ರಕು ಕಿರಿಮೆಯ ಹೊಂದಿ.
ಎಲ್ಲಿಯು ಶಿವನನು ಕಾಣುವ ಜೀವಕೆ
ತನಗೆ ಕಿರಿದು ಬೇರೆಯದಿಹುದೆ?
ಈ ನಿಲುವ ಹಿಡಿದ ಸಿದ್ಧರ ಸಿದ್ಧಿಯು
ಚದುರ ಜೋಗ ಸೋಲಿಸಬಹುದೆ?

ಅಣಿಮಾ ಪದವನು ತೊರೆದಳು ಜೋಗಿನಿ;
ನಾ ಬ್ರಹ್ಮವೆಂಬ ಜಂಭದಲಿ
ಬೆಳೆದಳು, ಹಿರಿದಾದಳು, ಹಿರಿದಾದಳು,
ಸೆಡೆದಳು ದರ್ಪಸ್ತಂಭದಲಿ;
ಇನ್ನಾಯಿತು ಎಂದಳು. ಸಿದ್ಧರು, ಶಿವ ಶಿವ,
ಶಿವನನು ಮರೆತೆಯೆ ಬೊಮ್ಮ,
ಎಂದರು: ಶಿವನಿಹನೆನ್ನಲಿ; ತೋರಿಸು
ಶಿವನಿಗೆ ಸಮನೆನಿಸುವ ಹಮ್ಮ.

ಹಾಗಿಯಿತು ಮಹಿಮಾ: ಗರಿಮಾ ಲಘಿಮಾ
ಪ್ರಾಪ್ತಿ ಪ್ರಾಕಾಮ್ಯಗಳಿಂತೇ
ಮುಗಿದವು, ಶಿವನನು ನಂಬದ ಜೀವದ
ಹೊರೆ, ನೆರೆ ನಂಬಿದ ನಿಶ್ಚಿಂತೆ,

## ನವರಾತ್ರಿ

ಶಿವನಂಕದಿ ನಲಿಯುವ ಷಣ್ಮುಖಪದ,
ಶಿವನಿಗೆ ತೆತ್ತಿಹ ಸಂಕಲ್ಪ,
ಇವರನುಭವದಲಿ: ಶಿವ ಎಂದಿರೆ
ಈ ಆ ಸಿದ್ಧಿಗಳೇನು ಪ್ರಗಲ್ಭ?

ಈಶಿತ್ವವನಿವರಿಂತೇ ಪ್ರಕಟಿಸಿದರು:
ಶಿವತಾರಕ ಮಂತ್ರವನು
ಜಪಿಸುವ ಮನ ಆಕ್ಷಣ ಅರಿತಿದೆ
ಮೂಲೋಕವನಾಳುವ ತಂತ್ರವನು
ದೇವಾಧಿಪರನು ಗ್ರಹತಾರಾ ಭಾಸ್ಕರರನು
ನಡೆಸುವುದದರ ಭಯ
ಸ್ಪೃಷ್ಟ ಅಸ್ಪೃಷ್ಟದ ಕಿಬ್ಬಿಕಿನಾರೆಗಳಲು
ತಪ್ಪದು ಆ ಮಾನಕೆ ಜಯ.

ಆಯಿತು ಈಶಿತ್ವ. "ವಶಿತ್ವದ ಪರಿಯನು
ತೋರಿಸುವರೆ ಸಿದ್ಧಗುರು?
ಇಷ್ಟು ಸಿದ್ಧಿಯನು ತೋರಿದುದೆಂದೂ
ಇಲ್ಲ ಮುನ್ನ ಬಂದಿದ್ದವರು."
ಒಳ್ಳಿತು ಎಂದರು ಗುರುಗಳು: ಹೆಮ್ಮೆಯು
ಬಿಂಕವೆ ಬಲ್ಲಾ ಚೇತನಕೆ?
ಒಳಗ ಶಿವಗೆ ಮಾರಿದ್ದರು. ಇನ್ನು
ಅಲ್ಲಿ ತಾವು ಉಂಟೇ ತಮಗೆ?

ಸಿದ್ಧರ ಕುರಿತೊರೆದಳು ಕಾಮಾಕ್ಷಿ:
ಮಹಾತ್ಮರು ನನ್ನೊಡಲನು ಮುಟ್ಟಿ
ಊಗಿನ ಮೊನೆಯನಿತೂ ಕಾಮನೆಯಿಲ್ಲದ
ತಮ್ಮಾ ಮನಸಿನ ಗಟ್ಟಿ
ಎಂಥದೆಂಬುದನು ತೋರಿ ಅನುಗ್ರಹ
ಮಾಡಬೇಕು; ಆ ಭವನಾಶಿ
ಉನ್ನತ ಸಿದ್ಧಿಯ ತೆರನನು ತಿಳಿಯಲು
ತನಗೂ ಗೆಳತಿಯರಿಗು ಆಸೆ.

ಗುರುಗಳರುಹಿದರು: ಗಂಡಿನ ಪರಿಜಿನ
ಈ ಒಡಲಲಿ ಬಾಳ್ವನಿತುದಿನ
ಹೆಣ್ಣು ಪರಿಜ ಬೇರೆಯ ಒಂದೊಡಲನು
ಮುಟ್ಟದ ತಮ್ಮ ವ್ರತದ ಹದನ.
"ಇನ್ನು ವಶಿತ್ವದ ಮಾತು ಏತರದು,"
ಎಂದು ಕೊಂಕಿದಳು ಕಾಮಾಕ್ಷಿ;
"ಹೆಣ್ಣನು ಸೋಕಲು ಸೋಲುವ ಶೌಚ
ಪ್ರಮಾಣಿಸಿತೆ ವಶಿತ್ವದ ಸಾಕ್ಷಿ?

"ಒಳಿತು, ನಾನು ಪ್ರಾಕಾಮ್ಯವನಾಶ್ರಯಿಸು
ವೆನಪ್ಪೆನು ಕಿನ್ನರಿಯೊಂದು;
ಸಿದ್ಧರದನು ತಮ್ಮಂಕಕೆ ಕೊಳ್ಳಲಿ
ತಮ್ಮ ಶಿಷ್ಯೆಯನು ತರಿಸಂದು;

ಅಲ್ಲಿ ತಾನು ಹೆಣ್ಣಾಗದ ರೀತಿಗೆ
ವಶಿತ್ವ ಅವಳನು ತಡೆದಿಡಲಿ:
ವಶಿತ್ವವೆನಿಸಲಿ; ಇಲ್ಲವೆ ವಶಿತ್ವ
ಎನ್ನುವ ಹಿರಿನುಡಿಯನು ಬಿಡಲಿ.''

ಗುರು ಶಿವನನು ಧ್ಯಾನಿಸಿದರು; ಆಗಲಿ
ಎಂದರು: ಜೋಗಿನಿ ಅದೇಕ್ಷಣ
ಏನು ಅದ್ಭುತವೊ, ಒಡನೆಯೆ ಸಂಗಡಿಸಿರೆ
ಹೆಣ್ಣೊಡಲಿನ ವಿಮೋಕ್ಷಣ,
ಹಿರಿ ಚೆಲುವ ಒಂದು ಕಿನ್ನರಿಯಾದಳು;
ಕೆಡೆದಳು ಗುರುಗಳ ಎದುರಿನಲಿ.
ತಾಳು ತಂತಿ ನಿರ್ಜೀವ ಜೀವಿಸಿವೆ
ಎಂದೆನಿಸಿ ಒಂದು ಚೆದುರಿನಲಿ.

ಸಿದ್ಧರು, ಶಿವ ಶಿವ, ಶಿವ ಶಿವ, ಎಂದರು.
ಎದುರ ಕಿನ್ನರಿಯ ಹಿಡಿದೆತ್ತಿ
ತೊಡೆಯೊಳಿಟ್ಟು ಶಿವಕೀರ್ತನೆ ಗೆಯ್ದರು:
ಬೆರಳು ತಂತಿಯನು ಮಿಡಿದಿತ್ತು.
ಕಿನ್ನರಿಯಾದರು ಜೋಗಿನಿ ಜೀವವೆ:
ಗುರು ಶಿವನಾಮವ ಮಿಡಿದಿರೆ ತಾ
ಅದರಾ ಮಿಡಿತಕೆ ಜೀವವ ತೆತ್ತಳು;
ವಿಚಿತ್ರವಾಯಿತು ಆ ಸ್ವರಿತ.

## ಸಿದ್ಧರ ಕಿನ್ನರಿ

ವಿಚಿತ್ರ ಅದ್ಭುತ ವಿಲಕ್ಷಣದ
ಆಸ್ವಾರಿತವ ಸೀಂಟುತ ಸಿದ್ಧಗುರು,
ಉಸಿರುಸಿರನೆ ದೈವಕೆ ಸಮರ್ಪಿಸಿದ
ಹಿರಿಯ ಸುಖವನರಿತಿದ್ದವರು,
ಉಸಿರುಸಿರೇ ಶಿವನಾಮಕೆ ತೆತ್ತಾಸುಖವನರಿತ
ಜೋಗಿನಿ ಇನ್ನು
ಹೆಣ್ಣಾಗುವುದನು ಸಹಿಸಳು ಎಂದರಿತರು,
ಹೊಳೆದಿರೆ ತಮ್ಮೊಳಗಣ್ಣು.

ಗುರುವಿನಂಕದಲಿ ತನ್ನಯ
ರೂಪವನಳವಡುವೆನೆಂದ ಜೋಗಿನಿಗೆ
ಕಿನ್ನರಿರೂಪವೆ ಸುಖವೆಂದೆನಿಸಿತು,
ನಾದಬ್ರಹ್ಮದ ಭೋಗಿಸಿಗೆ.
ಹೆಣ್ಣಿನ ರೂಪಿಗೆ ಮರಳುವ ಮನ
ಮೂಡದೆಹೋದುದು ಆಜೀವದಲಿ:
ವಶಿಯುಸು ಸೋಕಿದ ಜೋಗಿನಿ ಪರ್ವತ
ಕುಮಾರಿಯಾದಳು ಭಾವದಲಿ.

ಗುರುವಿನ ಜೀವಕೆ ಸೋಕಿತು, ಜೋಗಿನಿ
ಪಾರ್ವತಿದೇವಿಯ ಪದಹೊಂದಿ
ಶಿವನಿಗೆ ಸಂದುದು, ಹಿಂದಿನ ಮಾನುಷ
ದೇಹದ ಜೋಗಿಸಿತನ ನಂದಿ:

ಗೌರೀ ದೇಹವತೊರೆದು ಮಹೇಶ್ವರಿ
ಮಗಳೆಂದೈತರೆ ಗಿರಿರಾಜ
ಉಕ್ಕಂದದೆ ನಲಿದಂದದಿ, ನಲಿದರು
ಮರುಳಸಿದ್ಧ ಗುರುಗಳು ಸಾಜ.

ಸಿದ್ಧರ ಸಿದ್ಧಿಯನಳೆಯಲು ಕಿನ್ನರಿ
ರೂಪವ ತಳೆದಾ ಕಾಮಾಕ್ಷಿ
ಕಿನ್ನರಿಯಾಗಿಯೆ ನಿಂತಳು; ಒಪ್ಪಿತು
ಲೋಕಕೆ ಸಿದ್ಧಿಯ ಆ ಸಾಕ್ಷಿ;
ಮರುಳಸಿದ್ಧ ಗುರುವಿಗೆ ಸಮಸುಂಟೇ
ಎಂದಿತು ಜಗದಲಿ ಎಲ್ಲ ಜನ;
ಹೊಗಳಿತು: "ಲೋಕೋತ್ತರ ಗುರುಸಿದ್ಧರ
ಕಾಮವ ಗೆಲಿದಿಹ ಮಲ್ಲತನ."

ನಿರ್ಜೀವ ಜೀವ ಜೋಗಿನಿ ಕಿನ್ನರಿಯನು
ಸಿದ್ಧರು ಹೆಗಲಲಿ ತೂಗಿ
ಶಿವನನು ಹಾಡುತ ನಡೆದರು; ಕಿನ್ನರಿ,
ಅವರೊಡಲೆಂದೆನೆ ಜೊತೆಸಾಗಿ,
ಹೊತ್ತಿಹ ತಂದೆಯ ಭುಜದಿಂದಿಳಿಯೆನು
ಎಂಬ ಹಠದ ಹಸುಳೆಯ ತುಂಟ
ಸವಿಸಿತು ಗುರುವಿಗೆ; ಇಳಿಸಲು ಮೊರೆವುದು;
ಗುರು ಆದರದರ ಹೊರುಬಂಟ.

## ಸಿದ್ಧರ ಕಿನ್ನರಿ

ಅಹ ಸಿದ್ಧರ ಸಿದ್ಧಿ ಇದೆಂಥದು
ಎಂದೊಮ್ಮೆ ಕಿನ್ನರಿಗೆ ಮನಮೆಚ್ಚು;
ಮತ್ತೊಮ್ಮೆ, ಅಂತು ಬೀಗಿದ ಬಿಂಕ
ಇದೇನಾಯಿತೆಂಬ ಒಣ ಹುಚ್ಚು;
ಅನುಸರಿಸಿ ಒಮ್ಮೆ, ವ್ಯಧಿಕರಿಸಿ ಒಮ್ಮೆ, ಅದು
ಇಂತು ಅಂತು ನುಡಿಯುವುದು;
ಗುರು ಎಣಿಸದಂಥ ಸ್ವರತಾನಗಳನು
ತನ್ನಂತೆ ತಾನೆ ಸಿಡಿಯುವುದು.

ಗುರುಗಳು ಭಕ್ತಿಯ ಭರದಲಿ ನುಡಿವರು,
ಶಿವನ ನಂಬಿರೋ ಬನ್ನಿರಿ;
ಓ ಶಿವ ಎನ್ನನು ತೊರೆದೆಯ ದೊರೆಯೇ,
ಎಂದು ಹಲುಬುವುದು ಕಿನ್ನರಿ.
ಗುರುಗಳು ಹಾಡಿರೆ, ಕೃಪೆದೋರೋ
ಹರ ಕೃಪೆದೋರೈ ಶಿವಧೋ,
ನುಡಿವುದು ಕಿನ್ನರಿ, ಅರಸೇ
ನಾನಿನ್ನವಳಲ್ಲೋ ಅಹುದೋ.

ಗುರುಗಳು ಹಠಮಾಡುವರೇ? ಅವರಿಗೆ
ಬೇಕು ಬೇಡ ಎನಲೇನುಂಟು?
ನಿರ್ಜೀವಜೀವ ಜೋಗಿನಿ ಕಿನ್ನರಿ
ಗುರುವಿಗೀಗ ಹಸುಳೆಯ ನಂಟು.

## ನವರಾತ್ರಿ

ಹಸುಳೆಯ ಮಾಟಕೆ ಸೋತರು ಸಿದ್ಧರು:
ಅದು ಏನ ನುಡಿಯಿತದೆ ಗಾನ
ಎನ್ನುವ ನಿಸ್ಸಾರ್ಥದ ಭಾವನೆಯಲಿ
ನುಡಿಸಿದರದರಿಚ್ಛೆಯ ತಾನ.

ಗುರುಗಳು ಎಣಿಸಿ ಎಣಿಸಿ ನುಡಿಸುವ
ಗೀತಕಿಂತ ಕಿನ್ನರಿ ಅದು ಏನೇ
ಗುಣಿಗುಣಿಸಿ ಸುರಿಯಿತದುವೇ ಲೋಕಕೆ
ರುಚಿಸಿತು; ನಿಜಕಿದು ಸರಿತಾನೆ:
ವಿಸ್ವರವಲ್ಲದೆ ಬೇರೆಯೇನಹುದು
ಹತ್ತು ಜನಕೆ ಸಿದ್ಧರ ಮರುಳು?
ಹರೆಯದ ಹೆಣ್ಣಿನ ಅರೆಮರೆ ಕೊರೆನುಡಿ
ಪಡಿನುಡಿಯಿತು ಅದರೆದೆ ಹುರುಳ.

ಕೆಲದಿನ ಕಳೆದಿರೆ ಕಿನ್ನರಿ ಜೀವಕೆ
ಸಿದ್ಧರ ಜೀವನದಾ ಶಾಂತಿ
ಸಾರಿತು; ಅಳಿಯಿತು ಗುರುವಿಂದ ತಾನು
ಬೇರೆಯೆಂಬ ಮೊದಲಿನ ಭ್ರಾಂತಿ;
ಗುರುಮನವನು ಅರಿತದ ಸಾರುವುದೇ
ಸಾರ್ಥಕ ಜೀವನವೆಂಬರಿವು
ಮೂಡಿತು ಅದರಲಿ; ಮೂಡಿದುದಾಗಳೆ
ಸಮರಸದ ಸುಸ್ವರದ ಹರವು.

# ಸಿದ್ಧರ ಕಿನ್ನರಿ

ಕೋಗಿಲ ಕುಕಿಲ ಕುತೂಹಲ,
ಗಿಳಿಗಳ ಕಲರವ ಪಾರಿವ ದಂಪತಿಯು
ಬಳಿಯುಲಿ ಬಳಸುವ ಕೂಜನ, ಹೂವನು
ಸೇರಿದ ತುಂಬಿಯು ಝುಂಕೃತಿಯು,
ಸಿಂಹದ ಸಿಂಹಿಯು ದರ್ಪದ ಗರ್ಜನ,
ಕೆರಳಿದ ಹಾವಿನ ಬುಸುಗುಟ್ಟು
ಹರಿನೀರಿನ ಮಂಜುಳನಾದದ
ಭಂಡಾರವಾಯ್ತುದರ ರಸಕಟ್ಟು.

ಓಮೋಮ್ ಗುರುಗುರು ಎಂಬುದು ಕಿನ್ನರಿ,
ಗುಟ್ಟು ಗುಟ್ಟು ಗುಟ್ಟೆನ್ನುವುದು ;
ಸುಯ್ಯುವುದು, ತನ್ನನೆ ಬಯ್ಯುವುದು, ಸ್ವಾರ್ಥಿಯ
ಮರುಳು ಶಾಂತಿಯನು ತಿನ್ನುವುದು;
ಲಲನೆಯ ಜೀವನವೊಂದಕೆ ಸಂದಾ
ಕಳಕಳಿ ಕನಿಕರದೊಂದು ತೆರ
ಉಲಿವುದು, ಮಮತೆಯ ಕೊಲುವುದು,
ಬಿಡಿಸುತ ಸಂಸಾರಪಾಶಬಂಧಿತರ.

ಸವಿ ರಸಕಟ್ಟಿನ ಪ್ರೌಢ ಸುಕೋಮಲ ಕಲೆ
ಸಿದ್ಧರ ಬುದ್ಧಿಯ ಮಾಟ ;
ಸತ್ಯವ ಸುಂದರಗೆಯ್ದುವು, ಮುದ್ದನು
ಜೇನೆನಿಸಿತು ಇವುಗಳ ಕೂಟ

ಗುರು ಸಾರಿದ ಉಪದೇಶದ ಸಾರವ
ಆಶೆಯಿಂದ ಜನ ಹೀರುತಿರೆ
ಸ್ವರ್ಗವ ಬೆಳೆಯಿತು ಇಳೆ: ಸಿದ್ಧರು
ಇಂತಲ್ಲದೆ ಸುಮ್ಮನೆ ಸಾರಿದರೆ?

ಕರವೀರದ ಚೆಲುವಿನ ಕರುನಾಡಿಗೆ
ಎಂಟು ಸಿದ್ಧಿಯೊಡನೈತಂದ
ಮುರುಳಸಿದ್ಧಗುರು ಹೊರಟರಲ್ಲಿಂದ
ಪಡೆದಿಂತು ಸಿದ್ಧಿ ಇನ್ನೊಂದ.
ಜಯವಕ್ಕೆ ಮುರುಳಸಿದ್ಧಗುರುವಿಗೆ;
ಜಯ ಆ ಜೋಗಿನಿ ಕಿನ್ನರಿಗೆ;
ಸಿದ್ಧರನುಗ್ರಹ ಲಭಿಸಲಿ
ಎಲ್ಲಾ ಸಜ್ಜನರಿಗೆ ಸಂಪನ್ನರಿಗೆ.

*　　　*　　　*

ಪಟ್ಟಾಭಿ ಕಥನ ಕವನವನೋದಿ ಮುಗಿಸಿರಲು
ಕಸ್ತೂರಿ ಇಂತೆಂದ: "ಮಾಯೆ ಎನ್ನುವ ಒಬ್ಬ
ಜೋಗಿನಿ ಮಹಾ ಒಂದು ಮೋಸಮಾಡುವೆನೆಂದು
ಒಂದು ಕಿನ್ನರಿಯಾಗಿ ಮುರುಳಸಿದ್ಧರ ಕೈಯ
ಸೇರಿದಳು, ಅವರು ಅವಳನು ಅಂತೆ ತಡೆದಿರಿಸಿ
ಒಯ್ದು ನಡೆದರು, ನುಡಿಸಿದರು, ಮಾಯೆ ಗುರುಗಳನು
ಒಲಿದಿದ್ದಳಾಗಿ ಆ ಒಲವು ಕಿನ್ನರಿಯಿಂದ
ಸ್ವರವಾಗಿ ಕೇಳಬಂದಿತು, ಎಂಬ ಜಾನಪದ

ಕತೆಯೊಂದ ಕವಿವರ್ಯ ಅಂಬಿಕಾತನಯರು
ತಮ್ಮ ಅಸದೃಶ ಲಾವಣ್ಯಮಯ ಶೈಲಿಯಲಿ
ಕೃತಿಯಾಗಿ ಹಾಡಿಹುದ ಕೇಳಿಹೆನು. ಅದೆ ಕತೆಯ
ಬೇರೊಂದು ಮುಖದಿಂದ ಪಟ್ಟಾಭಿ ಬರೆದಿಹನು.
ಅಷ್ಟ ಸಿದ್ಧಿಯ ವಿವರಗಳನು ಅರಿಯುವುದನಿತು
ಸುಲಭವಾಗಿಲ್ಲ. ವಿಷಯವೆ ಕಷ್ಟ. ಒಟ್ಟನಲಿ
ಕತೆ ಚೆನ್ನವಾಗಿಯೇ ಇದೆ. ನನ್ನ ಕತೆ ತೀರ
ಹಗುರವಾಯಿತು. ಅದಕೆ ಪ್ರತಿಯಾಗಿ ಇದು ಅಷ್ಟು
ಭಾರವಾಗಿದೆ. ಇನಿತೆ ನನಗೆ ತೋರುವ ಮಾತು.''
ಟೀಕೆ ಮುಗಿದಿರಲು ರಾಮಣ್ಣ, ''ನಾಳೆಯ ಸಂಜೆ
ಗೌರಮ್ಮ ಒಂದು ಕತೆ, ರಂಗಪ್ಪ ಒಂದು ಕತೆ,
ಹೇಳುವರು,'' ಎಂದು ಸಾರಿದನು. ಆ ಮರುದಿವಸ
ತಂಗಿ ಗೌರಮ್ಮ ಹೇಳಿದ ಕುರುಬ ಹಂಪಣ್ಣ
ಎಂಬ ನಮ್ಮೊಬ್ಬ ವೀರನ ಚರಿತೆ ಮುಂದೆ ಇದೆ.

# ಕುರುಬ ಹಂಪಣ್ಣ

ನಮ್ಮ ದೇಶವನಾಳುತಿರುವ ಆಂಗ್ಲರು ತಮ್ಮ
ಸೇನೆಗಳ ಚಲನ ಸೌಕರ್ಯಕೆಂದು ಅನೇಕ
ಮಾರ್ಗಗಳ ರಚಿಸಿಹರು. ಇವುಗಳಲಿ ಕರ್ನೂಲು
ಬೆಂಗಳೂರಿನ ಮಧ್ಯೆ ಇಹ ಮಾರ್ಗವೂ ಒಂದು
ಈ ಮಾರ್ಗದಲಿ ಮಧ್ಯೆ ಗುತ್ತಿ ಎಂಬೊಂದೂರು
ಉಂಟು. ಇದರೆಡೆ ರೈಲು ಮಾರ್ಗವನು ದಾಟುವುದು.
ರೈಲು ಮಾರ್ಗವ ದಾಟುವೆಡೆ ವಾಡಿಕೆಯ ರೀತಿ
ಒಂದು ಕಾವಲ ಗುಡಿಸಿಲುಂಟು; ಅದರಲಿ ಅಂತೆ
ಒಬ್ಬ ಕಾವಲುಗಾರ ಉಂಟು. ಮೂವತ್ತೆರಡು
ಮೂವತ್ಮೂರು ವರುಷದ ಹಿಂದೆ ಕಾವಲಿಗೆ
ಹಂಪಣ್ಣನೆಂಬಾತ ಇಹನು: ಈತನು ಕುರುಬ.
ನನ್ನ ಕತೆ ಇವನ ಕುರಿತದು.

ರಾಜಮಾರ್ಗದಲಿ

ಬೆಂಗಳೂರಿಂದ ಕರ್ನೂಲು ಕರ್ನೂಲಿಂದ
ಬೆಂಗಳೂರಿಗೆ ಆಂಗ್ಲ ಸೈನಿಕರು ಆಗಾಗ
ಹೋಗುವರು ಬರುವರು. ಅವರಿಗಿದು ಒಂದಾಟ.
ತಿನ್ನುವುದು; ಕುಡಿಯುವುದು; ಕೆಲಸವೆನ್ನುವುದಿಲ್ಲ;
ಪರದೇಶದಿಂದ ಬಂದಿರುವ ಜನ; ಬಹುತೇಕ
ಮದುವೆ ಇಲ್ಲದ ಮಂದಿ ತರುಣರು. ಈ ಜನರ
ಸೇನೆ ಇರುವೆಡೆಯೆಲ್ಲ ವೇಶ್ಯೆಯರ ಕೇರಿ ಇದೆ.
ದಾರಿಯಲಿ ವೇಶ್ಯೆಯರ ಕೇರಿ ಎಲ್ಲಿರಬೇಕು?
ಅದರಿಂದ ಸೇನೆಗಳು ಊರಿಂದ ಊರಿಗೆ

ಪಯಣ ನಡೆವಂದು, ಇವರಿಳಿದ ಕಡೆ ನಿಂತಕಡೆ,
ಕೆಲಮಂದಿ ಇನಿಸನಿಸು ತುಂಟಾಟವನು ಆಡಿ
ಚೇಷ್ಟೆಗಳ ಮಾಡುವರು. ಇವರಿಗಿದು ವಾಡಿಕೆಯು.
ಒಂದು ಸಲ ದಾರಿ ನಡೆಯುವ ಸೇನೆ ಗುತ್ತಿ ಎಡೆ
ಪಾಳೆಯವ ಹಾಕಿ ನಿಂತಿತು. ದಳದ ಸೈನಿಕರು
ಮೂರು ಜನ ಸಂಜೆಯಲಿ ಸುತ್ತಾಡ ಹೊರಟವರು,
ದಾರಿ ನಡೆಯುತಲಿದ್ದ ಮುದುಕಿಯೊಬ್ಬಳು, ಒಬ್ಬ
ಮಧ್ಯವಯಸಿನ ಹೆಣ್ಣು, ಇಬ್ಬರನು ಕಂಡರು.
ಜೊತೆಗೆ ಗಂಡಸರಿಲ್ಲ. ದುಷ್ಟರಿಗೆ ಅನುಕೂಲ.
ಮೂವರೂ ಹೆಂಗಸರ ಬಳಿಗೆಂದು ಸರಸರನೆ
ಸಾರಿ ಬಂದರು. ಸಿಳ್ಳೆ ಹಾಕಿದರು. ನಿಂಗವ್ವ—
ಇದು ಮಧ್ಯವಯದ ಹೆಂಗಸ ಹೆಸರು—ಭಯವಾಗಿ
ಮುದುಕಿಯನು, "ಈರವ್ವ, ಇನ್ನು ಗತಿಯೇನವ್ವ"
ಎಂದು ಕೇಳಿದಳು; ಸುತ್ತೆಲ್ಲ ನೋಟವಬೀರಿ
ರಕ್ಷಿಸುವ ಮಂದಿ ಯಾರಿಹರೆಂದು ನೋಡಿದಳು.
ದಾರಿಯಲಿ ಜನವಿಲ್ಲ. ಹೊಲದ ಕೆಲಸದ ಮಂದಿ
ಮನೆಗಳನು ಸಾರಿಹರು. ಎನಸೊ ಆ ದೂರದಲಿ
ರಾಜಮಾರ್ಗವ ರೈಲು ದಾಟುವೆಡೆ ಗುಡಿಲಿಹುದು;
ಅಲ್ಲಿ ಕಾವಲುಗಾರ ಇರಬಹುದು. ನಿಂಗವ್ವ,
"ಅವ್ವ ನಾ ಗುಡಿಲತ್ತ ಓಡ್ಯೇನು ನೀ ಇವರ
ಒಸಿ ಗಜರು" ಎಂದು ಕಾವಲ ಗುಡಿಲ ಕುರಿತುದೇ
ಬೇಗ ನಡೆದಳು. ಸೈನಿಕರು ಇದನು ತಿಳಿದವರು
ತಮ್ಮ ತಮ್ಮಲಿ ನಗುತ ಏನೊ ನುಡಿಯುತ ಇವರ
ಹಿಂಬಾಲಿಸಿದರು. ಮುದುಕಿಗೆ ಕೂಡ ಇವರೊಡನೆ

ಮಾತನಾಡುವುದಿಷ್ಟವಲ್ಲ. ಅವಳಿವರತ್ತ ಕೆಟ್ಟಮುಖದಿಂದ ನೋಡಿದಳು. ಕಪಿ ಮುಂಡೇವು ಹಾಳಾಗಬಾರದೇ ಎಂದು ನೆಟಿಕೆಯ ಮುರಿದು ಆದಷ್ಟು ಬೇಗ ತಾನೂ ಮುಂದೆ ಸಾರಿದಳು. ನಿಂಗವ್ವ ಗುಡಿಲಮುಟ್ಟಿದಳು. ಕಾವಲುಗಾರ ಒಳಗಿರಲು ಅವನ ಕೂಗಿದಳು. 'ಈ ಬಿಳಿಯ ಜನ ನನ್ನ ಅಟ್ಟಿಸಿಕೊಂಡು ಬರುತಿಹರು, ನೀ ನನ್ನ ಮರ್ಯಾದೆ ಉಳಿಸಬೇಕಣ್ಣಾ,' ಎಂದರಚಿದಳು.

ಇವಳ ಕೂಗನುಕೇಳಿ ಹಂಪಣ್ಣಾ ಗುಡಿಲಿಂದ ಹೊರಗೆ ಬಂದನು. ಒಂದುನೋಟದಲಿ ಸಂಗತಿಯು ಅರಿತುಕೊಂಡನು. 'ನೀನು ಗುಡಿಲೊಳಗೆ ಹೋಗವ್ವ, ನಾ ಇವರ ನೋಡಿಕೊಳುತೀನಿ' ಎಂದುದೆ ಮುಂದೆ ಮೂರು ಹೆಜ್ಜೆಯನಿಕ್ಕಿ ಧೀರ ಮುಖಮುದ್ರೆಯಲಿ ಆ ಮೂರು ಮಂದಿ ಧೂರ್ತರಮುಂದೆ ಏಕಾಕಿ ಒಬ್ಬ ನಿಂತನು.

ಇಷ್ಟರಲಿ ಮುದುಕಿ ಈರವ್ವ ಬಳಿಸಾರಿಬಂದಿರಲು ಹಂಪಣ್ಣಾ ಅವಳನೂ ಗುಡಿಲೊಳಗೆ ಹೋಗೆಂದು ಕಳುಹಿ, "ಒಳಗಡೆ ಒಂದು ಬೊಂಬು ಇದೆ ಅವ್ವ. ಅದ ಇತ್ತ ಎಸೆ," ಎಂದನು.

ಸೈನಿಕರು ಮುಂದೆಬಂದರು. ಇವನು ಇರುವುದನು ಕಾಣೆವೆಂಬಂತೆ ಗುಡಿಲೆಡೆ ನಡೆಯನೋಡಿದರು. ಹಂಪಣ್ಣಾ, "ಯಾರೊ ಅದು? ಕಾವಲಿನ ಗುಡಿಸಿಲಿಗೆ ಹೋದೀರಿ ಜೋಕೆ" ಎಂದನು. ಸೈನಿಕರು ನಿಂತು ಇವನ ಏನೋ ನುಡಿಸಿದರು. ಅವರೊಳೊಬ್ಬವನು

ಕಿಸೆಯಿಂದ ಅಷ್ಟು ಹಣವನು ತೆಗೆದು ತೋರಿದನು.
ಹಂಪಣ್ಣ, "ಹೇಸುಮುಂಡೇವ, ಕಾಸುಳ್ಳವರು
ಸೂಳೇರ ಹುಡುಕಿಹೋಗಿರೊ. ಗರತಿ ಹೆಂಗಸರ
ಕಾಡುವುದು ಏಕೆ?" ಎನ್ನುತ ಕೈಯ ಸನ್ನೆಯಲಿ
ತೊಲಗಿ ಎಂದೊದರಿ ತೋರಿದನು. ಆ ಸೈನಿಕರು
ಕೈಗೆಬಂದುದು ಬಾಯಿಗಿಲ್ಲವಾಯಿತೆ ಎಂದು
ಇನಿಸು ಬೇಸರದಿಂದ ಇವನ ಬೆದರಿಸಲೆಂದು
ಮುಷ್ಟಿಯನು ತೋರಿ ಚೀರಿದರು. ಹಂಪಣ್ಣನಿಗೆ,
ಇವರು ಮೂವರು, ತಾನು ಒಬ್ಬ, ಕಾದುವಮಾತು
ಅನಿತೇನು ಒಳಿತಲ್ಲ, ಎಂದೆಂಬ ಅರಿವುಂಟು.
ಆದರೂ ಇವರ ತಡೆಯದೆ ಸುಮ್ಮನಿರೆ ತಾನು
ಗಂಡಾಗಿ ಫಲವೇನು? ಹೊಡೆಯುವರು; ಹೊಡೆಯಲಿ.
ಕೊಲ್ಲುವರೆ? ಕೊಲ್ಲಲಾರರು. ಇಲ್ಲ ಕೊಂದರು,
ಸಾಯುವುದು. ಇದಬಿಟ್ಟು ತನ್ನ ಕಣ್ಣೆದುರಿನಲಿ
ಮರೆಹೊಕ್ಕ ಹೆಣ್ಣ ಮಾನಕೆ ಒಂದು ರವೆಯಷ್ಟು
ಕುಂದುಬರುವುದಕೆ ಎಡೆಕೊಡೆ ತನ್ನ ಜನ್ಮವೇ
ವ್ಯರ್ಥ. ಹಂಪಣ್ಣ ಮನವನು ಇಂತು ದೃಢಮಾಡಿ
ಗುಡಿಲೆಡೆಗೆ ಬಾರದಂದಕೆ ಅವರ ತಡೆವುದಕೆ
ದಾರಿಯಲಿ ಅಡ್ಡನಿಂತನು.

ಸೈನಿಕರು ಇವನ
ಲಕ್ಷ್ಯಮಾಡದೆ ಮುಂದೆ ನಡೆದರು. "ಇದೇತರದೊ
ನಿಮ್ಮಾಟ" ಎಂದು ಹಂಪಣ್ಣ ಗುಡಿಲಿನಬಳಿಗೆ
ಓಡಿದನು. ನಿಂಗವ್ವ ಹೊರಗಡೆಗೆ ಎಸೆದಿದ್ದ
ಬೊಂಬ ಕೈಯಲಿ ಹಿಡಿದು ಬಾಗಿಲೆಡೆನಿಂತನು.

ಸೈನಿಕರು ಬಳಿಗೆಬಂದರು. ಇವನ ಲಕ್ಷಿಸದೆ ಬಾಗಿಲನು ಕುರಿತು ನುಗ್ಗಿದರು. ತಮ್ಮನು ಇವನು ಹೊಡೆಯಲಾರನು ಎಂದೆ ಅವರೆಣಿಕೆ. ಹಂಪಣ್ಣ ತಡೆಯಲಾಗದ ಕೋಪದಿಂದ ಇವರೆದುರಾಂತು, "ನಿಲ್ಲಿರೋ, ಮುಂದೆಬಂದರೆ ಕೊಲ್ಲುವೆನು," ಎಂದ. ಒಬ್ಬ ಸೈನಿಕ ತೀರ ಬಳಿಗೆಬರೆ ಬೊಂಬಿಂದ ಅವನ ಹೊಡೆದೇ ಹೊಡೆದ. ಪೆಟ್ಟು ಮೂಗಿನ ಮೇಲೆ ಗಾಯಮಾಡಿತು. ಅದೇಕ್ಷಣ ಅವರೊಳಿನ್ನೊಬ್ಬ ತನ್ನ ಕಿಸೆಯಿಂದೊಂದು ಕಿರಿಗೋವಿಯನು ಸೆಳೆದು ಗುರಿಯಿಟ್ಟು ಇವನ ಸುಟ್ಟನು. ಗೋಲಿ ನೇರದಲಿ ತಲೆಯಸಾರಿತು. ವೀರ ಹಂಪಣ್ಣ ಉಸಿರಳಿದು ಅಲ್ಲೆಬಿದ್ದನು.

ಗುಡಿಲಿನೊಳಗಿಂದ ಇದ ಕಂಡು ನಿಂಗವ್ವ ಮುದುಕಿ ಇವರನು ಬಯ್ದು ಕೂಗುತ್ತ ಹೊರಗೆಬಂದರು. ತಮ್ಮ ರಕ್ಷಿಸಲು ಬಲಿಯಾದ ಧೀರನೊಡಲೆಡೆಗೆ ಸಾರಿದರು. ತಮ್ಮನು ಇವರು ಏನುಮಾಡುವರೊ ಎಂದೆಂಬ ಭಯ ಹಂಪಣ್ಣ ತೀರಿಕೊಂಡನೆ ಎಂಬ ಶೋಕದಲಿ ಮರೆಯಿತು. ಗುಂಡಿನೇಟಿನ ಶಬ್ದದಿಂದ ದೂರದ ಒಂದು ತೋಟದಲಿ ಹೊತ್ತಾಗಿಯೂ ದುಡಿಯುತ್ತಿದ್ದ ಜನ ಇತ್ತನೋಡಿ ಇದೇನೊ ಎಂದು ವೇಗದಿಬಹುದು ಇಲ್ಲಿ ಕಂಡಿತು. ಸೈನಿಕರು ಇನ್ನು ಇಲ್ಲಿದ್ದು ಫಲವಿಲ್ಲ ಎಂದು ಓಡಿದರು.

ಹಂಪಣ್ಣನನು
ಸಿಂಗವ್ವ ಮುದುಕಿ, ಆ ತೋಟದಿಂದೈತಂದ
ಜನರ ನೆರವಿಂದ, ಊರಿಗೆ ಹೊತ್ತುತಂದರು.
ಆದ ಸಂಗತಿಯು ಹಿರಿಯುರಿಗೆಲ್ಲ ಅರುಹಿದರು.
ಊರೂರೆ ಕೋಪಗೊಂಡಿತು. ಅದೇ ಸಂಜೆಯುಲೆ
ಹಿರಿಯುವರು ತಹಸೀಲುದಾರ ಪೋಲೀಸರಿಗೆ,
ಸೇನೆಯಿುಳಿದಿದ್ದ ತಾಣವಸಾರಿ, ಈ ರೀತಿ
ಜೀವತೆಗೆದವರ ಹಿಡಿಯುಲೆಬೇಕು, ಎಂದರು.
ಯಾರೊ ಕಾಣೆವು ಎನಲು ಏನುಗತಿ? ಸಿಂಗವ್ವ,
ಹಂಪಣ್ಣ ಅವನೊಳೊಬ್ಬನ ಮೂಗು ಮುರಿದಿಹನು,
ಗುರುತು ಸಿಕ್ಕುವುದು, ಎಂದಳು.
ಕೊನೆಗು ಇಂತೆಯೇ
ಗುರುತು ಸಿಕ್ಕಿದುದು. ಊರೆಲ್ಲ ಹಠವಮಾಡಿರಲು
ಬೇರೆ ಏನನು ತಾನೆ ಮಾಡುವುದು ತೋರದೆ,
ಆ ಮೂಗು ಮುರಿದವನು, ಅವನ ಹೇಳಿಕೆಯುಂತೆ
ಅವನೊಡನೆ ಇದ್ದ ಇಬ್ಬರು, ಇವರ ತಪ್ಪಿತವ
ಪೋಲೀಸ್ ವಿಚಾರಣೆಗೆ ತಂದೆತಂದರು. ಒಬ್ಬ
ಸೈನಿಕನ ಹಂಪಣ್ಣನನು ಕೊಂದ ತಪ್ಪಿತಕೆ
ಹೊಣೆಮಾಡಿ ನಿಲಿಸಿದರು.
ಹೊಣೆಹೊತ್ತ ಸೈನಿಕ
"ಹೌದು, ನಾನಿವನ ಸುಟ್ಟುದು ಉಂಟು. ಇವ ನಮಗೆ
ಹೆಣ್ಣ ಒದಗಿಸುವೆನೆಂದನು. ಇವಳ ತಂದನು.
ಏನುಕೊಡಬೇಕೆಂಬ ಮಾತಿನಲಿ ನಮ್ಮೊಡನೆ
ಜಗಳಮಾಡಿದನು. ಗದರಿಸಲು ಬೊಂಬನು ಎತ್ತಿ

ನಮ್ಮ ಹೊಡೆದನು. ಆತ್ಮರಕ್ಷಣೆಯ ಸಲುವಾಗಿ
ನಾನು ಪಿಸ್ತೂಲ್ ತೆಗೆದು ಇವನ ಸುಡಬೇಕಾಯ್ತು."
ಇದು ಇವರ ವಾಡಿಕೆಯ ಮಾತೆ. ನಿಂಗವ್ವನಿಗೆ
ಇದಕೇಳಿ ಬಹುದುಃಖವಾಯ್ತು. "ತಾ ಪೂರ್ವದಲಿ
ಯಾವ ಗರತಿಯ ಸೂಳೆಯೆಂದಳೋ, ಆ ಪಾಪ
ಈಗ ತನ್ನನು ಒಬ್ಬ ಸೂಳೆಯೆಂದೆನ್ನಿಸಿತು.
ತನ್ನ ತಪ್ಪಿಗೆ ಪಾಪ ತನ್ನ ಉಳಿಸಲುಬಂದ
ಹಂಪಣ್ಣನಿಗೆ ಇಂತ ನಾಚಿಕೆಯ ಹೊರಿಸಿದರೆ"
ಎಂದವಳು ಮರುಗಿದಳು. ಮುದುಕಿ ಸಂಗತಿಕೇಳಿ,
"ಎಲ ಇಂಥ ಸುಳ್ಳನಾಡುವರುಂಟೆ? ಈ ಮಂದಿ
ಹೆಂಗಸರ ಹೊಟ್ಟೆಯಲಿ ಹುಟ್ಟುವವರಲ್ಲಹುದು.
ಹಡೆದವರ ಹೆಸರ ಕಾಣದ ನಾಯಿಕುನ್ನಿಗಳು,"
ಎಂದು ಶಪಿಸಿದಳು. ಪೋಲೀಸ್ ವಿಚಾರಣೆ ಮುಗಿದು
ಕೊಲೆಮಾಡಿದವನ ಕೋರ್ಟಿನ ಎದುರು ನಿಲಿಸಿದರು.
ಆಂಗ್ಲ ಜನ ತಮ್ಮವರ ತಪ್ಪ ಪರಶೀಲಿಸಲು
ಆಂಗ್ಲರೇಬೇಕು ಎಂದೆಂಬ ಕಟ್ಟಲೆಯೊಂದ
ಮಾಡಿಹರು. ಇದರಂತೆ ಕೊಲೆಗಾರ ಸೈನಿಕನು
ಹೈಕೋರ್ಟಿನೆದುರು ನಿಂತನು.

ಆಂಗ್ಲಜನ ತಾವು
ಬಹುಬಹು ನ್ಯಾಯವಂತರು ಎಂದು ಬಡಿವಾರ
ಬಡಿಯುವರು. ಇದು ಎನಸೊ ನಿಜ. ತಮ್ಮವರಬಿಟ್ಟು
ಉಳಿದವರು ಕಕ್ಷಿಯಾಗಿಹ ವೇಳೆ ಈ ಜನರು
ನ್ಯಾಯವನೆ ನಡಸುವರು. ಎರಡು ಪಕ್ಷದೊಳೊಂದು
ತಮ್ಮವರದಾಯಿತೋ ಆಗ ಈ ಬಡಿವಾರ

ಬರಿಬುರುಡೆಯಾಗುವುದು. ಹೈಕೋರ್ಟಿನಲಿ ಜಡ್ಜಿ
ಎಲ್ಲವಾತನು ಕೇಳಿದನು. ಮುದುಕಿ ನಿಂಗವ್ವ
ಸತ್ಯವಂತರು ಎಂದು, ಹಂಪಣ್ಣ ಎಂದೆ ಸರಿ
ಹೆಣ್ಣನೊದಗಿಸುವ ಕುತ್ಸಿತ ಜೀವ ಅಲ್ಲೆಂದು,
ಮರ್ಯಾದೆವಂತ ಸಾಕ್ಷಿಗಳು ಹೇಳಿದ ವಾತ
ಏನೆ ಕಾರಣವೆಂಬುದಿಲ್ಲದೆ ನಿರಾಕರಿಸಿ
ಸೈನಿಕನ ವಾತೆ ನಿಜವೆಂದು ಅವನನು ಬಿಟ್ಟು
ತೀರ್ಪುಕೊಟ್ಟನು.

ದೇಶದೇಶವೇ ಛೀಗುಟ್ಟಿ
ತೀರ್ಪು ತಪ್ಪೆಂದು ಕೂಗಿತು. ಆದರೇನಂತೆ?
ಹಂಪಣ್ಣ ಸತ್ತದಾಯಿತು. ಅವನ ಕೊಂದವನು
ತಲೆಯುಳಿಸಿಕೊಂಡುದಾಯಿತು. ಆದರೂ ನಾಡ
ಹಿರಿಯ, ಕೇಶವಪಿಳ್ಳೆ, ನಮ್ಮ ನಾಡಿನ ಒಬ್ಬ
ಹೆಣ್ಣ ಮರ್ಯಾದೆಯನು ಕಾವ ಬಂದವಸರದಿ
ಜೀವತೆತ್ತವನೆಂದು, ವೀರ ಹಂಪಣ್ಣನಿಗೆ
ಒಂದು ಮಾನಸ್ತಂಭವನು ನಿಲಿಸಬೇಕೆಂದು
ನಿಶ್ಚಯಿಸಿದರು. ಸುತ್ತು ಜನರಿಂದ ಹಣವೆತ್ತಿ
ಆಡಳಿತ ಕೂಡದೆಂದರೆ ಲಕ್ಷಿಸದೆ ಒಂದು
ನೆನವ ಕಂಬವನು ನಿಲಿಸಿದರು.

ಕರ್ನೂಲಿಂದ
ಬೆಂಗಳೂರಿಗೆ ಬರುವ ವಾರ್ಗದಲಿ ಗುತ್ತಿಯೆಡೆ
ಈಗಲೂ ಈ ಕಂಬ ಇದೆ. ಆಂಗ್ಲರಾಳುತಿಹ
ದಿವಸದಲೆ, ಅವರ ಹೈಕೋರ್ಟು ನೀಡಿದ ಒಂದು
ತಪ್ಪು ತೀರ್ಮಾನವನು ಖಂಡಿಸುವ ಇಂತಪ್ಪ

ಸಾರ್ವಜನಿಕ ಸ್ತಂಭ ಇದು ಒಂದೆ ಎಂದೆನಗೆ
ತೋರುತಿದೆ. ವೀರಹಂಪಣ್ಣನದು ಇದು ಕತೆ.

*  *  *

ಗೌರಮ್ಮ ಕತೆಹೇಳಿ ಮುಗಿಸಿರಲು ರಂಗಪ್ಪ
ಇಂತು ನುಡಿದನು. "ನಿನ್ನೆ ಆ ಗವರ್ನರ ಮಾತು,
ಇಂದು ಈ ನ್ಯಾಯಮೂರ್ತಿಯ ಮಾತು, ಎರಡರಲಿ
ನಮ್ಮನಾಳುತಲಿರುವ ಬಿಳಿ ಜನರ ದೌರ್ಬಲ್ಯ
ಎಲ್ಲಿ ಎಂಬುದು ಕಾಣುತಿದೆ. ಇವರ ಆಳ್ವಿಕೆಗೆ
ಮೊದಲಿಟ್ಟ ಮಂದಿಯೇ ತಮಗೆ ಹಣವೇ ಮುಖ್ಯ
ಗುಣ ಎರಡನೆಯಮಾತು ಎಂಬುದನು ತೋರಿದರು.
ಅಂತೆಯೇ ಇವರು ಹೆಮ್ಮೆಯಲಿ ಹೊಗಳುವ ತಮ್ಮ
ಆ ಬ್ರಿಟಿಷ್ ಸೆನ್ಸ್ ಆಫ್ ಜಸ್ಟಿಸ್ ಅಂತೆ ಆ ಫೇರ್‌ಪ್ಲೇ
ಒಳ್ಳೆ ಸಮಯದಲಿ ಅಂತರ್ಧಾನವಾಗುವುವು.
ಇದರಿಂದಲೇ ಇವರ ರಾಜ್ಯ ಈ ತೊಂಬತ್ತು
ವರುಷದಲೆ ಇಷ್ಟು ಕಳಿತಿದೆ. ಇಷ್ಟು ಸುಲಭದಲಿ
ದೊರೆತ ಭಾರತವರ್ಷದಂಥ ಆಸ್ತಿಯನಿವರು
ಪಿತ್ರಾರ್ಜಿತವನು ಬೇಗನೆ ಕಳೆವ ಅವಿವೇಕಿ
ದುಂದುಗಾರನ ರೀತಿ ಇಂತ ಅವಿವೇಕದಲಿ
ಕಳೆದುಕೊಳ್ಳುತಲಿಹರು. ಹಂಪಣ್ಣನನು ಕೊಂದ
ಆ ಪ್ರಾಣಿ ಏನು ಬಹುವಸ್ತು? ಅನ್ಯಾಯದಲಿ
ಅವನ ಉಳಿಸಿದ ಜಡ್ಜಿ ಒಬ್ಬ ದುಷ್ಟನ ಉಳಿಸಿ
ತಾನು ನ್ಯಾಯಕೆ ಅಳಿದು ರಾಷ್ಟ್ರವನೆ ಅಳಿಸಿದನು.
ನೂರು ನೋಂಪಿಯ ಪುಣ್ಯವನು ಒಂದು ತಪ್ಪಾಟ
ತಿಂದುಹಾಕಿತು ಎಂದು ನಮ್ಮ ಜನದಲಿ ಗಾದೆ.

ಇಂತಾಯಿತೀಜನದ ಆಡಳಿತ. ದಿನ ದಿನದ
ರಾಜ್ಯ ವ್ಯವಸ್ಥೆಯಲಿ ವಿತರಣೆ ವಿಚಕ್ಷಣೆ.
ಒಂದು ವರ್ಷಕೆ ಒಮ್ಮೆ ಒಂದಿಂತ ಅವಿವೇಕ.
ತಮ್ಮ ರಾಜತ್ವವನು ಹಗೆಗಳಿಗು ಮಿಗಿಲಾಗಿ
ಇವರೆ ಉರುಳಿಸಿಕೊಳ್ಳುತಿಹರು. ಸಮ್ಮ ಮಹಾತ್ಮ
ಆಂಗ್ಲ ಚಕ್ರಾಧಿಪತ್ಯವನು ಬಿಡುವುದು ತನಗೆ
ಇಷ್ಟವೇ ಇಲ್ಲ ಎಂದರು ಒಮ್ಮೆ. ಇಪ್ಪತ್ತು
ವರ್ಷದಲಿ, ಏನಾದರೂಸರಿಯೆ ಈ ಜನರ
ಸಹವಾಸ ನಮಗೆ ಬೇಡವೆಬೇಡ, ಎನುತಿಹರು.
ಆ ಕ್ಷಮೆಯೆ ರೋಸುವಂದಕೆ ನಡೆದುಕೊಂಬ ಜನ
ಅನಿತೇನು ಬುದ್ಧಿಯುಳ್ಳವರಲ್ಲ. ಒಳ್ಳಿತು.
ಹಂಪಣ್ಣನಂತ ಶೂರನಿಗೆ ಅವನನು ಹೆತ್ತ
ಊರು ಪೂರ್ವದಲೊಂದು ವೀರಗಲ್ಲನು ನಿಲಿಸಿ
ಮರ್ಯಾದೆಮಾಡುತಿದ್ದಿತು. ನಮ್ಮ ಜನಕೀಗ
ದಾಸ್ಯದಲಿ ಇಷ್ಟಕೂ ಅವಕಾಶವಿಲ್ಲದಿದೆ.
ಆದರೂ ರಾಷ್ಟ್ರ ನಾಯಕರು ಕೇಶವಪಿಳ್ಳೆ
ಹಠಮಾಡಿ ಆಡಳಿತದಧಿಕಾರಿಗಳ ಮಲೆತು
ಒಂದು ನೆನಪಿನ ಕಂಬವನು ನಿಲಿಸಿಗೆದ್ದರೇ
ಇದರಿಂದ ಅವರು ಹಂಪಣ್ಣನಿಗು ಸಮನೆಂದು
ನನಗೆ ತೋರುತಿದೆ. ಸೋದರಿ ನಮ್ಮ ಗೌರಮ್ಮ
ಈ ನಮ್ಮ ನಾಡ ವೀರರ ಚರಿತೆಯನು ಹೇಳಿ
ತುಂಬ ಉಪಕಾರಮಾಡಿದರು. ಸಂಗತಿಹಿರಿದು.
ಅದರಿಂದ ಅದನು ಹೇಳಿದ ರೀತಿಯನು ಕುರಿತು
ನನಗೆ ಯೋಚನೆಯೆಬರಲಿಲ್ಲ. ಎಂತೇ ಇರಲಿ

ಅದು ಒಳಿತೆ ಎಂದು ತಿಳಿವೆನು ನಾನು. ಇದು ಟೀಕೆ. ಇನ್ನು ನಾನೊರೆವ ಕತೆ.. ರಾಮಣ್ಣಾ ಆ ಕತೆಗೆ ಪ್ರಸ್ತಾವನೆಯ ಹೇಳಿದಾಕ್ಷಣವೆ ಒರೆಯುವೆನು.'' ಟೀಕೆ ಮುಗಿದಿರಲು ರಾಮಣ್ಣ ''ಪ್ರಸ್ತಾವನೆಯ ಮಾತಿಷ್ಟೆ. ರಂಗಪ್ಪ ಹುಡುಗನಾಗಿರುವಂದು ದೇವರಾಯನ ದುರ್ಗದಲಿ ಒಬ್ಬ ಅರ್ಚಕನ ಕಂಡಿದ್ದನಂತೆ, ಆತನ ಜೀವನದ ಒಂದು ಸಂಗತಿಯುನವನು ಹೇಳುವನು,'' ಎಂದನು. ಆಗ ರಂಗಪ್ಪ ಒರೆದ ಕತೆಯನು ಮುಂದೆ ಗುರುತಿಸಿದೆ.

# ದುರ್ಗದ ಅರ್ಚಕ

ದೇವರಾಯನ ದುರ್ಗ ನಮ್ಮೂರ ಬದಿಗೆ ಇದೆ.—
ನನಗೆ ಕತೆಹೇಳಿ ವಾಡಿಕೆಯಿಲ್ಲ. ಅದರಿಂದ
ನಾನು ಚಿಕ್ಕಂದು ಕೇಳಿದ ಒಂದು ಸಂಗತಿಯ
ಬಂದಂತೆ ಹೇಳಿ ಮುಗಿಸುವೆನು.—ಬೆಟ್ಟದ ಮೇಲೆ
ನರಸಿಂಹದೇವರವು ಎರಡು ಗುಡಿ ಇಹವೆಂದು
ತಾವು ಕೇಳಿರಬಹುದು. ಬೆಟ್ಟದಲಿ ಮುಪ್ಪಾಗ
ವೀಸ ಏರಿರಲು ದೊರೆಯುವ ಹಿರಿಯ ಬಯಲಿನಲಿ
ಒಂದು ಊರಿದೆ. ಅದರೊಳೊಂದು ಗುಡಿ. ಇನ್ನೊಂದು
ಗಿರಿಯ ಕೋಡಿನಲಿ ಗುಡಿಯೆಷ್ಟು ಅಷ್ಟಕೆ ಇರುವ
ಒಂದು ಅಂಗಳದೊಳಿದೆ. ನರಸಿಂಹದೇವರು
ಊರಿನಲಿ ಭೋಗದಲಿ, ಕೋಡಿನಲಿ ಯೋಗದಲಿ,
ಸೇವೆಕೊಳುತಿಹರು. ಪೂರ್ವದಲಿ ದುರ್ಗದ ಊರು
ತಕ್ಕಷ್ಟು ಹಿರಿದೆ ಆಗಿದ್ದು ಇತ್ತೀಚೆಗೆ
ಬಹಳ ಕಿರಿದಾಗಿಹುದು ಕಾಣುವುದು. ಹಿರಿಯರಸು
ಮೈಸೂರ ಚಿಕದೇವರಾಜ ಒಡೆಯರು ಒಮ್ಮೆ
ದುರ್ಗವನು ಮುತ್ತಿ ವಶಮಾಡಿಕೊಂಡವರದನು
ತಮ್ಮ ಹೆಸರಿಂದ ಕರೆದರು. ಅಂದು ಮೊದಲಾಗಿ
ಗುಡಿಗಳು ಪ್ರಸಿದ್ಧವಾದವು. ವರ್ಷದಲಿ ಒಮ್ಮೆ
ತೇರಿನುತ್ಸವ ನಡೆಯುವುದು. ನನ್ನ ಬಾಲ್ಯದಲಿ
ನಮ್ಮ ತಾತದಿರು ನನ್ನನು ತೇರಿಗೆಷ್ಟೊ ಸಲ
ಕರೆದೊಯ್ದುದುಂಟು. ಆ ಕಾಲದಲಿ ಉತ್ಸವದ
ಹೆಸರ ಬಹು ಹಿರಿದು ಮಾಡಿದುದು ತೇರಿನ ದಿನದ

ಸಂತರ್ಪಣೆಯು ಹುಳಿ. ನನಗದರ ನೆನವು ಇದೆ.
ಇನ್ನೊಂದು ಅಂತೆ ನೆನವಿಹುದು ದೇವಾಲಯುದ
ಒಬ್ಬ ಅರ್ಚಕರ ಮುಖ. ಇವರು ಶ್ರೀವೈಷ್ಣವರು.
ನಾನು ನೋಡುವ ದಿನಕೆ ಇವರು ತೀರಾ ಮುದುಕ.
ಆದರೂ ತೇರದಿನ ದೇವಾಲಯುಕೆ ಬಂದು
ಸೇವೆ ಸಲ್ಲಿಸುತಲಿದ್ದರು. ಕಾಲಮೋಘದೊಲು
ಶ್ಯಾಮಸುಂದರ ನೀಲವರ್ಣ ಮೈ. ಹನ್ನೆರಡು
ನಾಮ ಆ ಮೈಯ ತುಂಬಿಹವು; ತೊಳಗುತಲಿಹವು.
ಬಹುಕಾಲ ಅಲ್ಲಿಯೇ ಸೇವೆಗೆಯ್ದವರೆಂದು
ಜನಕೆ ಇವರಲಿ ತುಂಬಭಕ್ತಿ. ಅಲ್ಲದೆ ಇವರು
ಹರೆಯ ಮುಗಿವಂದು ದೇವರಲಿ ಒಂದಚ್ಚರಿಯ
ದೃಢಭಕ್ತಿಯನು ತೋರಿ ಕೃತಕೃತ್ಯರಾದವರು
ಎಂದು ಕತೆಯೊಂದಿತ್ತು. ವರ್ಷದಲಿ ಒಂದುಸಲ
ಉತ್ಸವಕೆ ಹೋದ ಹೊತ್ತಲಿ ನಮ್ಮ ತಾತದಿರು
ಇವರ ಬಳಿ ಬಿಡುವಾಗಿ ಕುಳಿತು, ಆ ಸಂಗತಿಯ
ಬಣ್ಣಿಸಿರಿ, ಎಂದು ಬೇಡುವರು. ಅರ್ಚಕರು ಅದ
ಅರ್ಧಸಂಕೋಚ, ಇನ್ನರ್ಧ ಸಂತಸದಿಂದ,
ನೆರೆದಿದ್ದ ಹಿರಿಯ ಕಿರಿಯರಿಗೆಲ್ಲ ತಿಳಿವಂತೆ
ಒಕ್ಕಣಿಸಿ ಅರಿಕೆ ಮಾಡುವರು.

ಬಹು ಹಿಂದೆ ಅದು.

ಆಗ್ಗೆ ಈ ಅರ್ಚಕರು ಕೋಡ ದೇವಾಲಯದ
ಪೂಜೆಯನು ನಡಸುತಿದ್ದರು. ಇವರ ಚಿಕ್ಕಪ್ಪ
ಊರ ದೇವಾಲಯದ ಕೆಲಸವನು ನೋಡುವರು.
ಒಂದು ಹಬ್ಬದ ದಿವಸ ಅವರು ಮೆಯ್ ಅನುತಪ್ಪಿ,

ಈ ದಿವಸ ನಾನು ಪೂಜೆಯ ಮಾಡುವಂತಿಲ್ಲ,
ನಿನ್ನ ಆ ಗುಡಿಯ ಪೂಜೆಯ ಕೆಲಸವನು ಮುಗಿಸಿ
ಇಳಿದುಬಂದೀ ಗುಡಿಯ ಕೆಲಸವನು ನೋಡಿಕೊ,
ಇಲ್ಲವೇ ಮಗನ ಕಳುಹಿಸು, ಪೂಜೆಮಾಡಲಿ,
ಎಂದು ಆಳಿನ ಕೈಲಿ ಹೇಳಿಕಳುಹಿದರಹುದು.
ಮಗನಿಗಾದಿನಕೆ ಹದಿನೆಂಟು ವರ್ಷದ ಹರೆಯ.
ಅರ್ಚಕರು ಮಗನ ಕರೆದರು. "ನೋಡು, ತಾತನಿಗೆ
ಏನೊ ತೊಂದರೆ, ಪೂಜೆ ಮಾಡು ಬಾ ಎಂದಿಹರು,
ಇಲ್ಲಿ ಹಬ್ಬದ ಪೂಜೆಯನು ಮುಗಿಸಿ ಕೆಳಗಿಳಿದು
ಅಲ್ಲಿಯೂ ಪೂಜೆಮಾಡುವೆನೆ ಹೊತ್ತಾಗುವುದು,
ನೀ ಹೋಗಿ ಅಲ್ಲಿ ಪೂಜೆಯ ಮುಗಿಸಿಕೊಂಡು ಬಾ,"
ಎಂದು ಹೇಳಿದರು. ಆ ಮಗ ಮಿಂದು ಮಡಿಯುಟ್ಟು
ಊರಿಗಿಳಿಯಲು ಹೊರಟ. ಆಳು ಜೊತೆಯೊಳಗಿದ್ದ.
ಇಬ್ಬರೂ ಹೊರಟು ಹತ್ತಾರು ಹೆಜ್ಜೆಯ ನಡೆದು
ಹಿಂದಿರುಗಿಬಂದು ನಿಂತರು. ಇಳಿವ ದಾರಿಯಲಿ
ಒಂದು ತಾಣದಲಿ ದಾರಿಯ ಮಧ್ಯದಲಿ ಒಂದು
ಹುಲಿ ಇತ್ತ ಮುಖಮಾಡಿ ಕುಳಿತಿಹುದು. "ಒಳ್ಳಿತು,
ಸ್ವಲ್ಪಹೊತ್ತಿಲ್ಲಿ ಇರಿ. ಅದು ಎತ್ತಲಾದರೂ
ಹೋಗುವುದು. ಮತ್ತೆ ಹೋಗುವಿರಂತೆ." ತುಸ ಹೊತ್ತು
ಕುಳಿತಿದ್ದು ಮಗ ಆಳು ಇಬ್ಬರೂ ಮತ್ತೊಮ್ಮೆ
ಹೊರಡಲನುವಾಗಿ ನಿಂತರು. ಅರ್ಚಕರು, "ಅಯ್ಯ,
ಹುಲಿ ಅಲ್ಲಿಯೇ ಇರಲು ದಾರಿಬಿಡಿಸುವೆವೆಂದು
ಗದರಿಸುವ ಬೆದರಿಸುವ ಯೋಚನೆಯ ಮಾಡದಿರಿ.
ಗುಡಿಯೊಳಗೆ ಸಿಂಹವಾಗಿರುವವನೆ ದಾರಿಯಲಿ

ಹುಲಿಯಾಗಿ ಕುಳಿತಿಹನು. ಗುಡಿಯುಲಿರೆ ಅರ್ಚನೆ,
ದಾರಿಯುಲಿ ಅಡ್ಡಬರೆ ಗಜರಿಕೆ, ಬೆದರಿಕೆ,
ಎಂದು ನಡೆವುದು ಬೇಡ, ನಿಮ್ಮಪಾಡಿಗೆ ನೀವು
ದಾರಿಯನು ಹಿಡಿದು ನಡೆಯಿರಿ," ಎಂದು ಹೇಳಿದರು.
ಅವರಿಬ್ಬರೂ ಹೊರಟು ಮತ್ತೆ ಅದೆ ತಾಣದಲಿ
ಹುಲಿ ಅಂತೆ ಕುಳಿತಿಹುದಕಂಡು ಹಿಂತಿರುಗಿದರು.
ಕೋಡ ದೇವಾಲಯುದ ಬಳಿ ಇಹುದು ಎರಡೆ ಮನೆ.
ಅರ್ಚಕರದೊಂದು. ಆಳೊಬ್ಬನದು ಎರಡನೆಯುದು.
ಆಳು ಬೆಳಗೆದ್ದು ಎಲ್ಲಿಯೊ ಹೊರಟು ಹೋಗಿಹನು.
ಮತ್ತೇನು ಮಾಡುವುದು? ದುರ್ಗವಾಸಿಗಳಿವರು
ಹುಲಿಯು ಕಾಣುವುದು ಹೊಸಮಾತಲ್ಲ. ಕಂಡವರು
ಬೇರೆ ದಾರಿಯನು ಹಿಡಿಯುವರು. ಬೇರೆಯುದಿಲ್ಲ,
ಇಲ್ಲ. ಹೋಗುವುದಿಲ್ಲ; ಪಯಣವನು ನಿಲಿಸುವರು.
ಇಂದು ಬೇರೆಯು ದಾರಿ ಇಲ್ಲ. ಪಯಣವ ನಿಲಿಸಿ
ಊರಗುಡಿಯುಲಿ ಪೂಜೆಯನು ನಿಲಿಸುವಂತಿಲ್ಲ.
ಅರ್ಚಕರು ಒಂದೆರಡು ನಿಮಿಷ ಯೋಚನೆಗೆಯ್ದು
"ಇದು ಪರೀಕ್ಷೆಯು ದಿವಸವೆಂದೆನೆಗೆ ತೋರುತಿದೆ.
ಸಿಂಹವಾಗಿಹ ನನ್ನ ದಿನಬೆಳಗು ಪೂಜಿಸುವೆ,
ಹುಲಿಯಾಗಿ ಬರಲು ಅಂಜುವೆಯು, ಎನುತಿದೆ ನನ್ನ
ಮನೆದೈವ. ಅಂಜುವುದು ತಪ್ಪು. ಅಂಜದೆ ನಡೆಯೆ
ಹುಲಿ ತಾನೆ ದಾರಿಬಿಡುವುದು. ಅಂಜಿಕೆಯುಬಿಟ್ಟು
ನಡೆದು ಹೋಗುವಿರ?" ಎಂದರು. ಇವರ ಈ ಮಾತು
ಮಗ ಆಳು ಇಬ್ಬರಲಿ ಯಾರಿಗೂ ಸರಿಯೆಂದು
ತೋರದಾಯಿತು. ಅದೆಂತಾದರೂ ಅರ್ಚಕರ

ಮನೆಯಾಕೆ, "ಏನುಮಾತಿದು? ದಾರಿಯಲಿ ಕುಳಿತ
ಹುಲಿ ನಾವು ಪೂಜೆಮಾಡಲು ಹೊರಟವರು ಎಂದು
ನಮ್ಮ ಮುಖವನು ನೋಡಿ ಪಕ್ಕಕ್ಕೆ ಸರಿಯುವುದೆ?
ಇನ್ನೆಷ್ಟುಹೊತ್ತು ನೋಡಿರಿ. ದಾರಿಬಿಡದೆ ಅದು
ಅಲ್ಲೆ ಕುಳಿತಿರಲು ಪೂಜೆಗೆ ನಾವು ಇಲ್ಲಿಂದ
ಹೋಗುವುದು ಬೇಡ ಅಷ್ಟೇ. ನಾವು ಹೋಗದಿರೆ
ಮಾವದಿರು ಇಲ್ಲೇನು ತೊಂದರೆಯೊ ಬರಲಿಲ್ಲ
ಎಂದು ಯೋಚಿಸಿ ತಾವೆ ಪೂಜೆಯನು ನಡಸುವರು,"
ಎಂದು ಹೇಳಿದರು. ಮನೆಯಾಕೆ ಹೇಳಿದ ಮಾತು
ಅರ್ಚಕರಿಗೇಕೊ ತಪ್ಪೆಂದು ಕಂಡಿತು. ಅವರು
ತಾವೆ ಕಾಣದ ಏನೊ ಒಂದು ಕಾರಣದಿಂದ
"ಈ ದಿವಸ ನಮ್ಮ ದೇವರು ನಮ್ಮ ನಂಬಿಕೆ
ಎಷ್ಟು ದೃಢ ಎಂದು ನೋಡುತಲಿಹರು. ಭಗವಂತ
ಏತಕೆ ಪರೀಕ್ಷಿಸುತಲಿಹರು? ಏಕೇ ಇರಲಿ
ಅಟವಿಯಲಿ ರಕ್ಷಿಸುವನೆಂಬ ನರಸಿಂಹನನು
ದಿನ ಬೆಳಗು ಪೂಜಿಸುವ ತಾನು ಆ ನರಸಿಂಹ
ಹುಲಿಯಾಗಿ ಬರಲು ಅಂಜುವುದು ಶುದ್ಧಕೆ ತಪ್ಪು"
ಎಂದು ನಿಶ್ಚಯಿಸಿಕೊಂಡರು. ಮಗನ ಕೂಗಿದರು.
"ಇಲ್ಲಿ ಪೂಜೆಯನು ನೀಮಾಡು, ಊರಿನ ಗುಡಿಗೆ
ನಾನು ಹೋಗುವೆನು" ಎಂದರು. ಹೆಂಡಿರಾದಾಕೆ
ಇವರೇನು ಮಾಡುವರು ಎಂದರಿತು ಬೇಡ ಎನೆ
ಎಡೆಕೊಡದೆ ಊರದಾರಿಯ ಹಿಡಿದು ನಡೆದರು.

ನೀರಿನಲಿ ವಾರಾಹ, ನೆಲದಿ ವಾಮನ ಮೂರ್ತಿ,

ಅಡವಿಯಲಿ ನರಸಿಂಹ, ಎಲ್ಲಕಡೆ ಕೇಶವ,
ಇಂತು ತನ್ನಯ ಬೇರೆಬೇರೆ ರೂಪಿಂದ ಹರಿ
ನಂಬಿದವರನು ರಕ್ಷಿಸುವನೆಂಬ ವಾಕ್ಯವನು
ಮನದಿನುರಿಸುತ ಅರ್ಚಕರು ಮುಂದೆ ಹೆಜ್ಜೆ ಇಡೆ
ಊರಿಂದ ಬಂದಿದ್ದ ಆಳು, "ಈ ಹಾರುವನ
ದಿಟ್ಟ ಹುಲಿಯನು ಕಂಡಮೇಲೆಯೂ ನಿಲ್ಲುವುದೆ?
ಹಾಳು ಹುಲಿ ಏನುಮಾಡುವುದೊ. ಜೊತೆಗಿರಬೇಕು,"
ಎಂದು ಬೇಗನೆ ಹಿಂದೆ ನಡೆದುಬಂದನು. "ತಂದೆ
ಇದು ಏನು ಸಾಹಸವ ಮಾಡ ಹೊರಟರು! ಆಯ್ತು,
ಜೊತೆಗಿರುವ," ಎಂದು ಮಗನೂ ಹಿಂದೆ ನಡೆದನು.
ಗಂಡ, ಮಗ, ಅತ್ತ ನಡೆದಿರೆ ಅರ್ಚಕರ ಪತ್ನಿ,
"ದೇವರೇ ಇವರ ಕಾಪಾಡು," ಎನ್ನುತ ಅಂತೆ
ಇವರ ಹಿಂಗಡೆ ಹೊರಟಿಹರು. ಅರ್ಚಕರಿಗೆ ಈ
ಜನ ಹಿಂದೆ ಬರುತಿರುವರೆಂಬ ಪರಿವೆಯೆ ಇಲ್ಲ.
ಅವರು ಕಣ್ಣನು ಮುಂದೆ ಇಟ್ಟು ಮನವನು ತಮ್ಮ
ಆರಾಧನೆಯ ದೇವರಲಿ ನಟ್ಟು ಹುಲಿ ಇರುವ
ಆ ಸ್ಥಳಕೆ ನೇರದಲಿ ಹೆಜ್ಜೆಯನು ಬೆಳಸಿದರು.

ಅರ್ಚಕರು ಹೇಳುವರು. "ಹುಲಿ ದೂರವಿದ್ದಂತೆ
ಮನದೊಳಿಲ್ಲಿಯೊ ಸ್ವಲ್ಪ ಭಯವಿತ್ತು. ಮುಂದರಿದು
ಹತ್ತಹತ್ತಿರಕೆ ನಡೆದಂತೆ ಅದು ಏನಾಯ್ತೊ
ನಾನೆ ಕಾಣೆನು. ನನ್ನ ಎದುರಿಗಿರುವುದು ಒಂದು
ಹುಲಿ ಎಂಬ ತಿಳಿವು ಮನದಿಂದ ಅಳಿಯಿತು. ನಮ್ಮ
ನರಸಿಂಹನೇ ಅಲ್ಲಿ ಹುಲಿಯವೇಷದಿ ಕುಳಿತು

ನನ್ನ ನೋಡುತಲಿರುವನೆಂದು ತೋರಿತು. ನಾನು
ದೇವಾಲಯದಲಿ ಪೂಜೆಯಹೊತ್ತು ಮೂರ್ತಿಯನು
ಯಾವ ಭಾವದಲಿ ಸಾರುವೆನು ಆ ಭಾವದಲಿ
ಕದಲುವೊದಲದೆ ಕುಳಿತ ಹುಲಿಯ ಬಳಿ ಸಾರಿದೆನು.
ಇನ್ನೆಂಟು ಹೆಜ್ಜೆ ಇದೆ. ಹುಲಿ ನೇರ ಎದುರಿನಲಿ
ಕುಳಿತು ನನ್ನನು ನೋಡುತಿತ್ತು. ನಾನೂ ಅಂತೆ
ಅದನು ನೇರದಲಿ ನೋಡುತ್ತ, ಎಲ ನನ್ನಪ್ಪ
ನನ್ನ ಅಂಜಿಸುವುದಕೆ ಹುಲಿಯಾಗಿ ಬರಬೇಕೆ,
ನಾವೇನು ಅಂಥ ಧೀರರು, ನೀನು ರಕ್ಷಿಸಿದೆ
ನಾವು ಉಳಿದೆವು, ನೀನು ಕೊಂದೆ ಕೊಲ್ಲುವೆನೆನಲು
ನಾವು ಸಾಯುವುದೆ, ಮತ್ತೇನು, ಏಕೆ ಪರೀಕ್ಷೆ,
ನಿನ್ನ ಪೂಜೆಯ ನಡಸುವುದಕೆ ಹೊರಟಿಹೆ ನಾನು,
ನಾ ನಿನಗೆ ಸರಿಯೆ, ನಿನಗೆನ್ನೊಡನೆ ಆಟವೆ,
ಎಂದು ಮನದಲಿ ನೆನೆಸದನು ಮೆಲ್ಲನುಸುರುತ್ತ
ತೀರ ಹತ್ತಿರಕೆ ಸಾರಿದೆನು. ಭಯವಿನಿಸಿಲ್ಲ.
ಹೇಳಿದೆನೆ. ಪೂಜೆಯಲಿ ನರಸಿಂಹಮೂರ್ತಿಯೆಡೆ
ಯಾವತೆರದಲಿ ನಡೆವೆನಾತೆರದಿ ಮುಂದಾದೆ.
ಇನ್ನೆರಡೆ ಹೆಜ್ಜೆ ಇದೆ. ಹುಲಿ ಸಾರಿ ಬಿಡದಿರಲು
ಅದರ ಪಕ್ಕದಲಿ ಮುಂದಕೆ ನಡೆಯಬೇಕು. ಹುಲಿ
ಆ ಕ್ಷಣದವರೆಗೆ ಕದಲದೆ ಕುಳಿತು ನನ್ನನೇ
ನೋಡುತಿದ್ದದು ಮೃದುಧ್ವನಿಯಿಂದ ಗೊರ್ ಎಂದು
ಒಂದು ಪಕ್ಕಕೆ ಹಾರಿ ಕಾಡಿನಲಿ ನಡೆಯಿತು.''

ಇದು ಅರ್ಚಕರ ಮಾತು. ಹಿಂದೆ ಬರುತಿದ್ದಾಳು,

ಅವನ ಹಿಂಗಡೆ ಬರುತಲಿದ್ದ ಮಗ, ಆತನಿಗು
ಹಿಂದೆ ನಡೆತರುತಿದ್ದ ಅರ್ಚಕರ ಹೆಂಡಿರು,
ತಮ್ಮ ತಮ್ಮೆಡೆಯಿಂದ ಇತ್ತಕಡೆ ನೋಡುತಿರೆ
ಇನಿತೆ ಕಂಡಿತು. ಅರ್ಚಕರು ಒಂದೆ ಧೈರ್ಯದಲಿ
ಮುಂದು ಮುಂದಕೆ ಹೆಜ್ಜೆ ಇಕ್ಕಿದರು. ಹುಲಿರಾಯ
ಕೊನೆವರೆಗೆ ಕುಳಿತಲ್ಲೆ ಕುಳಿತಿದ್ದು ಒಮ್ಮೆಗೇ
ದಾರಿಯನು ಬಿಟ್ಟುಕೊಟ್ಟನು. ಅಯ್ಯೊ ಏನಹುದೊ
ಎಂದು ಈ ಮೂವರೂ ಕಳವಳದೊಳಿಹ ವೇಳೆ
ಯಾವುದೆ ಅನರ್ಥವಾಗದೆ ಇಂತು ಅರ್ಚಕರು
ಮುಂದೆ ನಡೆದಿರೆ ಇವರ ಆಶ್ಚರ್ಯ ಸಂತೋಷ
ಮೇರೆಯನು ಮೀರಿದವು. ಅರ್ಚಕರ ಸತಿ ಮಗನ
ಕರೆದು ಕೂಗಿದರು. "ದೇವರು ನನ್ನ ಮಾಂಗಲ್ಯ
ಉಳಿಸಿದರು. ಬಾರಪ್ಪ ನಿನ್ನ ಜಾತಕ ಒಳಿತು.
ಪೂಜೆಮಾಡುವೆಯಂತೆ ಬಾ, ಹೊತ್ತುಹೋಗಿಹುದು."
ಇಂತು ಕೂಗಿದುದೆ ಕಾಲುಡುಗಿ ಅವರಿದ್ದಲ್ಲಿ
ದಾರಿಯಲಿ ಕುಳಿತುಕೊಂಡರು. ಅರ್ಚಕರ ಮಗ
ಆಳ ಕರೆದವನು, ನಾನಿನ್ನು ನಿಲುತೇನಪ್ಪ
ನೀನವರ ಜೊತೆಗೆ ನಡೆ, ಎಂದು ಹಿಂದಿರುಗಿದನು.
ತಾಯಿ ಮಗ ಮನೆಗೆ ಹೋದರು. ಕೋಡ ದೇಗುಲದ
ಪೂಜೆಯನು ನಡಸಿದರು.

ಅರ್ಚಕರು ಆ ಆಳು
ಊರಿಗಿಳಿದರು. ಆಳು ನಡೆದೆಲ್ಲ ಸಂಗತಿಯ
ಜನಕೆ ತಿಳಿಸಲು ಊರು ಊರೆ ಪೂಜೆಗೆ ಬಂದು
ಅರ್ಚಕರ ಮೆಚ್ಚಿ ಹೊಗಳಿತು. ಅಂದು ಮೊದಲಾಗಿ,

ಈ ನಮ್ಮ ಅರ್ಚಕರು ಉಳಿದೆಲ್ಲರಂತಲ್ಲ,
ನರಸಿಂಹದೇವರನು ಕಣ್ಣಾರೆ ಕಂಡವರು,
ಎಂಬ ಹೆಚ್ಚಳದ ನಂಬಿಕೆಯಿಂದ ಮನ್ನಿಸಿತು.

ಅರ್ಚಕರು ಈ ಕತೆಯ ಹೇಳುತಿಹ ರೀತಿಯಲಿ
ಕೇಳುವವರದನು ನಂಬದೆ ಬೇರೆ ಗತಿಯಿಲ್ಲ
ಎಂಬೊಂದು ತೆರದ ಸರಳತೆ ಇಹುದು. ಮುದುಕಯ್ಯ
ಕೊನೆಗೆ ಹೇಳುವರು. "ಪ್ರತ್ಯಕ್ಷಕಿಂತ ಪ್ರಮಾಣ
ನರಮನುಜನಿಗೆ ಯಾವುದಿದೆ? ಆದರೇನಂತೆ?
ಅಂದು ನನ್ನನು ಹಿಡಿದು ನಡೆಯಿಸಿದ ದೃಢಭಕ್ತಿ
ಹತ್ತು ವರ್ಷಕೆ ಒಮ್ಮೆ ದಿಕ್ಕುತೋಚದ ವೇಳೆ
ಬಂದಿಹುದು ಹೊರತಾಗಿ ನೆಲೆಯಾಗಿ ನಿಲಲಿಲ್ಲ.
ಸಂಸಾರವೇ ಹೀಗೆ." ಅದಕೆ ಪ್ರತಿ ನಮ್ಮಜ್ಜ,
"ನೆಲೆಯಾಗಿ ನಿಲ್ಲದಿರೆ ಹತ್ತು ವರ್ಷಕೆ ಒಮ್ಮೆ
ದಿಕ್ಕುತೋಚದ ವೇಳೆ ರಕ್ಷಿಸಲು ಬಹುದುಂಟೆ?
ನೆಲೆಯಾಗಿನಿಂತು ಕಷ್ಟದಲಿ ಕಾಯಲು ಬಹುದು.
ಭಕ್ತಿ ಆಪದ್ಧನ. ದಿನವರಿಯ ಬಾಳುವೆಗೆ
ಅದ ಬಳಸಿಕೊಳ್ಳಬಾರದು. ಕಷ್ಟ ಬಂದಾಗ
ಬಳಸಿಕೊಂಬುದಕೆ ಮುಟ್ಟದೆ ಅಂತೆ ಇಡಬೇಕು.
ಆ ದಿವಸ ನಿಮಗೆ ದುರ್ಗದ ನಮ್ಮ ನರಸಿಂಹ
ತುಂಬ ಜಾಗ್ರತದ್ದೈವ ಎಂದು ನಿಜವಾಯಿತೇ
ಅದೆ ನಿಮ್ಮ ಪುಣ್ಯ," ಎಂಬರು. ಅರ್ಚಕರು ಅದಕೆ,
"ನೀವು ಹೇಳುವ ಮಾತು ನಿಜ. ಉಕ್ಕುಕಂಬದಲಿ
ಕಂಡ ದೇವರು ಕಲ್ಲಿನಲಿ ಕಾಡುಮೇಡಿನಲಿ

ಎಲ್ಲಿ ಕಾಣನು? ಅನುಗ್ರಹ ಒಂದ ಮಾಡಿದನೆ
ಅವನು ಎಲ್ಲೆಡೆಯು ಜಾಗ್ರತವೆ. ಮಗು ಮಲಗಿಹುದು;
ತಾಯಿ ಅದ ತೋಳ ರಕ್ಷೆಯಲಿ ಹಿಡಿಯುತ ತಾನೂ
ಮಲಗಿಯೇ ಇರಬಹುದು; ಏನಾದರೂ ಕಷ್ಟ
ಬಂದಿತೇ, ಮಗು ನಿದ್ರೆಕೆಡಬಹುದು. ಕೆಡಲಿಲ್ಲ,
ನಿದ್ರಿಸುತಲಿರಬಹುದು; ತಾಯಿ ಮಲಗಿರಳಲ್ಲ.
ಏಳುವಳು; ಮಗುವಕಾಯುವಳು; ಭಯತೊಲಗಿರಲು
ಮತ್ತೆ ಮಲಗುವಳು. ದೇವರು ತಾಯಿ. ಜೀವ ಮಗು.
ಇದು ನಿದ್ರಿಸುವುದೆ ನಿಜ. ಅದಕೆ ಜಾಗರಣೆಯೇ
ಧರ್ಮ. ನರಸಿಂಹ ತಾಯಾಗಿ ಈ ಜೀವವನು
ಇದುವರೆಗೆ ನಡಸಿ ಕರೆತಂದಿಹನು," ಎಂಬರು.

*   *   *

ರಂಗಪ್ಪ ಕತೆಹೇಳಿ ಮುಗಿಸಿರಲು ಗೌರಮ್ಮ
ಟೀಕೆಯನು ಇಂತು ನುಡಿದರು: "ನಮ್ಮ ಸೋದರರು
ಕತೆಯ ಹೇಳುವುದರಲಿ ಅರ್ಚಕರು, ತಮ್ಮಜ್ಜ,
ಇವರು ಆಡಿದ ಮಾತಿನಲಿ ಕತೆಯ ವಿಷಯದಲಿ
ತಾವೆ ಟೀಕೆಯನು ಮಾಡಿಹರು. ಇನ್ನದ ಕುರಿತು
ನಾನು ಏನನೆ ಹೇಳುವುದಬೇಡ ಎಂದೆನಗೆ
ತೋರುತಿದೆ. ಆದರೂ ನನ್ನಪಾಲಿನ ಕೆಲಸ,
ಮಾಡುವುದು ಸರಿ, ಎಂದು ಎರಡು ಮಾತಾಡುವೆನು.
ಕತೆಯ ಅರ್ಚಕರು ದುರ್ಗದೊಳಿರುತ ತಾನೊಬ್ಬ
ಸಾಮಾನ್ಯ ಮಾನವನ ಬಾಳ ನಡಸಿದರಾಗಿ
ಅವರ ನಮ್ಮಂತ ಜನ ಬರಿಯೊಬ್ಬ ಸಾಮಾನ್ಯ
ಮನುಜನೆಂದೆಣಿಸುವೆವು. ದಿಟಕೆ ಅಂತಹ ಮನುಜ

ಕೋಟಿಯುಲಿ ಒಬ್ಬ ಇರಬಹುದೊ ಇಲ್ಲವೊ ಏನೊ.
ದೇವರಿರುವನು ಎಂಬ ಮಾತು ನಿಜದಲಿ ಅರಿತ
ಮಾತೆ ಆಗಿರಲು, ಎರಡೆರಡು ನಾಲ್ಕೆಂಬಂತೆ,
ದಿನ ದಿನದ ನಮ್ಮ ನಡತೆಯುಲಿ ಕಾಣಿಸಬೇಕು.
ನಿಜದಿ ನೋಡಿರಿ. ನಮ್ಮ ದಿನ ದಿನದ ನಡತೆಯುಲಿ
ಇರುವನೆಂಬುದಕೆ ಮಿಗಿಲಾಗಿ ಆ ವಿಷಯದಲಿ
ಸಂದೇಹವೇ ಹೆಚ್ಚು ಪ್ರಕಟವಾಗುತಲಿಹುದು.
ಎಲ್ಲಿಯೋ ಒಮ್ಮೆ, ಒಬ್ಬೊಬ್ಬರಲಿ, ಇಹನೆಂಬ
ವಿಶ್ವಾಸ ಕಾಣುವುದು. ಅಂತ ಮನುಜರುಕೂಡ
ದೇವರಿರುವನು ಎಂದು ನಂಬಿ ಹುಲಿಯೆಡೆ ನಡೆದು
ದಾರಿಯುನು ಬಿಡಿಸಿಕೊಂಬುದು ತೀರ ಅಪುರೂಪ.
ಅರ್ಚಕರ ಬಾಳು ಆ ಸ್ಥಳದಲ್ಲಿ ಜನದಲ್ಲಿ
ಒಗೆದುದಾಗಿ ಅದೆಷ್ಟು ಹಿರಿದಾಗಬಹುದಿತ್ತು
ಅಷ್ಟು ಹಿರಿದಾಗಲಿಲ್ಲೆಂದೆನಗೆ ತೋರುತಿದೆ.
ಪರ್ವತವ ತನ್ನೆಡಗೆ ಕರೆದು ನಡೆಯಿಸಿಕೊಂಬ
ಸ್ಥೈರ್ಯ ಎಂಬುದು ಆಂಗ್ಲರಲಿ ಸಾಮ್ಯ. ಈ ಕತೆಯು
ಅರ್ಚಕರ ಆತ್ಮವಿಶ್ವಾಸ ಈ ರೀತಿಯುದು.
ಎನಿತು ಮಂದಿಯೊ ಇಂತವರು ಇಂತು ಎಲ್ಲಿಯೋ
ಬಾಳಿ ಮರೆಯುಲಿ ಮುಗಿದವರು! ಅದೆಂತೇ ಇರಲಿ
ಮನುಜನೆದೆ ಇಂತ ಕೆಚ್ಚನು ಕಾಣಬಲ್ಲುದೇ
ಅದೆ ಅವನ ಕುಲದ ಮುಂದಿನ ಭಾಗ್ಯ ಹಿರಿದೆಂದು
ಸೂಚಿಸುತಲಿದೆ. ಯಾರು ತನ್ನ ನಂಬಿಕೆಗಾಗಿ
ಜೀವವನೆ ತೆರಲು ಮುಂಬರಿವನೋ ಅವನಿಂದ
ಮನುಜಕುಲ ಉದ್ಧಾರವಾಗುವುದು. ಅಸ್ಪಷ್ಟ

ಅವ್ಯಕ್ತ, ಉಳಿದ ಮನಸಿಗೆ ಅನಿಶ್ಚಿತ, ಎಂಬ ತತ್ತ್ವ ಇಂತವರ ಮನಸಿಗೆ, ಕಲ್ಲು ಈ ಕೈಗೆ ಎಂತತಂತೆ, ಸುಸ್ಪಷ್ಟ ಸುವ್ಯಕ್ತ ಸಂಗ್ರಾಹ್ಯ ಆಗಿ ತುಡುಕುವರೆ ದೊರೆಯುವುದು. ಸೋದರರೊರೆದ ಕತೆಯಿಂದ ನನಗೆ ಬಹು ಸಂತೋಷವಾಗಿಹುದು.''

ಟೀಕೆ ಮುಗಿದಿರಲು ರಾಮಣ್ಣ, ''ನಾಳೆಯ ದಿವಸ ಶರ್ಮನದು ಒಂದು ಕತೆ, ನಾಗರಾಜನದೊಂದು, ಈ ಸಲಕೆ ಇವು ಕೊನೆಯ ಕತೆ,'' ಎಂದು ಹೇಳಿದನು.

ಶರ್ಮ ಒರೆದುದು ಅವನದೇ ಸ್ವಂತ ಅನುಭವದ ವೀರ ಲಕ್ಷ್ಮಮ್ಮ ಎನ್ನುವ ಚರಿತೆ. ಮುಂದೆ ಇದೆ.

# ವೀರ ಲಕ್ಷ್ಮಮ್ಮ

ಈಗ ಬಹು ವರ್ಷಗಳ ಹಿಂದೆ ಕೆಲದಿನ ನಾನು
ಸಂತವೇರಿಯುಲಿ ಕೆಲಸದಲಿದ್ದೆ. ಈ ಊರು
ಚಿಕ್ಕಮಗಳೂರಿಗೆ ತರೀಕೆರೆಗೆ ಮಧ್ಯದಲಿ
ಮಾರ್ಗದೊತ್ತಿನಲಿ ಇದೆ. ಬಹಳ ಹಿರಿದೇನಲ್ಲ.
ಅಲ್ಲೆ ಹತ್ತಿರಕೆ ಚಂದ್ರದ್ರೋಣಪರ್ವತದ
ಶಿಖರಗಳು ಕಾಣುತಿರುವುವು. ಗಿರಿಯನಾಶ್ರಯಿಸಿ
ಹೊರಗೆ ನಿಂತಿರುವ ಪರಿವಾರದಂದದ ಹಲವು
ಕಿರಿಯ ಮಲೆ ಇಹವು. ಅವುಗಳಲಿ ಒಂದರ ಮೇಲೆ
ಸಂತವೇರಿಯ ಊರು ಬೆಳೆದಿಹುದು. ಸುತ್ತೆಲ್ಲ
ಗುಡ್ಡಕಾಡಿನ ಭೂಮಿ. ಹುಲಿ ಚಿರತೆ ಹೆಬ್ಬಾವು
ನರಿ ಕಾಡುಹಂದಿ ಓತೀಕೇತ ಮುಂಗಸಿಗೆ
ಸರಿ ಹೊರತು ನರಮನುಷ್ಯನಿಗೆ ಇದು ನೆಲವಲ್ಲ.
ಆದರೇನಂತೆ, ಸಂಬಳ ತೆಗೆದುಕೊಂಬವನು
ಸಂಬಳವ ಕೊಡುವವನು ಎಲ್ಲಿಗೆಸೆದರೆ ಅಲ್ಲಿ
ಹೋಗಿ ಬಿದ್ದಿರಬೇಕು. ಆ ಸಾರಿ ಎಸೆದಾಗ
ನಾನು ಬಿದ್ದುದು ಸಂತವೇರಿಯಲಿ. ಬಿದ್ದವನು
ಮೊದಲು ಚಂದ್ರದ್ರೋಣ ಗಿರಿ ಶಿಖರಗಳ ನೋಡಿ
ಮರುಳುಗೊಂಡೆನು. ಅದೇನೂ ಬಾಳಿಕೆಗೆ ಬರುವ
ಸಂತೋಷವಲ್ಲ; ಬೇಗನೆ ಚಿಂದಿಯಾಯಿತು.
ಮನೆ ಚೆನ್ನವಿಲ್ಲ; ನೀರಿಗೆ ಕಷ್ಟವಿಲ್ಲ ಸರಿ,
ಆದರೂ ಅದು ಸಿಕ್ಕಿದಂತೆ ಕುಡಿಯುವುದಲ್ಲ.
ಸೌದೆಯೇನೋ ಸುಲಭ. ಆದರದರಲಿ ಉಳಿದ

ಮೂರು ಕಾಸಿಗೆ ಬೇರೆ ಕಾಸ ಜೋಡಿಸಿಕೊಟ್ಟು
ಅಕ್ಕಿಬೇಳೆಯನು ಗಾಜಿನ ದೀಪ ಎಣ್ಣೆಯನು
ಕೊಂಡು ಬದುಕಲು ಬಹುದು. ಬೇರೆಯಾವುದೆ ವಸ್ತು
ದೊರಕೀತು; ಹಾಲು ದೊರಕದು. ಇಂತು ಊರಾದ
ಸಂತವೇರಿಯಲಿ ನನ್ನನುಭವಕೆ ಬಂದೊಂದು
ಸಂಗತಿಯನರುಹುವೆನು.
                    ಹಳ್ಳಿಯಲಿ ಹಾಲಿಲ್ಲ
ಎಂದು ಹೇಳಿದೆನಲ್ಲ. ಹಾಲು ಇಲ್ಲದಮೇಲೆ
ಮೊಸರೆ ಮಜ್ಜಿಗೆಯೆ ಬೆಣ್ಣೆಯ ಹೆಸರೆ? ಎಲ್ಲಕೂ
ಶ್ರೀರಾಮ ರಕ್ಷೆ! ಮನೆಯಲಿ ಎಳೆಯ ಮಕ್ಕಳಿವೆ.
ಮನೆಯವರು ಮೂರುದಿನ ನೀರುಹಾಲನು ಕೊಂಡು
ಸಾಕಾಗಿ ಒಂದು ಎಮ್ಮೆಯನು ಕಟ್ಟುವುದೆಂದು
ನಿಶ್ಚಯಿಸಿದರು. ಮೂರು ನಾಲ್ಕು ತಿಂಗಳ ಒಂದು
ಕರು, ಅದರ ತಾಯಿ. ಎರಡೂ ಮನೆಗೆ ಬಂದವು.
ತಾಯಿ ಒಳ್ಳೆಯ ಹರೆಯದೆಮ್ಮೆ. ಕಣ್ಣಿನ ಹೊಳಪು
ನೋಡುವಿರ ಬಹುಚೆನ್ನು. ಮೆಯ್ ತುಂಬ ದೃಢ. ಕರುವ
ನೆಕ್ಕಿ ಮುದ್ದಿಸುವ ಆ ವಾತ್ಸಲ್ಯ ಎನಿತು ಅನು!
ಕರು ಕುಡಿಯಬಹುದಾದ ಹಾಲು ಅನಿತನು ಅದಕೆ
ಕುಡಿಸಿ ಉಳಿದುದನೆ ಕರೆಯುವೆವು. ಮನೆಗೆ ಸಮೃದ್ಧಿ
ಹಾಲು ಮೊಸರಾಗುವುದು. ತುಂಬ ಒಳ್ಳೆಯ ಎಮ್ಮೆ
ಎಂದು ಮನೆಯವರು ಅದ ಪ್ರೀತಿಗೌರವದಿಂದ
ಲಕ್ಷ್ಮಮ್ಮ ಎಂದು ಕರೆದರು.
                    ಊರ ಎಲ್ಲ ದನ
ಕಾಡಿನಲಿ ಮೇಯಹೋಗುವುದಲ್ಲ! ಲಕ್ಷ್ಮಮ್ಮ

ಜೊತೆಗೆ ಹೋಗುವುದು. ಕರು ಹೋಗುವುದು ಬೇಡೆಂದು ನಾನು: ಮನೆಯವರು ಅದು ತಾಯ ಜೊತೆಯಲಿ ಹೋಗಿ ನಡೆದಾಡಿ ಬರಲಿ ಎಂಬರು. ಅವರ ಮಾತಂತೆ ಕರು ತಾಯ ಕೂಡ ಮಂದೆಯ ಜೊತೆಗೆ ಹೋಗುವುದು. ಅವನು ಕಳುಹುತ ಮನೆಯವರು ಮಂದೆ ಹೈದನಿಗೆ, "ಲೋ, ಬೀಮುಲ್ಯಾ, ಜೋಕೆ, ಕರು ಮಂದೆಯನು ಬಿಟ್ಟು ಎತ್ತಲಾದರು ದೂರ ಹೋದೀತು," ಎನ್ನುವರು. ಅವನು, "ಉಂಟೀ ತಾಯಿ, ಹಂಗೆಲ್ಲ ಬಿಟ್ಟೇನ," ಎನ್ನುವನು. ಇಷ್ಟೇನೊ ನಿಜ. ಹೊಟ್ಟೆತುಂಬಿದ್ದ ಕರು ತಾಯ ಜೊತೆಗೆ ನಡೆಯುತಲಿರಲು ಆ ತಾಯಿ ಸಂಸಾರಿ ಹೆಣ್ಣುಮಗುವಿನ ರೀತಿ ತನ್ನೊಂದು ಗಾಂಭೀರ್ಯದಿಂದ ಹೆಜ್ಜೆಯನಿಡುತ ನಡೆಯುವುದು ನೋಡುವರಿ ಚೆನ್ನವಾಗಿಹುದು.

ತಿಂಗಳು ದಿವಸ ತಾಯಿ ಕರು ದನದ ಮಂದೆಯ ಜೊತೆಗೆ ಹೋಗಿದ್ದು ಸಂಜೆಯಲಿ ಮನೆಗೆ ಬಂದವು. ಹೈದ ಬೀಮುಲ್ಯಾ ಹಸು ಎಮ್ಮೆ ಕರು ಎಲ್ಲ ಕೂಡಿರುವ ಮಂದೆಯನು ಊರ ಮಾಳಕೆ ಕರೆದು ತಂದುದೇ ತಡ ನಮ್ಮ ಲಕ್ಷ್ಮಮ್ಮ ತಾನೆ ಮನೆಯನು ಬಂದು ಸೇರುವುದು; ಕೊಟ್ಟಗೆಯ ಹೊಕ್ಕು ಗೂತ್ತಿನ ಹತ್ತಿರವೆ ನಿಂತು, ಯಜಮಾನಿಯನು, ಅಕ್ಕ ಬಾ ಹಾಲಕರೆದುಕೊ, ಎಂದು ಕರೆವಂತೆ ನೋಡುವುದು. ಮನೆಯವರು, "ಜನ ಎಮ್ಮೆಯನು ಬುದ್ಧಿ ಇಲ್ಲದ ಪ್ರಾಣಿ ಎನ್ನುವರು. ಲಕ್ಷ್ಮಮ್ಮ ಎಮ್ಮೆಯೊಡಲಲಿ ಇಹುದು ಹೊರತಾಗಿ

ಬುದ್ಧಿಯಲಿ ನಮಗಿಂತ ಕಡಮೆಯೇನೂ ಅಲ್ಲ,''
ಎನ್ನುವರು. ನಾನು "ಆ? ಏನೆಂದೆ? ನಿನಗಿಂತ
ಎಂದು ಹೇಳಿದೆಯೊ? ನನಗಿಂತ ಎಂದೆಯೊ?'' ಎಂದು
ಒಮ್ಮೆ ಕೇಳಿದೆನು. ಅವಕವರು, "ಎಷ್ಟಾದರೂ
ಹೆಣ್ಣು ಸಿರು. ನನಗಿಂತ ಕಡಮೆಯುಲ್ಲೆನ್ನುವುದೆ
ಸರಿಯಾದ ಮಾತು. ಗಂಡಾಗಿತ್ತೆ ಅದ ನಿಮಗೆ
ಕಡಮೆಯುಲ್ಲೆನ್ನ ಬಹುದಾಗಿತ್ತು,'' ಎಂದರು.

ಇಂತಿರುತ ಒಂದು ದಿನ ಸಂಜೆಯಲಿ ಲಕ್ಷ್ಮಮ್ಮ
ವಾಡಿಕೆಯುವೇಳೆ ಕೊಟ್ಟಿಗೆಗೆ ಬರಲಿಲ್ಲ. ಇದು
ಏಕೆ ಎಂದುದೆ ನಮ್ಮ ಮನೆಯಾಕೆ ನೆರೆಯು ದನ
ಬಂದವೇ ಎಂದು ನೋಡಿದರು. ಅವು ಬಂದಿಹವು..
ಬೀಮುಲ್ಯಾ ಎಲ್ಲಿ? ಬಂದನೆ ಎಂದು ನೋಡಿದರೆ,
ಅವನು ದನವಿನ ಮಂದೆಯನು ಊರಬಳಿ ತಂದು
ಮತ್ತೆ ಕಾಡಿಗೆ ಹೋದನೆಂದು ಜನ ಹೇಳಿದರು.
ಉಳಿದೆಲ್ಲ ಮನೆಯ ದನ ಬಂದು ಲಕ್ಷ್ಮಮ್ಮ ಕರು
ಇವು ಎರಡೆ ಬರಲಿಲ್ಲ. ಬೀಮುಲ್ಯಾ ಅವಕಾಗಿ
ಮತ್ತೆ ಕಾಡಿಗೆ ಹೋದನೋ? ಏನು ಸಂಗತಿಯೊ?
ತಿಳಿಸಿ ಆಮೇಲೆ ಹೋಗಿದ್ದರಾಗದೆ? ನಮ್ಮ
ಮನೆಯಾಕೆ ತುಂಬ ಕಳವಳದಿಂದ ಮಕ್ಕಳನು
ನನ್ನೆಡೆಗೆ ಕಳುಹಿದರು. ನಾನು ಮನೆಯನು ಸಾರಿ,
ನೆರೆಮನೆಯ ಜನರೊಡನೆ ಮಾತಾಡಿ, ಲಕ್ಷ್ಮಮ್ಮ,
ಜೊತೆಗೆ ಕರು, ಕಾಡಿನಲಿ ನಿಂತುಬಿಟ್ಟಿರಬೇಕು
ಎಂದು ನಿಶ್ಚಯಿಸಿಕೊಂಡೆನು. ಮುಂದೆ? ಬೀಮುಲ್ಯಾ

ಬಂದನೇ ಅವನ ಜೊತೆಯಲಿ ಅಂದು ದನವ ಮೇಯ್ದು
ಕಾಡಿನೆಡೆಹೋಗಿ ಕರು ತಾಯಿ ಎಲ್ಲಿಹವೆಂದು
ಹುಡುಕಾಡಬಹುದು. ಅವನೇ ಇಲ್ಲ. ಮೇಯ್ದುಕಡೆ
ಬಿಟ್ಟು ಬೇರೆಲ್ಲಿಯೋ ಹುಡುಕಿದರೆ ಫಲವೇನು?
ಬೀಮುಲ್ಯಾ ಬರಲೆಂದು ಅಂತೆನಿಂತೆನು.

ಒಂದು
ಗಂಟೆ ಕಾದೆವು. ಒಂದು ಗಂಟೆ ಎಷ್ಟೋ ಹೊತ್ತು
ಎಂಬಂತೆ ಜಿನುಗಿ ಕಳೆಯಿತು. ನಮ್ಮ ಮನೆಯಾಕೆ,
"ಯಾಕಾದರೂ ನಾನು ಕರುವನೂ ಕಳುಹಿದೆನೊ?
ಬಡಪಾಯಿ ಏನಾಯಿತೋ, ಎತ್ತ ಹೋಯಿತೋ,
ಅದು ಎಲ್ಲಿಯೋ ಹೋಯಿತೆಂದೆ ಲಕ್ಷ್ಮಮ್ಮನೂ
ಜೊತೆಗೆ ಹೋಗಿರಬೇಕು. ಬೀಮುಲ್ಯಾ ಎರಡನೂ
ಹೊಡೆದು ತಂದನೆ ಸರಿ; ಅದಿಲ್ಲ ಮುಂದೇನು ಗತಿ?
ರಾತ್ರಿಯಲಿ ಕಾಡಿನಲಿ ದನವ ಹುಡುಕುವುದುಂಟೆ?
ಲಕ್ಷ್ಮಮ್ಮ ಕರು ಈಗ ಬಂದವೇ ಬಂದಂತೆ.
ಬರಲಿಲ್ಲ, ನಮ್ಮ ಋಣವನು ಮುಗಿಸಿ ತಾಯಿಮಗು
ಕಾಡ ಋಣವನು ಮುಗಿಸಹೋದಂತೆ," ಎಂದರು.
ಅವರ ಕಣ್ಣಲಿ ನೀರು. ನನಗಾದರೂ ಬಹಳ
ಧೈರ್ಯವಿರಲಿಲ್ಲ ಬಿಡಿ. ಆದರೂ, ಇವರೊಡನೆ
ಮಾತನಾಡಿದೆನೆ ಸುಮ್ಮನೆ ಗೋಳು ಬೆಳೆಯುವುದು,
ಎಂದವನೆ ನಾನು ಯಾರೋ ಒಬ್ಬ ಇಬ್ಬರನು
ಕರೆದು ಲಾಂದ್ರಗಳ ತರಿಸಿದೆನು; ಪೋಲೀಸಿನಲಿ
ಕೆಲಸದಲಿ ಇದ್ದ ಒಬ್ಬರನು ಕೋವಿ ಸಮೇತ
ಜೊತೆಗೆ ಬರುವಂತೆ ಏರ್ಪಡಿಸಿದೆನು.

ಬೀಮುಲ್ಯಾ
ಜಿನುಗಿ ಹರಿದಾ ಒಂದು ಗಂಟೆ ಮುಗಿದಿರೆ ಪೆಚ್ಚು
ಮುಖದಿಂದ ಹಿಂದಿರುಗಿದನು. ನಮ್ಮ ಮನೆಯವಾಕೆ
ಅವನ ಛೀಗುಟ್ಟಿ ನೋಡಿದರು. ನಾನಾಕೆಯನು
ತಡೆದು ನಿಲಿಸಿದೆನು. "ಈಗಾಗಲೇ ಹುಡುಗನಿಗೆ
ಮುಖ ಕೆಟ್ಟಿ ಇದೆ. ಅದನು ಮತ್ತಷ್ಟು ಕೆಡಿಸಿದೆವೆ
ದನವ ಹುಡುಕುವ ಕೆಲಸ ಕೆಡಬಹುದು." ಅಹುದೆಂದು
ಆಕೆ ಬಾಯ್ಮುಚ್ಚಿಕೊಂಡರು. ಲಾಂಪ್ರ ಬಡಿಗೆಗಳ
ಹಿಡಿದು ನಾಲ್ವರು ನಾವು. ಪೋಲೀಸ ಗೆಳೆಯರು
ಕೋವಿಯನು ಹಿಡಿದು, ಐವರು ಸಂಜೆ ಕವಿಯುತಿರೆ
ಕರು ಎಮ್ಮೆಗಳ ಕಾಡಿನಲಿ ಹುಡುಕ ಹೊರಟೆವು.
ಹೊರಡುವಂದೇ ನಮಗೆ, ಇದರಿಂದ ಫಲವಿಲ್ಲ,
ಎಂಬ ಸಂದೇಹವಿದ್ದಿತು. ಬೀಮುಲ್ಯಾ ಹುಡುಗ;
ನಾನು ಕಾಡನು ಕಂಡು ಪಳಗಿದವನೇನಲ್ಲ;
ಉಳಿದವರು ವರ್ಷದಲಿ ಒಂದೆರಡು ಸಲ ಇಂತು
ದನ ಕಳೆದು ಹೋದುದನು ನೋಡಿ ಪಳಗಿದ್ದವರು.
ದನ ಮೇಯ್ವ ಮಾಳವನು ಸೇರಿದೆವು. ಸುತ್ತಿನಲಿ
ನೋಡಿದೆವು. ಯಾವುದೋ ಕೊರಳಗಂಟೆಯ ಶಬ್ದ
ಕೇಳಿದಂತಾಗಿ ಆಕಡೆ ಹೋಗತೊಡಗಿದೆವು.
ಮತ್ತೆ ಒಬ್ಬರು, "ನಮ್ಮ ಬಳಿ ಒಂದೆ ಕೋವಿ ಇದೆ.
ಹುಲಿ ಎಲ್ಲಿ ನಮ್ಮೆದುರು ಕಂಡರೂ ಕಂಡಿತೆ.
ಸುತ್ತಿನಲಿ ಎಮ್ಮೆ ಇರುವಂತೆ ಕಾಣಿಸಲಿಲ್ಲ.
ಕಾಡಿನೊಳಕಡೆ ನಡೆದು ಹೋಗಿದೆಯೊ, ಇತ್ತಕಡೆ
ಅತ್ತಕಡೆ ಸುತ್ತಿ ಮನೆಯನೆ ಹೋಗಿ ಸೇರಿದೆಯೊ,

ಹೇಳುವಂತಿಲ್ಲ. ನಾವಿಲ್ಲಿ ಸುಮ್ಮನೆ ಅಲೆದು
ಫಲವಿಲ್ಲ. ನಮಗೆ ತೊಂದರೆ; ದನಕೆ ಸುಖವಿಲ್ಲ.
ಮನೆಯಲ್ಲಿ ಹೆಂಗಸರು ನಾವು ಏನಾದೆವೋ
ಎಂದು ಚಿಂತಿಸುತಿಹರು," ಎಂದು ತಡೆಹಾಕಿದರು.
ಹೋಗಿಹುದು ನನ್ನದನ. ನನಗಾಗಿ ಈ ಜನರು
ಎಷ್ಟು ಮಟ್ಟಿನ ಕಷ್ಟಪಡಬಹುದು? ಇನ್ನಷ್ಟು
ಹುಡುಕುವುದು ಹುಡುಕದಿರುವುದು ಅವರ ಇಷ್ಟ ಸರಿ.
ಒತ್ತಾಯಮಾಡಿ ನುಡಿಯಲು ನನಗೆ ಮನವಿಲ್ಲ.
ಒಬ್ಬನೇ ಹುಡುಕುವೆನೆ ಅದು ಸಾಧ್ಯವೇ ಅಲ್ಲ.
ಇಂತಾಗಿ ನಾವು ಅಲ್ಲಲ್ಲಿ ಎರಡರೆಗಳಿಗೆ
ಸುತ್ತಾಡಿ ಎಂತು ಹೋದೆವು ಅಂತೆ ಹಿಂದಿರುಗಿ
ಊರ ಸೇರಿದೆವು.

ರಾತ್ರಿಯ ನಮ್ಮ ದುಃಖವನು
ಎಂತು ವರ್ಣಿಸಲಿ? ಮಕ್ಕಳು ಊಟ ಒಲ್ಲವು
ಸಂಜೆಯಲಿ ಮತ್ತೆ ಹಾಲನು ಕೊಂಡು, ಎಲ್ಲರಿಗು
ಲಕ್ಷ್ಮಮ್ಮ ಕರು ಕಳೆದು ಹೋದುದರ ಕಟಿ ತೀರ
ಮನವ ಮುಟ್ಟಿತು. ನಮ್ಮ ಮನೆಯಾಕೆ ಮಕ್ಕಳನು
ಎಂತೊ ಒಪ್ಪಿಸಿ ಸ್ವಲ್ಪ ಅನ್ನವನು ತಿನಿಸಿದರು.
ನನಗಾಗಿ ಅವರು, ಅವರನು ಒಪ್ಪಿಸಲು ನಾನು,
ಇನಿತನಿತು ಊಟಮಾಡುವ ನಟನೆ ಮುಗಿಸಿದೆವು.
ಕಾಡಿನಲಿ ಹುಲಿಯ ಬಾಯಿಗೆ ಸಿಕ್ಕಿ ಸತ್ತಿರುವ
ಲಕ್ಷ್ಮಮ್ಮ ಕರು ಎರಡನೂ, ನಾನು ನನ್ನಂತೆ,
ಅವರು ಅವರಂತೆ, ಪ್ರತ್ಯಕ್ಷದಲಿ ಕಾಣುತ್ತ

ಮನದ ಚಿಂತೆಯನು ಮಗ್ಗುಲ ಹಾಸಿಗೆಯ ಮಾಡಿ
ಮಲಗಿದೆವು.
ನಿದ್ರೆ ಬಾರದು. ಬಂದ ಅರೆನಿದ್ದೆ
ಬರಿಯ ಕಳವಳದ ಮಂಪರ. ಬೆಳಕು ಕಂಡೀತೆ
ಎಂದು ಎರಡೂ ಜೀವ ಕಾದಿದ್ದು ಇಬ್ಬರೂ
ಇರುಳು ಕಳೆದಂತೆ ಎದ್ದೆವು. ಒಂದು ಮಾತಿಲ್ಲ.
ನಾನು ಆಳನು ಕರೆದು ಕೂಗಿ ಅವನನು ಜೊತೆಗೆ
ಬರಹೇಳಿ ಮುಂದೆ ಹೊರಟೆನು.
ರಾತ್ರಿ ಹುಡುಕಿದೆವೆ,
ಅಲ್ಲಿ ನಾವಿಬ್ಬರೂ ಮತ್ತೊಮ್ಮೆ ಹುಡುಕಿದೆವು.
ಅಲ್ಲಿಂದ ಮುಂದೆ ಹೋದೆವು; ನಾಲ್ಕುಕಡೆ ಸುತ್ತಿ
ಎಲ್ಲೆಲ್ಲೊ ಇಣಿಕಿದೆವು. ಕೊರಳಗಂಟೆಯ ಶಬ್ದ
ಕೇಳಿದಂತಾಗಿ ನಾನೊಮ್ಮೆ, "ಗಂಟೆಯ ಶಬ್ದ,"
ಎಂದು ಆತುರದಿಂದ ಕೂಗಿದೆನು. ಆಳುಮಗ
ನನ್ನಕಡೆ, ಪಾಪ ಎಂದಿಷ್ಟು, ಎಂತಹ ದಡ್ಡ
ಎಂದಿಷ್ಟು, ಬೆರಸಿನೋಡಿದನು. ಅವನೇನಂತೆ?
ನಾನೆ ಬಲ್ಲೆನು: ರಾತ್ರಿಯೆಲ್ಲ ಈ ಕಾಡಿನಲಿ
ಹುಲಿಯ ಶತಪಥದ ದಾರಿಯಲಿ ಸಿಕ್ಕಿದ ಎಮ್ಮೆ
ಬೆಳಕುಹರಿಯುವವರೆಗೆ ಬದುಕಿರುವುದೆ? ಅಸಾಧ್ಯ.
ಆದರೂ ಭ್ರಮೆ, ಆಸೆ. ಆಸೆಯೇ ಭ್ರಮೆಯಾಗಿ
ನಮ್ಮ ಎಲ್ಲರನು ಕಾಡುವುದು. ಇದು ಭ್ರಮೆಯೆ ಸರಿ,
ಎಂದು ಆಕ್ಷಣ ನಾನೆ ಅರಿತು, ಒಳ್ಳಿತು, ಹೋಗಿ
ನೋಡೋಣ, ಇಷ್ಟುಸುತ್ತಿದೆವು, ಇನ್ನೊಂದಿಷ್ಟು
ಸುತ್ತಿಕೆಟ್ಟುದು ಏನು, ಎಂದತ್ತನಡೆದೆನು.

## ವೀರ ಲಕ್ಷ್ಮ್ಮ

ಹೊದರಾಗಿ ಬೆಳೆದ ಕಾಡಿನ ಒಂದು ಪಟ್ಟಿಯನು
ದಾಟ ನಾನು, ಆಳು, ಪಟ್ಟಿಯಾಚೆಯ ಒಂದು
ಬಯಲ ಸೇರಿದೆವು. ಎದುರಲಿ ಒಂದು ಎಮ್ಮೆ ಇದೆ.
ಕನಸೊ ಎನಿಸಿತು ನನಗೆ. ಇಲ್ಲ ಎಮ್ಮೆಯೆ. ಅಲ್ಲೆ
ನೆಲದ ಮೇಲೆ ಅದೇನೊ ಕರುವಂತೆ ಮಲಗಿಹುದು.
ಅಷ್ಟು ಹೊತ್ತಿಗೆ ಅತ್ತಮುಖವಾಡಿ ನಿಂತಿದ್ದ
ಎಮ್ಮೆ ನಮ್ಮತ್ತ ತಿರುಗಿತು. ನಮ್ಮ ಲಕ್ಷ್ಮಮ್ಮ!
ಲಕ್ಷ್ಮಮ್ಮ ಎಂದು ಕೂಗುತ ನಾನು ಓಡಿದೆನು.
ಆಳು ಬೆಪ್ಪಾಗಿ ಹಿಂದೆಯೆ ಓಡಿ ಬಂದನು.
ಲಕ್ಷ್ಮಮ್ಮ ಮೊದಲು ದುರುಗುಟ್ಟಿ ನನ್ನನು ನೋಡಿ
ಗುರುತುಹಿಡಿಯಿತು. ನಾನು ಆ ಮೊದಲು ಎಮ್ಮೆಯನು
ಬಹಳ ಹಿಡಿದಾಡಿ ನಡೆಸಿರಲಿಲ್ಲ. ಆ ದಿವಸ
ಶುಭ ಲಗ್ನದಲಿ ಅದನು ಪ್ರೀತಿಯಲಿ ಮುಟ್ಟಿದೆನು.
ಎಮ್ಮೆಯಾದರೆ ಏನು, ನನ್ನಂತೆಯೇ ಒಂದು
ಜೀವ, ಎಂಬುದ ತಿಳಿದು ಸುಖದಿಂದ ಬೀಗಿದೆನು.

ನಮ್ಮ ಕಂಡುದು ಎಮ್ಮೆಗೂ ಬಹಳ ಸಂತೋಷ.
ಬಹುದೊಡ್ಡ ಜೀವ; ಕೊಂಚಕೆ ತನ್ನ ಆಂತರ್ಯ
ಇಂತೆಂದು ತೆರೆದು ತೋರುವುದಲ್ಲ. ನಾನದನು
ಮುಟ್ಟಿದೆನೆ ಮುಸುಡಿಯನು ನನ್ನತ್ತ ಚಾಚಿತು.
ಅದರ ಮೈಮೇಲೆಲ್ಲ ಗಾಯ; ಕೋಡಿನ ಕೊನೆಗೆ
ರಕ್ತ ಕೆನೆಕಟ್ಟಿಹುದು. ಕರು ಅಲ್ಲಿ ಮಲಗಿರಲು,
ಸುತ್ತ ಹತ್ತಡಿಯ ದೂರಕೆ ನೆಲದ ಮೇಲೆಲ್ಲ
ಎಮ್ಮೆ ಓಡಿರುವ ಗುರುತಿದೆ. ಅಲ್ಲೆ ಸುತ್ತಲೂ

ಹುಲಿಯ ಹೆಜ್ಜೆಯ ಗುರುತು. ಹುಲಿ ಸುತ್ತಲೂ ನಡೆದು,
ಎಮ್ಮೆ ಉದ್ದಕೆ ಅದನು ತಡೆದು ಕಾದಿರಬೇಕು.
ಆಳು ಇದನೆಲ್ಲ ನೋಡಿದನು. "ದಣಿಗಳೆ, ರಾತ್ರಿ
ಹುಲಿ ಒಂದು ಬಂದಿತ್ತು. ಚಿಕ್ಕಹುಲಿ ಇರಬೇಕು.
ಎಮ್ಮೆ ಒಂದೇ ಇತ್ತೆ ಇದನೆ ಬಡಿಯುತಲಿತ್ತು.
ಜೊತೆಗೆ ಕರು ಇದೆ. ಕಿರಿಯ ರಾಸ ಕೊಲ್ಲುವ ಎಂದು
ಹುಲಿ ಅದರ ಮೇಲೆ ಎರಗಿದೆ. ತಾಯಿ ಒಬ್ಬೊಂಟಿ
ಸಿಕ್ಕಿತ್ತೆ, ಹುಲಿ ಬಂದಿತೇ ಎಂಬ ಅಂಜಿಕೆಗೆ
ಅರ್ಧ ಸಾಯುತಲಿತ್ತು. ಜೊತೆಗೆ ಕರು ಇದೆ. ತಾಯಿ
ಭಯವ ಬಿಟ್ಟಿತು; ಹುಲಿಯ ಮೇಲೆ ಬಿದ್ದಿತು. ಕೋಡು
ಹುಲಿಯ ತಾಗಿರಬೇಕು; ರಕ್ತವಾಗಿದೆ ನೋಡಿ.
ಅದು ಎಷ್ಟು ಹೊತ್ತು ಕಾದಿತೊ, ಕೊನೆಗೆ ಹುಲಿ ಸೋತು,
ಮತ್ತೆ ಬರುವ, ಎಂದು ಓಡಿಹೋಗಿರಬೇಕು,"
ಎಂದು ಹೇಳಿದನು. ಎಮ್ಮೆಯ ಕೋಡ ರಕ್ತದಲಿ
ಹುಲಿಯೊಡಲ ರೋಮ ಅಂಟಿರುವುದನು ತೋರಿದನು.

ಹೇಳಿದರೆ ನಂಬಲಾಗದು ಅಂಥ ಸತ್ಯವಿದು.
ಲಕ್ಷ್ಮಮ್ಮ ರಾತ್ರಿ ಕಾಡಿನಲಿ ಕರುವಿನ ಜೊತೆಗೆ
ಒಬ್ಬೊಂಟಿಯಾಗಿ ಸಿಕ್ಕಿದ್ದು ತಮ್ಮನು ಕೆಣಕಿ
ಬಂದ ಹುಲಿ ಒಂದ ಎದುರಿಸಿ ಎಳೆಯನನು ಉಳಿಸಿ
ಹಗೆಯ ಸೋಲಿಸಿ ಓಡಿಸಿದ್ದಿತು. ಎಮ್ಮೆ ಸರಿ,
ಆದರೂ ತಾಯಿ. ಆ ತಾಯಿ, ತನ್ನೆಳೆಯನನು
ಉಳಿಸಿಕೊಂಬುದಕೆ ಬೇರೆಯ ದಾರಿಯಿಲ್ಲದಿರೆ,
ತನ್ನೆದೆಯ ಕಲ್ಲುಮಾಡಿತು, ಸಹಜವೆನೆ ಬರದ

ದಿಟ್ಟತನದಿಂದ ಹುಲಿಯನು ಸೋಲಿಸಿತು. ಅಂತೆ
ನಡೆದಸಂಗತಿ ಇವನು ಊಹಿಸಿದತೆರ ಇರಲು
ತಾಯಿ ಕರುವನು ರಕ್ಷಿಸಿತು ಎಂತು ಅಂತೆಸರಿ
ಕರು ಅಲ್ಲಿ ಇದ್ದು ತಾಯನು ರಕ್ಷಿಸಿತು.
ಆಳು
ಕರುವನೆಬ್ಬಿಸಿ ತಂದು ತಾಯಬಳಿ ನಿಲಿಸಿದನು.
ಆವ ನಾವು ಜೊತೆಗೆ ಊರಿಗೆ ಕರೆದು ತಂದೆವು.
ರಾತ್ರಿ ಕಾಡಲಿ ಸಿಕ್ಕಿಬಿದ್ದ ತಾಯ್ ಎಮ್ಮೆ ಕರು
ಜೀವಂತವಾಗಿ ಹಿಂದಕೆ ಬಂದವೆನೆ ಮುಂದಿ
ನಂಬಲಾರದು. ಊರು ಊರೆ ಬಂದಿತು; ಬಂದು
ಲಕ್ಷ್ಮಮ್ಮನನು ನೋಡಿ ಮುದ್ದಾಡಿ ಹೊಗಳಿತು.
ಮನೆಯಾಕೆ ಅದಕೆ ಕರುವಿಗೆ ಕುಂಕುಮವನಿಕ್ಕಿ
"ಹೋಗಿದ್ದ ಲಕ್ಷ್ಮಿ ಬಂದಿತು; ದೃಷ್ಟಿ ತಗಲೀತು,"
ಎಂದು ಏತರದೊ ಸಾಂಗ್ಯವ ಮಾಡಿದರು. "ಎಂಥ
ದಿಟ್ಟತನದೆಮ್ಮೆ ಲಕ್ಷ್ಮಮ್ಮ! ನಮ್ಮೂರಿನಲಿ
ಹಿಂದೆ ಬಹುದಿಟ್ಟ ಹೆಂಗಸು ವೀರ ತಿಮ್ಮಮ್ಮ
ಎಂಬಾಕೆ ಯುದ್ಧದಲಿ ಹಗೆಯ ಸೋಲಿಸಿ ನಮ್ಮ
ಊರರಕ್ಷಿಸಿದಳೆಂಬರು. ನಮ್ಮ ಲಕ್ಷ್ಮಮ್ಮ
ಅಂಥದೇ ಹೆಣ್ಣು. ಬರಿ ಲಕ್ಷ್ಮಮ್ಮನಲ್ಲ; ಇದು
ವೀರಲಕ್ಷ್ಮಮ್ಮ" ಎಂದರು.
ಇದೇ ನನ್ನ ಕತೆ.

* * *

ಕತೆಗಾರ ಕತೆಯ ಮುಗಿಸಿರಲು ಟೀಕಾಕಾರ
ಇಂತು ನುಡಿದನು: "ಒಳ್ಳೆ ಕತೆ. ನನಗೆ ಇದ ಕೇಳಿ

ತುಂಬ ಸಂತೋಷವಾಗಿದೆ. ತನ್ನ ವಸ್ತು ಇದು
ಇದನು ರಕ್ಷಿಸಿಕೊಂಬೆನೆಂಬ ಅಭಿಮಾನ ಇರೆ
ಎಮ್ಮೆಯೇ ಸಿಂಹ; ಸಿಂಹಕೆ ಮಿಗಿಲು. ಆ ಎಮ್ಮೆ
ಕಾದಿರುವ ಕರುವ ಕದಿಯಲು ಬಂದ ಹುಲಿಸಿಂಹ
ಅದರೆದುರು ನಿಲ್ಲಲಾರವು. ತುಂಬ ಒಳ್ಳೆ ಕತೆ.
ಗೆಳೆಯ್ತು ಅದ ತಮ್ಮ ವಾಡಿಕೆಯ ಹಾಸ್ಯದ ರೀತಿ
ಮೊದಲುಮಾಡಿದರು. ವಾಡಿಕೆಯಂತೆಯೇ ತಮ್ಮ
ನಗೆಯ ಮರೆಯಲಿನಿಂತ ಗಂಭೀರಭಾವವನು
ತೋರಿ ಕತೆಯನು ಮುಗಿಸಿದರು. ಇನ್ನು ನನ್ನ ಕತೆ.
ರಾಜಕೀಯರಲಿ ಯಃಕಶ್ಚಿತಾದವನಿಲ್ಲಿ
ಕತೆಯೇನ ಹೇಳುವುದು? ನಮ್ಮ ನಕ್ಷತ್ರಿಕನ
ಕಾಟವನು ತಡೆಯಲಾರದೆ ಹೇಳಲೊಪ್ಪಿಹೆನು.''
ಅಂತು ಅವನೊರೆದ ಕತೆ ಮುಂದೆ ಇದೆ. ಗಾಂಧೀಜಿ
ಗುಂಡುಸೂಜಿಯನು ಜೋಪಾನ ಮಾಡಿದ ಚರಿತೆ.
ಅದ ''ಗುಂಡು ಸೂಜಿ'' ಎಂದೇ ಕರೆದು ಬರೆದಿದೆ.

# ಗುಂಡು ಸೂಜಿ

ಎಷ್ಟೊ ರೀತಿಯಲಿ ಎಷ್ಟೋ ಹಿರಿಯರೆನಿಸಿರುವ
ಗಾಂಧೀಜಿ ವಾದದಲಿ ಎಂಥ ಚತುರರು, ತಮಗೆ
ಇಷ್ಟವಲ್ಲದಿರೆ ಮಾತನು ಎಂತು ಮುಗಿಸುವರು,
ಎಂದು ತೋರುವ ಒಂದು ಸಂಗತಿಯನರುಹುವೆನು.

ದುಂಡು ಮೇಜಿನ ಗೋಷ್ಠಿಗಾಗಿ ನಮ್ಮ ಮಹಾತ್ಮ
ಆಂಗ್ಲದೇಶಕೆ ಹೊರಟರಲ್ಲ! ಅವರಿಗೆ ಅಲ್ಲಿ
ಹೋಗುವುದು ಇಷ್ಟವಿರಲಿಲ್ಲ. ಮುಖ್ಯಾಮಾತ್ಯ
ಮ್ಯಾಕ್‌ಡೊನಾಲ್ಡ್ ಸುಮುಖನಾಗಿಹನೆಂದು ಬಲ್ಲ ಜನ
ಬಹಳ ಒತ್ತಾಯಮಾಡಿದರು. ಗಾಂಧೀಜಿ, “ಸರಿ,
ಹೋಗಿ ನೋಡಿಯೆ ಬಿಡುವ,” ಎಂದವರೆ ಹೊರಟರು.
ಮುಂಬಯಿಯ ರೇವಿನಲಿ ಒಂದು ಹಡಗನು ಏರಿ
ಆಂಗ್ಲರಾಜರ ಭೂಮಿಯನು ಕುರಿತು ಸಾರಿದರು.

ಕಡಲ ಯಾನದಲಿ ಜೊತೆಯಲಿ ಇವರ ಹಡಗಿನಲಿ
ಹಲಕೆಲವು ಆಂಗ್ಲಜನ ಇಹರು. ಅವರಲಿ ಮೂರು
ಮುಪ್ಪಾಗ ಜನ, ಇವರು ತಮ್ಮಿಂದ ಏನನೋ
ಕಸಿದುಕೊಳ್ಳಲು ಬರುತಲಿಹರೆಂದು, ಆಂಗ್ಲಜನ
ಭರತವರ್ಷವ ಬಿಟ್ಟು ನಡೆಯೆ ಈ ದೇಶಕ್ಕೆ
ಬರುವ ದುರ್ಗತಿಯ ಕಾಣರು ಎಂದು, ಮುಂತಾಗಿ
ನಂಬಿರುವ ಮಂದಿ. ಅವರಲಿ ಒಬ್ಬ, ತಾನೇನೊ
ಬಹಳ ತಿಳಿದವನಂತೆ, ಗಾಂಧೀಜಿಯವರ ಬಳಿ

ದಿನ ಬೆಳಗು ಚರ್ಚೆಮಾಡುವನು. ನಾಲ್ಕಾರುದಿನ ಮಾತು ನಡೆದಿರೆ ಮಹಾತ್ಮರು, "ನಮ್ಮ ಮಾತಿನಲಿ ಹೊಸತು ಏನೂ ಇಲ್ಲ. ಹೇಳಿದುದನೇ ನೀವು ಹೇಳುತಿರುವಿರಿ. ನಾನು ಅದಕೆ ಉತ್ತರವಾಗಿ ಹೇಳಿದುದನೇ ಹೇಳುತಿರುವೆನು. ಇದೇರೀತಿ ಮರಮರಳಿ ಮಾತಾಡಿ ಫಲವಿಲ್ಲ. ನಿಮ್ಮ ಮತ ನನಗೆ ಒಪ್ಪಿಗೆ ಇಲ್ಲ. ನನ್ನ ಮತ ನಿಮ್ಮಂಥ ಜನಕೆ ಒಪ್ಪಿಗೆಯಾಗುವಂತಿಲ್ಲ. ಚರ್ಚೆಯನು ಇನ್ನು ನಿಲ್ಲಿಸುವ," ಎಂದರು.

ಆಂಗ್ಲ, "ಇದು ತಪ್ಪು. ಆಂಗ್ಲಭಾರತ ಎರಡು ದೇಶಕೂ ಒಳ್ಳಿದನು ತರುವ ದಾರಿಯ ನಾನು ತೋರುತಿರುವೆನು. ನೀವು ಹಿಡಿದಿರುವ ದಾರಿ ಎರಡೂ ದೇಶವನು ಕೆಡಿಸಿ ಹಾಳುಮಾಡುವುದು. ನಿಮ್ಮನು ಇಂಥ ದಾರಿಯಲಿ ನಡೆವುದಕೆ ಬಿಟ್ಟು ನಮ್ಮಂಥವರು ಸುಮ್ಮನೆ ಇರಲಾಗುವುದೆ? ನನ್ನಮಾತ ಗಮನಿಸಿ. ಮತ್ತೆ ಯೋಚಿಸಿರಿ. ಆರ್ಗ್ಯುಮೆಂಟ್ ಸುಸ್ಪಷ್ಟವಾಗಿರಲಿ, ಎಂದು ಅದ ಈ ನೋಟಿನಲಿ ಗುರುತುಮಾಡಿಹೆನು. ಇದನೋಡಿ ನಾಳೆ ಕೊನೆಯಾಗಿ ನಿಮ್ಮಭಿಮತವ ನನಗೆ ತಿಳಿಸಿರಿ," ಎಂದು ಹೇಳಿದನು. ಕಿಸೆಯಿಂದ ನಾಲ್ಕುಪುಟ ಟೈಪುಮಾಡಿದ್ದ ಟಿಪ್ಪಣಿ ಒಂದ ಅವರೆಡೆಗೆ ನೀಡಿದನು. ಗಾಂಧೀಜಿ ಟಿಪ್ಪಣಿಯ ತೆಗೆದುಕೊಂಡರು. ನಮಸ್ಕಾರ ಎಂದರು. ಆತ ಹೊರಟುಹೋದನು.

## ಗುಂಡು ಸೂಜಿ

ಮಾರನೆಯ ದಿವಸ ಅದೆ ಹೊತ್ತು
ಗಾಂಧೀಜಿ ತಮ್ಮ ಮೂಲೆಯಲಿ ಮೇಜಿನ ಮುಂದೆ
ಕುಳಿತಿಹರು. ಆಂಗ್ಲ ಬಂದನು. ಕುಶಲವನು ಬಯಸಿ,
"ನನ್ನ ನೋಟ್ ಓದಿದಿರ, ಗಾಂಧೀಜಿ?" ಎಂದನು.
ಗಾಂಧೀಜಿ: "ಓದಿದೆನು." "ಏನು? ಅದರಲಿ ನಿಮಗೆ
ಏನಾದರೂ ಬೆಲೆಯುವಸ್ತು ಇದ್ದಿತೊ?" "ಇಕೋ
ಅದನು ತೆಗೆದಿರಿಸಿಕೊಂಡಿಹೆನು."

ಇಂತೆಂದವರು
ಗಾಂಧೀಜಿ ಮೇಜಮೇಲಿನ ಪಿನ್ ಕುಷನ್ ಕಡೆಗೆ
ಕೈಚಾಚಿ ಒಂದು ಹೊಸ ಗುಂಡು ಸೂಜಿಯು ಸೆಳೆದು
ಅವನ ಎದುರಿಗೆ ಹಿಡಿದು ಮೆಲ್ಲನೆಯೆ ನಕ್ಕರು.

*                    *                    *

ಇನ್ನೆರಡು ಮಾತಾದರೂ ಮುಂದೆ ಇಹುದೆಂದು
ನಾವೆಲ್ಲ ಕಿವಿಯ ತೆರೆದೇ ಇಹೆವು. ಅರೆನಿಮಿಷ
ಕಳೆದು ಮುಂದಕೆ ಮಾತು ಯಾವುದೂ ಕೇಳದಿರೆ
ಕತೆ ಮುಗಿಯಿತೆಂದು ತಿಳಿದೆವು. ಶರ್ಮ ಟೀಕೆಯನು
ಇಂತು ನುಡಿದನು: "ಗೆಳೆಯ, ಅಭಿಮಾನವೊಂದಿರಲು,
ಎಮ್ಮ ಸಿಂಹವಸೋಲಿಸುವುದೆಂದು ಹೇಳಿದನು.
ವೀರಲಕ್ಷ್ಮಮ್ಮ ಎಂತೋ ಅಂತೆ ಗಾಂಧೀಜಿ
ಇದಕೆ ಸಾಕ್ಷಿ. ಅದೆಂಥ ಕೆಚ್ಚೋ ಮಹಾತ್ಮರದು.
ಉಫ್ ಎನಲು ತೂರಿ ಹೋಗುವ ತೆಳ್ಳನೆಯ ಮುದುಕ
ಆಂಗ್ಲ ಸಾಮ್ರಾಜ್ಯ ಸಿಂಹದ ಎದುರಿನಲಿ ಎಷ್ಟು
ದಿಟ್ಟತನದಿಂದ ನಿಂತಿಹರು. ಸಿಂಹದ ಎದುರು
ನಿಂತಿಹುದು ಒಡಲಲ್ಲ; ಆತ್ಮ. ಅದುವೆ ಮಹಾತ್ಮ.

ಆ ಆಂಗ್ಲ ಮಿತ್ರ, 'ಯೂಡೋಂಟ್‌ಸೀಮ್‌ಟು ಕೇರ್‌ಎ ಪಿನ್
ಫರ್ ದಿ ನೋಟ್'' ಎಂದಂತೆ, ಪೂಜ್ಯ ಗಾಂಧೀಜಿ 'ನೋ,
ಪ್ಲೀಸ್‌ಮೇಕ್‌ನೊಮಿಸ್ಟೇಕ್ ಐ ಡೂ ಕೇರ್ ಎ ಪಿನ್ ಫರ್ ಇಟ್'
ಎಂದಂತೆ ನನಗೆ ತೋಚಿದೆ. ಮಹಾತ್ಮರದು ಅದು
ಎಂಥ ಉತ್ತರ! ಅದರ ಜೊತೆಗೆ ಒಂದೇ ಒಂದು
ಗುಂಡುಸೂಜಿಯನಾದರೂ ವ್ಯರ್ಥಮಾಡರೇ,
ಎಂಥ ಜೋಪಾನ! ಹಿರಿಯರು ಹಿರಿಯ ವಿಷಯದಲಿ
ಎಂತು ಅಂತೇ ಕಿರಿಯ ಸಂಗತಿಯಲೂ ತಮ್ಮ
ಹಿರಿತನವ ತೋರಬಲ್ಲರು. ದಧೀಚಿಯ ಬೆನ್ನ
ಮೂಳೆ ಇಂದ್ರನ ಕೈಯ ವಜ್ರವಾಯಿತು ಎಂದು
ಹೇಳಿಹರು. ಬಡಕಲ ಮಹಾತ್ಮರೊಡಲಲಿ ಕಾಂಬ
ಒಂದೊಂದು ಮೂಳೆ ಒಂದೊಂದು ವಜ್ರಾಯುಧ;
ಸ್ವಾರ್ಥಪರರನು ನಾಚಿಸುವುದು; ಸಾಮ್ರಾಜ್ಯವನು
ಸರಿಯಾದ ಪಥಕೆ ತರುವುದು. ಏನು ತಪವೊ ಅದು.
ಪುಣ್ಯಪುರುಷನ ಬೆನ್ನಮೂಳೆ ಅವನೊಡಲಲೇ
ಇರುತ ನಮ್ಮವರು ರಾಜ್ಯವ ನಡೆಸಬಹುದಾದ
ಶುಭದಿವಸ ಕಂಡಿಹುದು. ಇಷ್ಟರಲೆ ಈ ದೇಶ
ತೀರಾ ಸ್ವತಂತ್ರವಾಗುವುದು. ಆಗಲಿ. ನಮ್ಮ
ಅಭಿನವ ದಧೀಚಿ ಅದನೋಡಿ ಸಂತೋಷಿಸಲಿ.
ಜಯ ಮಹಾತ್ಮಾಗಾಂಧಿ; ಅಭಿನವ ದಧೀಚಿ, ಜಯ.''

ಟೀಕೆ ಮುಗಿಯಿತು. ''ಇದೇ ಈ ಸಲಕೆ ಕೊನೆಯ ಕತೆ.
ಕೊನೆಯ ಟೀಕೆ; ಅದೆಷ್ಟು ಚಿನ್ನನೆಯ ಕತೆ ಟೀಕೆ
ಮಾಡುವಿರೊ, ನೋಡಿ,'' ಎಂದಿದ್ದೆ ಇವರಿಗೆ ನಾನು.

ಅದಕೆ ತಕ್ಕಂತೆ ಕತೆಗಾರ ಗಾಂಧೀಜಿಯನು
ಕುರಿತ ಕತೆಯನು ಹೇಳಿ ಮುಗಿಸಿ ಟೀಕಾಕಾರ
ಜಯ ಮಹಾತ್ಮಾ ಎಂದು ಟೀಕೆಯನು ಮುಗಿಸಿದನು.
ಎಲ್ಲ ಗೆಳೆಯರಿಗು ಬಹು ಸಂತೋಷ. ಕತೆ ಟೀಕೆ
ಮುಗಿದಿರಲು ಹಿರಿಯಣ್ಣ, ಮೊದಲೆ ಒಪ್ಪಿದ್ದಂತೆ,
ಮಂಗಳದ ನುಡಿಯ ನುಡಿದರು. "ನಮ್ಮ ರಾಮಣ್ಣ,
ನಮ್ಮ ಕಾರ್ಯಕ್ರಮದ ಮುಕ್ತಾಯದಲಿ ನಾನು
ಭರತವಾಕ್ಯವ ನುಡಿಯಬೇಕೆಂದು ಬೆಸಸಿಹರು.
ಮೊದಲ ನುಡಿಯನು ನಾನೆ ನುಡಿದು ಕೊನೆಯಲು ನಾನೆ
ನುಡಿಯುವುದು ನನಗೇನೊ ಚೆನ್ನ ಎನ್ನಿಸುತಿಲ್ಲ.
ಆದರೂ ಗೆಳೆಯರಪ್ಪಣೆ ಎಂದು ನುಡಿಯುವೆನು.
ಬಹುದಿವಸದಿಂದ ಮನದೊಳಗಿದ್ದ ಒಂದಾಸೆ
ನನಗೆ ಈ ವರ್ಷ ಕೈಗೂಡಿ ಬಂದಿತು. ನಾವು
ಹತ್ತು ತಾಣದ ಹತ್ತು ಮಂದಿ ಕನ್ನಡ ತಾಯ
ಹಿರಿಕಿರಿಯ ಮಕ್ಕಳೆಲ್ಲರು ಸೇರಿ ಪೂರ್ವಿಕರು
ಸುಖಸಂಕಥಾಲಾಪದಲಿ ವಿನೋದದೊಳಿರಲು
ಎಂದು ರಾಜರ ವರ್ಣಿಸಿದ ರೀತಿ ಮನವೊಲಿದು
ಸಂತೋಷದಿಂದ ಜೊತೆಗೂಡಿ ಇರಬೇಕು: ಇದೆ
ಆ ಆಸೆ. ಇದ ಇವರು ಅವರು ನಡಸಿದರೆಂದು
ಉಪಚಾರವನು ನಾನು ನುಡಿಯ ತೊಡಗುವುದಿಲ್ಲ.
ಎಲ್ಲರೂ ಸೇರಿದಿರಿ; ಎಲ್ಲರೂ ನಡೆಸಿದಿರಿ."—
(ಯಾರೊ ಪಕ್ಕದಲಿ ಪಿಸುಮಾತಾಡಿದುದು ಕೇಳಿ)—
"ಅಹುದು ತಪ್ಪಾಡಿದೆನು. ಎಲ್ಲರೂ ಸೇರಿದೆವು;
ಎಲ್ಲರೂ ನಡೆಸಿದೆವು. ಅದರಿಂದ ಎಲ್ಲರಿಗು—

ನನ್ನನೂ ಕೂಡಿ ಎಲ್ಲರಿಗು—ವಂದನೆ. ಇನ್ನು
ಈ ಸಲದ ನಮ್ಮ ಉತ್ಸವದ ವರದಿಯು ಬರೆವ
ಹೊಣೆಯ ಹೊತ್ತಿಹ ಸೋದರರು ಅದನು ಶೀಘ್ರದಲಿ
ಬರೆಯಲೆಂಬುದು ನನ್ನ ಆಸೆ. ಬೇಗನೆ ಬರೆದು
ಪ್ರಕಟಿಸಲಿ. ಕನ್ನಡದ ಹತ್ತುಜನ ಜೊತೆಗೂಡಿ
ಸಂತೋಷದಿಂದಿದ್ದ ಈ ಸಂಗತಿಯ ತಿಳಿದು
ಇನ್ನಷ್ಟು ಮುಂದಿ ಮುಂದಕೆ ಇಂತೆ ಜೊತೆಗೂಡಿ
ಇಂತ ಹಬ್ಬಗಳ ನಡಸಲಿ. ನಾವೆ, ಬಹವರ್ಷ,
ಅದರಾಚೆ ವರ್ಷ, ಅದರಾಚೆ, ಎಂದನುಕೂಲ
ಅಂದು, ಇಂತೇ ಮತ್ತೆ ಸೇರಿ ಸಂತೋಷದಲಿ,
ಜೊತೆಗೂಡಿ ನಕ್ಕು, ಕತೆಕೇಳಿ ಕಣ್ಣೀರಿಟ್ಟು,
ಹಿರಿಹಿಗ್ಗಿ ಉಬ್ಬಿ ಬಾಳೋಣ. ಸಹನಾವವತು
ಸಹನೌ ಭುನಕ್ತು ಎಂಬುದು ನಮ್ಮ ಬಾಳಿನಲಿ
ರೂಪಾಂತು ಉಪನಿಷತ್‌ಋಷಿಯ ಸಹವೀರ್ಯಂ
ಕರವಾವಹೈ ತೇಜಸ್ವಿನೌ ಅಧೀತಂಅಸ್ತು
ಮಾವಿದ್ವಿಷಾವಹೈ ಎಂಬ ಅಪರಂಜಿ ನುಡಿ
ನಮ್ಮ ಉದ್ಧಾರಮಾಡಲಿ. ಶಾಂತಿರಸ್ತು; ಶಿವಂ
ಅಸ್ತು; ಲೋಕಾನಾಂ ಶುಭಂ, ನಿತ್ಯ ಮಂಗಳಂ.”

104_48 ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಮುನ್ನುಡಿ

ಈ ಪದ್ಯಸಂಕಲನದಲ್ಲಿರುವ ಮೊದಲ ಪದ್ಯ "ಸುನೀತ" ಕೆಲವು ವರ್ಷಗಳ ಹಿಂದೆ ನಾನು "ಯಶೋಧರಾ" ನಾಟಕವನ್ನು ಬರೆಯುವ ವೇಳೆ ಬರೆದದು. ಉಳಿದ ಪದ್ಯಗಳು ಈ ಒಂದೂವರೆ ಎರಡು ವರ್ಷಗಳ ಕೃತಿ. ಇವೆಲ್ಲ "ಜೀವನ" ಪತ್ರಿಕೆಯಲ್ಲಿ ಆಗಾಗ ಪ್ರಕಟವಾಗಿವೆ.

ಸುನೀತ ಬೌದ್ಧಧರ್ಮದ ಇತಿಹಾಸದಲ್ಲಿ ಒಬ್ಬ ಪ್ರಮುಖ ವ್ಯಕ್ತಿ. ಅಂತ್ಯಜರಾಗಿ ಹುಟ್ಟಿ ದೈವದ ಅನುಗ್ರಹವನ್ನು ಪಡೆದರೆಂದು ಇತರ ಮತಗಳು ನಂದನಾರ್ ತಿರುಪಾಣಿ ಮಾದಾರ ಚನ್ನಯನವರನ್ನು ಹೊಗಳಿರುವಂತೆ ಬೌದ್ಧಧರ್ಮ ಇವನನ್ನು ಹೊಗಳಿದೆ.

ಕ್ವೆಟ್ಜಲ್‌ಕೊವಾಟಲಿ ದಕ್ಷಿಣ ಅಮೇರಿಕದ ಒಂದು ಅಳಿದ ನಾಗರಿಕತೆಯ ದೈವ. ಹಾವಿನ ಒಡಲು, ಮನುಷ್ಯನ ತಲೆ, ಹಕ್ಕಿಯ ರಕ್ಕೆ: ಇವು ಈ ದೈವದ ವಿಗ್ರಹದ ಲಕ್ಷಣಗಳು. ಈ ದೈವಕ್ಕೆ ಮೊದಲಲ್ಲಿ ಜೀವಗಳನ್ನು ಬಲಿಕೊಡುತ್ತಿದ್ದರೆಂದೂ ಒಬ್ಬ ಸುಧಾರಕನಿಂದ ಇದು ತಿದ್ದಿ ಆಮೇಲೆ ಹೂವು ಹಣ್ಣಿನ ಪೂಜೆಯಷ್ಟೇ ವಾಡಿಕೆಯಾಯಿತೆಂದೂ ಇತಿಹಾಸ ಹೇಳುತ್ತದೆ. ಇದಾದ ಸಂದರ್ಭವನ್ನು ಊಹಿಸುವಲ್ಲಿ ಈ ಕೃತಿ ರೂಪುಗೊಂಡಿತು.

ಈ ಪುಸ್ತಕವನ್ನು ನೋಡುವ ಎಲ್ಲರಿಗೂ ಇದರಲ್ಲಿರುವ ಎಲ್ಲ ಕೃತಿಯೂ ಒಪ್ಪಿಗೆಯಾಗುವುದೆಂದು ನಾನು ನಿರೀಕ್ಷಿಸುತ್ತಿಲ್ಲ. ಯಾವುದನ್ನೇ ಆಗಲಿ, ಎಲ್ಲವನ್ನೇ ಆಗಲಿ, ಒಪ್ಪದವರು ಅಜ್ಞರೆಂದಾಗಲಿ ವಿರೋಧಿಗಳೆಂದಾಗಲಿ ನಾನು ಎಣಿಸಲಾರೆ. ನನ್ನ ಬಹು ಹತ್ತಿರದ ಬಂಧುಗಳಿಗೆ ಮಿತ್ರರಿಗೇ ನನ್ನ ಕೃತಿಗಳು ಅನೇಕವೇಳೆ ಒಪ್ಪಿಗೆಯಾಗುವುದಿಲ್ಲ. ಆದರೆ ಬಂಧು ಮಿತ್ರರಾದವರು ಕೂಡ ಒಂದು ಕೃತಿಯ ವಿಷಯದಲ್ಲಿ ಸಹನೆಯಿಂದ ನಡೆದುಕೊಂಡರೆಯೇ ಅದರ ಗುಣವನ್ನು ಕಾಣಬಹುದು. ಅವಗುಣವನ್ನು ಕಾಣುವುದಕ್ಕಾದರೂ ಸಹನೆಯಿಂದ ಓದುವುದು ಆವಶ್ಯಕ.

ಈ ಪುಸ್ತಕ ಓದುವ ಎಲ್ಲರಿಂದಲೂ ನಾನು ಈ ಕೃತಿಗಳನ್ನು ಕುರಿತು ಏನಿಲ್ಲವೆಂದರೂ ಸಹನೆಯನ್ನು ಯಾಚಿಸುತ್ತೇನೆ. ಸಹನೆ ಮಾತ್ರವೇಕೆ, ಆದರವನ್ನೇ ಕೊಳ್ಳಿ, ಎನ್ನುವವರು ಕೆಲವರೋ ಹಲವರೋ ಇರಬೇಕು. ಅದು ನನಗೆ ಸಂತೋಷ ಎಂದು ನಾನು ಪ್ರತ್ಯೇಕವಾಗಿ ಹೇಳಬೇಕಾದುದಿಲ್ಲ.

ಬೆಂಗಳೂರು,<br>
ವ್ಯಯ ಸಂವತ್ಸರ ಆಷಾಢ ಶುದ್ಧ ಸಪ್ತಮಿ<br>
ಶುಕ್ರವಾರ 5–7–46.

ಶ್ರೀನಿವಾಸ

# ವಿಷಯಸೂಚಿ

# ಶ್ರೀನಿವಾಸ ರಚಿತ

---

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)

ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯು ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore.

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
ಜೀವನ ಕಾರ್ಯಾಲಯ, ೪೩–೪೪, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಸುನೀತ

ಗುರುವಿನ ಮಹಿಮೆಯ ಹೊಗಳುವ ಗೀತಾ
ಇದ ಹಾಡಿದನು ಸುನೀತಾ.

ಮಗಧರ ನಗರಿ ರಾಜಗೃಹದಲಿ
ಬೀದಿಯ ಕಸವನು ಗುಡಿಸುವನವನು;
ಕೀಳು ಜಾತಿಯಲಿ ಕೀಳು ಜನದಲಿ
ಹುಟ್ಟಿ ಬೆಳೆದುದು ಅವನದು ಹವಣು;
ಮೈ ಕೈ ಧೂಳು, ಉಂಬುದು ಕೂಳು,
ಉಡುವುದು ಚಿಂದಿ, ಹರುಕು, ಹಾಳು;
ಬಿಸಿಲು ಬೇಡವೆನೆ ಮರಗಳ ನೆರಳು,
ಮಳೆಗಂಜಿದನೇ ಕಾಡಿನ ಗುಡಿಲು;
ರುಚಿ ಬೇಕೆಂದನೆ ತೋಪಿನ ಮಾವು,
ಸೋತು ಮಲಗುವನೆ ಭೂಮಿಯ ಮಡಿಲು;
ಬೀದಿಯ ಕಸವನು ಗುಡಿಸುವನವನು
ಕಷ್ಟದೆ ಬೆಳೆದುದೆ ಅವನದು ಹವಣು.

## ಸುನೀತ

ಬಹು ಜನ ಹಿರಿಯರು, ಬಹು ಜನ ಪೂಜ್ಯರು,
ಸಾವಿರ ಜನ ಮಹನೀಯರವನಿಗೆ;
ಶರಣು ಶರಣು ಎಂದುದು ಆ ಗುಡಿಲು
ರಾಜಾಲಯಕೆ ಮಾಡಕೆ ಮನೆಗೆ;
ದೂರದಿ ಬಗ್ಗಿ ಅವನಿರೆ ತಗ್ಗಿ
ಮುಂದಕೆ ಹೋಹರು ಹಿರಿಯರು ಹಿಗ್ಗಿ;
ಯಾರೂ ಸುಳಿಯದ ತಾಣದಿ ಕುಳ್ಳಿರೆ
ಅದೆ ಅವನಿಗೆ ಮರ್ಯಾದೆಯು ತಾವು;
ಸಾಲ್ಮರದಡಿಯನು ಗುಡಿಸುವ ವೇಳೆ
ಅದರಿಂದುದುರಿದ ಹೂವೇ ಹೂವು;
ಗುಡಿಲಿನ ದೇಹದಿ ಬಾಳುತ ಜೀವ;
ಸವಿದಿತು ದಿನವೂ ದೈನ್ಯದ ನೋವ.

ಬೆಲೆ ಬಾಳದ ಬಾಳುವೆಯನು ಇಂತು
ನಡೆಸಿರಲವನು ರಾಜಗೃಹದಲಿ;
ಕಸವನು ಗುಡಿಸುತ ಕಸವೇ ಆಗಿ,
ಕಸಕೂ ಕಡಮೆ, ಅಧಮರ ಮೊದಲಿ;
ಬಂದಿತು ಕಾಲ, ಹರಿಯಿತು ಸಾಲ,
ಕಂಡನು ಅವನೂ ಬಾಳಿನ ಮೇಲ:
ಸಾವಿರ ಶ್ರಮಣರು ಹಿಂಗಡೆ ಬರುತಿರೆ
ಹೊಕ್ಕನು ನಗರಿಯ ರಾಜರ ರಾಜ;
ಬುದ್ಧ ಗುರುವಿನಾ ಮುಖದಲಿ ನೋಡು
ಚಂದ್ರನ ಕಾಂತಿ ಸೂರ್ಯನ ತೇಜ;
ಬಂದನು ಎಲ್ಲಾ ಜೀವದ ಬಂಧು;
ಬಂದನು ಅಪಾರ ಕರುಣಾ ಸಿಂಧು.

ಲಕ್ಷಾಧೀಶರು, ಕೋಟಿಯಧೀಶರು,
ನಗರಾಧಿಪ ಮಾಂಡಲಿಕರು, ಮಲ್ಲರು,
ಮಂತ್ರಿ ಮಹಾಮಾತ್ರರು ಸತ್ಪಾತ್ರರು,
ಎದುರುಗೊಂಡರು ಉಚಿತದೊಳೆಲ್ಲರು;
ಬಾಂಗುಡಿ ತೋರಣ, ತೇಜೀ ವಾರಣ,
ಹೆಸರನು ಹೊಗಳುತ ವಂದಿ ಚಾರಣ;
ಇರ್ಕಡೆಯಲಿ ಇವರೆಲ್ಲಾ ನಿಂದಿರೆ
ಮಧ್ಯದೆ ನಡೆಯುತ ಬಂದರು ತಂದೆ;
ಬರವನು ನೋಡುತ ಮನೆಗಳ ಮುಂಗಡೆ
ಹರುಷದಿ ನಿಂತಿತು ನಗರದ ಮಂದಿ;
ನಾನೂ ದಾರಿಯ ಬದಿಯಲಿ ನಿಂತೆ;
ನೋಡಿದೆ ಗುರುವನು; ಹರಿಯಿತು ಚಿಂತೆ.

ಮೊಗದಲಿ ತೊಳಗಿದ ಕರುಣೆಯ ನೋಡಿ
ತೋರಿತು ಯಾವುದೊ ಪ್ರೇಮ, ಸಲಿಗೆ;
ಹೊರಳಿತು ಒಳಗು, ಎಂತೋ ಆಯಿತು;
ಹಾವಿನ ತೆರದಲಿ ಹರಿದೆನು ಬಳಿಗೆ;
ನೆಲದಲಿ ಕೆಡೆದು, ಪಾದವ ಹಿಡಿದು,
ಅರ್ಥವ ಕಾಣದ ನುಡಿಯನು ನುಡಿದು,
ಉದಯದೊಳೆಲ್ಲಿಯೊ ಸಾರಿದ ತಾಯ
ಸಂಜೆಗೆ ನೋಡಿದ ಕಂದನ ರೀತಿ,
ಕಣ್ಣೀರುಕ್ಕಿರೆ ಅಪ್ಪಿದೆನವರನು;
ಇಲ್ಲವಾಯ್ತು ಮಡಿ ಮೈಲಿಗೆ ನೀತಿ;
ಹಾ ಎಂದರು ಜನ; ಬಿಡಿಸಲು ಬಂದರು;
ಗುರುದೇವರು, ಬಿಡಿ ಬಿಡಿ ಇರಲೆಂದರು.

ಬಿಡಿಸಲು ಬಂದವರನು ತಡೆಯುತ್ತ
ಗುರುದೇವರು ಹಿಡಿದೆತ್ತಿದರೆನ್ನ;
ಕಣ್ಣೀರನು ಕಿರುಬೆರಳಿಂದೊರಸಿ
ಕೆಂದಳಿರಂದದ ಕೈಯಲಿ ಬೆನ್ನ
ತಡವಿದರಯ್ಯ; ಮೆಯ್ಯಿಗೆ ಮೆಯ್ಯ
ಸೋಕಿಸಿ ನಿಂತರು; ಇಲ್ಲ ಅಸಯ್ಯ;
"ದೇವಾ, ನಿಮ್ಮನಃ ಮುಟ್ಟದೆನಲ್ಲಾ!"
ಎನ್ನುತ ನಾನು ಕಾತರ ನುಡಿಯೆ
ಮೆಲ್ಲನೆ ನಕ್ಕರು: ಹಣತೆಗೆ ಜಿಡ್ಡೆನೆ
ಜಿಡ್ಡೇ ಎಣ್ಣೆ ದೀಪದ ಕುಡಿಗೆ?
ಪಾವನನಾದೆನು ಅಂದು ಸುನೀತಾ
ಗುರುವರನಡಿಯನು ಸೋಕಿ ಪುನೀತಾ.

ಜೊತೆಯಲಿ ನಡೆದೆನು ಆ ದಿನವೆಲ್ಲ;
ಕಲಿಸಿದರಂದೇ ತತ್ವದ ಪರಿಯ;
ಮನಸಿನ ಕಣ್ಣಿನ ಎವೆಯನು ಬಿಡಿಸಿ
ಸೆಳೆದರು ಪಾಪೆಯ ಮರೆಸಿದ ತೆರೆಯ.
ಸಲಹಲು ತಂದೆ ಬದುಕಿದೆನಂದೇ;
ಇನ್ನೀ ಜೀವಕೆ ಕೊರೆಯೆ ಕುಂದೆ?
ಮೂರು ಲೋಕದಲಿ ಬಾಳುವ ಬಾಳೂ
ಅಂದಿನ ಇರುಳೆನ್ನೆದುರಲಿ ಹರಿಯಿತು;
ಇಂದ್ರಾಗ್ನಿ ಮರುತ ವರುಣ ನಿಋಋತಿ
ಎಲ್ಲ ದೇವಗಣ ಬಳಿಯಲಿ ನೆರೆಯಿತು;
ವಿಶ್ವಜೀವನಸಾಬ್ಧಿಯ ವಕ್ಷದಲಿ
ಅಲೆ ತೇಲಿದೆನು ಅಧಮರ ಮೊದಲಿ.

ಉಳಿದವರಿಗೆ ಬಹು ವರುಷದ ಮೇಲೆ
ದೊರೆಯುವ ತಪಸಿನ ಫಲವನು ನನಗೆ
ಗುರು ಒಂದೇ ದಿನದಲಿ ನೀಡಿದರು:
ಮನಸು ಮಾಡಿದರೆ ಕಷ್ಟವೆ ಧಣಿಗೆ?
ಗುಡಿಸಿದ ಕಸವು, ಸಹಿಸಿದ ಹಸಿವು,
ಆಯಿತು ಆತ್ಮದ ಖಡ್ಗಕೆ ಮಸೆವು.
ಗುರುವಿನ ಕೃಪೆಯಿಂದೊದವಿದ ತಿಳಿವು
ಬೇಸಗೆಯುದಯದ ಪ್ರಭೆಯೆನೆ ಬೆಳೆಯೆ,
ಹೊರೆಯಾಗಿಹ ಹಾವಿನ ಪೊರೆಯಂತೆ
ದೀನ ಕೃಪಣತೆಯನೆಲ್ಲವ ಸುಲಿಯೆ,
ಲೋಕದ ಜೀವನವೇ ನಾನಾದೆ
ಹರಿಯಿತು ನಾನು ಎನ್ನುವ ಬಾಧೆ.

ಜಯವಾಗಲಿ ಗುರುವರ ಬುದ್ಧನಿಗೆ;
ಜಯ ಅರಗುವರಗೆ ಸಿದ್ಧಾರ್ಥನಿಗೆ;
ಜಯವಾಗಲಿ ಅಂತ್ಯಜ ಭ್ರಾತೃವಿಗೆ;
ವಿಶ್ವಪ್ರೇಮದ ಜೀವನ್ಮಣಿಗೆ;
ಜಯ ಗುರುದೇವ, ದೀನರ ಕಾವ,
ಜಯ ಜಯ ನನ್ನ ಜೀವದ ಜೀವ;
ಎಲ್ಲೆಡೆ ಹರಡಲಿ ನಿನ್ನುಪದೇಶ;
ಹರಿಯಲಿ ಎಲ್ಲಾ ಮನಸಿನ ಭ್ರಾಂತಿ;
ಎಲ್ಲೆಡೆ ಅರಳಲಿ ತಿಳಿವಿನ ಮೊಗ್ಗು;
ಎಲ್ಲಾ ಹೃದಯದಿ ಮೊಳೆಯಲಿ ಶಾಂತಿ;
ಜಯ ಶಾಕ್ಯಸಿಂಹ, ಜಯ ಮೌನಿವರ,
ಜಯ ಗುರುದೇವ, ಭವಭೀತಿಹರ.

## ಡ್ಯೂಕ್—ಸ್ಯಾಂಡೀ ಸಂವಾದ

ವಿಕ್ಟೋರಿಯಾ ರಾಣಿಯುಳಿಯ ಆರ್ಗೈಲ್ ಡ್ಯೂಕ,
ಧನಶಾಲಿ ಬಹು ಪುಣ್ಯವಂತ,
ಒಂದು ದಿನ ಉದಯದಲಿ ಎದ್ದು ತನ್ನರಮನೆಯ
ಮುಂಬಾಗಿಲಿಗೆ ಬಂದು ನಿಂತ.

ತೊಳಗುತಿವೆ ತೋಟದಲಿ ತೆರತೆರ ಗುಲಾಬಿ ಹೂ,
ಡ್ಯಾಲಿಯಾ, ಬೋಗೇನವೆಲಿಯ;
ಎಳೆ ಬಿಸಿಲು, ತಿಳಿಗಾಳಿ; ನೋಡಿಕೊಳ್ಳಲು ಮಾಲಿ;
ಏಕೆ ಹೇಳುವುದು ಆ ನಳಿಯ?

ಒಂದು ಗಿಡದಡಿ ಕುಳಿತು ಸ್ಯಾಂಡಿ ಮಾಡುತಲಿಹನು
ಬೇರಿಗೆ ಅದೇನೊ ಸಂಸ್ಕಾರ;
ತೋಟ ನೋಡುವ ಜನಕೆ ಮುಗುವ ಸಾಕುವರೀತಿ
ಇಹುದಿಂತ ಕೆಲಸ ದಿನವಾರ.

ಎನಿತೊ ತಲೆಮಾರು ಸ್ಯಾಂಡಿಯು ವಂಶ ಡ್ಯೂಕರಲಿ
ತೋಟದಾರಂಬದಲಿ ಬೆಳೆದು,
ಇವರಿವರ ಆಳು ದೊರೆತನದ ಅಂತರ ಎನಸೊ
ಕಡಮೆಯಾಗಿದೆ ಭೇದ ಅಳಿದು.

ಗಿಡದ ಬುಡದಲಿ ಕುಳಿತು ಕೆಲಸ ಮಾಡುತಲಿರುವ
ಸ್ಯಾಂಡಿಯನು ನೋಡಿ ಯಜಮಾನ
ನಡೆತಂದನತ್ತ ಮೆಲ್ಲನೆ; ಆಳ ರೂಪಿನಲಿ
ಇಲ್ಲ ಎಂದಿನ ಸಮಾಧಾನ.

ಒಡೆಯನನು ಕಂಡು ಸೇವಕ "ಉದಯ ಒಳಿತಕ್ಕೆ"
ಎಂದು ಬಯಕೆಯ ನುಡಿಯ ನುಡಿದ;
"ಒಳಿತಕ್ಕೆ, ಸ್ಯಾಂಡಿ" ಎನೆ ದಣಿ, ಮಾತ ಬೆಳೆಸದೆ
ತನ್ನ ಅಷ್ಟಕೆ ತಾನು ದುಡಿದ.

ಸ್ಯಾಂಡಿಗೇನೋ ಚಿಂತೆ ಎಂದರಿತು ಯಜಮಾನ
ಸಾರಿದನು ಮತ್ತ್ರಷ್ಟು ಬಳಿಗೆ:
"ಏನು ಸ್ಯಾಂಡೀ, ಏನೊ ಯೋಚಿಸುವ ತೆರನಿದೆ,
ಚಿಂತೆಯೇತರದು ಮನದೊಳಗೆ?"

ಹುಟ್ಟು ಬುದ್ಧಿಯ ಮನುಜ ಸ್ಯಾಂಡಿ: ಅವನಿಗೆ ಅಂತೆ
ನಗೆ ನುಡಿವುದೊಂದು ಹುಟ್ಟುಗುಣ.
ದಣಿ ಹತ್ತಿರಕೆ ಬಂದು ಏನು ಸಂಗತಿ ಎನಲು
ಹೇಳಿದನು ತನ್ನ ಕಷ್ಟವನು.

"ಚಿಂತೆಯನು ಏನು ಹೇಳಲಿ, ಒಡೆಯ? ಸಂಸಾರ
ಮೊದಲೆ ದೊಡ್ಡದು; ನಿನ್ನೆ ಇರುಳು
ಮನೆಯಾಕೆ..." "ಹೆರಿಗೆಯಾಯಿತೆ, ಸ್ಯಾಂಡಿ, ಸಂತೋಷ,
ಬೆಳೆಯಲೆಂದೂ ನಿನ್ನ ಕರುಳು."

ತನ್ನ ನುಡಿ ಮುಗಿವ ಮುನ್ನವೆ ಇಂತು ಸಂಭ್ರಮಿಸಿ
ಸಂತೋಷವನು ನುಡಿದ ದೊರೆಗೆ
ಸ್ಯಾಂಡಿ ಹೇಳಿದ: "ನಿಮ್ಮ ಸಂತೋಷ; ಆದರೂ
ಮಿತಿ ಉಂಟು ನನ್ನಂತವರಿಗೆ.

"ದಣಿ ಕೊಡುವ ಅನ್ನದಲಿ ಬೆಳೆಯುತಿರುವೆವು ಎಲ್ಲ;
ಮನೆ ಎಂದ ಮೇಲೆ ಮಗು ಉಂಟು;
ಆದರೀಸಲ ಅವಳಿ ಜವಳಿ ಹೆತ್ತಿಟ್ಟಹಳು;
ಬಡತನಕೆ ಮಕ್ಕಳಿಗೆ ಗಂಟು."

"ಅವಳಿ ಜವಳಿಯೆ? ಓಹೊ! ಅದರಿಂದಲೇ ಚಿಂತೆ?
ಇರಲಿ ಬಿಡು. ಬಲ್ಲವರ ವಚನ,
ಬಾಯ ಕಳುಹಿದ ದೈವ ಕೂಳ ಕಳುಹಿತು, ಎನದೆ?
ಇಂತಿಹುದು ಸೃಷ್ಟಿಯಲಿ ರಚನ."

ಎಂದು ನಕ್ಕನು ಡ್ಯೂಕ. ಅವಳಿ ಜವಳಿಯ ಹುಟ್ಟು
ನಗೆಯೆ ಸರಿ ಆವ ಹೆರದವರಿಗೆ;
ಹೆತ್ತವರಿಗಲ್ಲವೇ ಇದಕೆ ಗತಿ ಏನೆಂಬ
ಭಯ? ಸ್ಯಾಂಡಿ ಮರುನುಡಿದ ದೊರೆಗೆ.

"ಸರಿ, ಒಡೆಯ. ಆದರಾ ಕಳುಹುವ ಕಚೇರಿಯಲಿ
ಏನೊ ಆಗಿದೆ ಕೊಂಚ ಊನ;
ಬಾಯಿಗಳ ಒಂದೆಡೆಗೆ, ಬುತ್ತಿಗಳ ಒಂದೆಡೆಗೆ,
ತಿರುಗಿಸಿರುವನು ಕಾರಕೂನ.

“ ಬಾಯಿಗಳು ಮುಟ್ಟಿಹವು ನಮ್ಮದೆ ವಿಲಾಸಕ್ಕೆ ;
ಬುತ್ತಿ ಇನ್ನೂ ಮುಟ್ಟಲಿಲ್ಲ.”
ಎಂದು ಸ್ಯಾಂಡಿ ಅದೊಂದು ಅರೆಕಹಿಯನಗೆ ನಕ್ಕು
ದೂರಕೆಸೆದನು ಒಂದು ಕಲ್ಲ.

ಡ್ಯೂಕನಿಗೆ ಸ್ಯಾಂಡಿ ಆಡಿದ ಯಾವುದೋ ಮಾತ
ಭಾಗ ನಿಜ ಎನ್ನಿಸಿತು ಮನಕೆ.
ಬಡವನಿಗೆ ಅವಳಿ ಮಕ್ಕಳು : ತನಗೆ ಎಷ್ಟು ಧನ,
ಮನೆಯೊಳಿಹ ಮೂರೆರಡು ಜನಕೆ !

ಇದು ತೋರಿ ದೊರೆ ನಕ್ಕ, ಕಹಿಯಿಲ್ಲದಿಹ ನಗೆಯ ;
ನಕ್ಕು ಆಳನು ಕುರಿತು “ ಸ್ಯಾಂಡಿ,
ನಮ್ಮ ಹೊಲ ಈ ಸಾರಿ ಎಂದಿಗಿಂತಲು ಹೆಚ್ಚು
ಬೆಳೆದಿಹವು ನಲವತ್ತು ಖಂಡಿ.

“ ಅದರೊಳೇನಿಲ್ಲವೆನೆ ಐದು ಖಂಡಿ ವಿಲಾಸ
ತಪ್ಪಿ ಬಂದಿರಬೇಕು ನಮಗೆ ;
ಮನೆವಾರ್ತೆಗೊರೆಯುವೆನು ಅದು ನಿನ್ನ ಸೊತ್ತೆಂದು ;
ಕಳುಹುವರು ಅದ ನಿನ್ನ ಮನೆಗೆ—”

“ ಬಹಳ ಉಪಕಾರವಾಯಿತು ಒಡೆಯ ” ಎಂದವನು
ಸ್ಯಾಂಡಿ ಕೈ ಮುಗಿದೆಂದಿನಂತೆ
ತನ್ನ ದುಡಿಮೆಯಲಿ ತೊಡಗಿದನು, ಹರಿದಿರೆ ಮನದ
ಸಾಲದನ್ನದ ಕಾಳ ಚಿಂತೆ.

# ನಾಗೋಜಿ ದೀಕ್ಷಿತ

ನಾಗೋಜಿ ದೀಕ್ಷಿತರು ವಾರಣಾಸಿಯೊಳಿಹರು ;
ಸೂತ್ರಾರ್ಥಗಳನು ವಿವರಿಸುವ
ವ್ಯಾಖ್ಯಾನ ಒಂದ ರಚಿಸುತಲಿಹರು ; ಮರೆತಿಹರು
ದಣಿವು ಬಡತನ ದಾಹ ಹಸಿವ.

ವಾರಣಾಸಿಗೆ ಆಗ ಒಮ್ಮೆ ಬಂದನು ಪೇಶ್ವ
ಯಾತ್ರಾರ್ಥದಲಿ ತಾಯ ಜೊತೆಗೆ ;
ತಾಯೊ, ಅಲ್ಲವೊ, ಇದನು ನಾ ಕಾಣೆ ; ಈ ವಿವರ
ಬೇಡ ನಾ ಹೇಳುತಿಹ ಕತೆಗೆ.

ದೀಕ್ಷಿತರು ತನ್ನ ನಾಡಿಂದ ಬಂದವರೆಂದು
ತಿಳಿದು ಅಭಿಮಾನದಲಿ ಪೇಶ್ವ
ಅವರ ನೋಡಲು ಬಯಸಿದನು: ಇನಿತು ಧನಿಕನಲಿ
ಇಂತಪ್ಪ ಬಯಕೆಯೆ ವಿಶೇಷ.

ಉದಯದಲಿ ದೀಕ್ಷಿತರು ಕೋಣೆಯೊಳಗಡೆ ಕುಳಿತು
ಸೂತ್ರದಾವುದೊ ಒಂದು ಸಿಕ್ಕ
ಬಿಡಿಸಿ ಅರ್ಥವ ಬರಸುತಿಹರು. ನೋಡಲು ಆಗ
ಪೇಶ್ವ ಮನೆ ಬಾಗಿಲನು ಹೊಕ್ಕ.

ಕೆಲಸದಲಿ ಕುಳಿತ ಹೊತ್ತಲಿ ಯಾರನೂ ಒಳಗೆ
ಬಿಡಬಾರದೆಂದಿವರು ಸತಿಯು
ಬೇಡಿಕೊಂಡಿಹರು. ನೋಡಲು ಬಂದ ಪೇಶ್ವಗೆ
ಆಕೆ ಅರುಹಿದರು ಸಂಗತಿಯು.

ದಕ್ಷಿಣದ ಅರಸು ಬಂದಿಹರೆಂದು ತಿಳಿಸಿರಿ,
ನೋಡಿದರು ನೋಡಬಹುದೆಂದು,
ಈತ ಹೇಳಿದನು. ಆ ತಾಯಿ ಇದ ಪತಿಗರುಹಿ,
'ನೋಡಿ,' ಎಂದರು ಮತ್ತೆ ಬಂದು.

ಪೇಶ್ವ ದೀಕ್ಷಿತರ ಕೋಣೆಯ ಹೊಕ್ಕು ಕೈಮುಗಿದು
ಬದಿಗೊಂದು ಪೀಠದಲಿ ಕುಳಿತ;
ದೀಕ್ಷಿತರು ಕುಳಿತಂತೆ ಕೈಯ ಮುಗಿದರು; ಅವರ
ಒಳಗೊಳದು ಪೇಶ್ವಗಳವಳಿತ.

ಕ್ಷಣಬಿಟ್ಟು ದೀಕ್ಷಿತರು, "ತಾವು, ರಾಜ್ಯ, ಕುಟುಂಬ
ಕ್ಷೇಮವೋ" ಎಂದು ಕೇಳಿದರು.
"ಕ್ಷೇಮ" ಎಂದೀತ ಮರ್ಯಾದೆಯಲಿ ನುಡಿದಿರಲು
ತಮ್ಮ ಚಿಂತೆಯಲಿ ಆಳಿದರು.

ದೀಕ್ಷಿತರು ತೀರ ರಿಕ್ತರು; ಆದರೇನನೂ
ಬಯಸದಿಹ ಅವರ ಆವುಟವ
ಹೇಳಲಾಗದು. ಇವರು ಜೈ ಎಂದು ಎತ್ತಿಹರು
ತುಂಬು ಬಡತನದ ಬಾವುಟವ.

ದೀಕ್ಷಿತರು ಬಯಸಿದರೆ ಒಂದು ವರ್ಷಾಶನವ
ಕೊಡಬೇಕು ಎಂದಿಹನು ಪೇಶ್ವ:
ತಾನೆ ಕೊಡುವೆನು ಎನಲು ಸರಿಯುಹುದೊ ತಪ್ಪುಹುದೊ.
ಎಂದು ಇವನಿಗೆ ಮಿೂನ ಮೇಷ.

ಅವರು ಕೇಳುವುದೇನ? ಅವರ ಮನವೇ ಇಲ್ಲಿ
ಇಲ್ಲ. ಆ ಕಣ್ಣು ಈತನನು
ನೋಡುವಂತಿವೆ, ನೋಡುತಿಲ್ಲ. ಹಿಡಿದಿದೆ ಮನವ
ಸೂತ್ರ ಒಂದರಲಿ ಕೋದ "ನನು."

ಶತಮಾನಗಳ ಹಿಂದೆ ಈ ಲೋಕದಲಿ ನಡೆದ
ಒಂದು ಮನದಲಿ ಸುಳಿದ ಭಾವ
ಇಲ್ಲಿ 'ನನು' ಆಗಿತ್ತು. 'ನನು' ವಿಂದ ಊಹಿಸಿ
ತಿಳಿಯಬೇಕಾ ಮನದ ಕಾವ.

ಕೂದಲೆಳೆಯಿಂದ ಲಾವಣ್ಯವನು ನೆನೆವವೊಲು,
ಹೆಜ್ಜೆಯಲಿ ಹುಲಿಯ ಕಾಂಬವೊಲು,
ದೀಕ್ಷಿತರು 'ನನು' ಎಂದ ಮನವನರಸುತಲಿಹರು...
ದಾರಿ ತಪ್ಪಿಸಲೆಷ್ಟು ಕವಲು!

ದಾರಿ ಕಾಣದ ಇರುವೆಯಂತೆ ಇವರಿರೆ, ಪೇಶ್ವ,
ಕೇಳುವರೆ ಸಂಕೋಚವೇನೊ,
ನಾನು ಕೇಳುವುದೆ ಸರಿ ಇರಬೇಕು, ಎಂದವನು
ನುಡಿಸಿದನು ದೀಕ್ಷಿತರ ತಾನು.

“ಏನಾದರೂ ಕಷ್ಟವಿರಲು ಅದ ತಿಳಿಸಿದರೆ
ನನ್ನಿಂದ ಆದ ಸಾಹಾಯ್ಯ
ನಾನು ಮಾಡಲು ಸಿದ್ಧನಾಗಿಹೆನು.” ದೀಕ್ಷಿತರ
ಮನಸು ಆಯಿತು ಮತ್ತೆ ಬಾಹ್ಯ.

ಕಷ್ಟದಲಿ ಸಾಹಾಯ್ಯ! ದೀಕ್ಷಿತರು ಹತ್ತಿರದ
ಪುಸ್ತಕವನಿವನ ಮುಂದಿಟ್ಟು,
“ಇಲ್ಲಿ ‘ನನು’ ಏಕೆ ಯೋಚಿಸಿ ಹೇಳಿ” ಎಂದರು.
ನುಡಿ ಮರೆತ ಪೇಶ್ವ ಮುಖ ಕೆಟ್ಟು.

## ವಾಲ್ಟೇರ್ ಮಾತು

ಒಮ್ಮೆ ವಾಲ್ಟೇರ್ ಮಹಾಶಯ ತನ್ನ ತೋಟದಲಿ
ಒಂದು ಬಳ್ಳಿಗೆ ಅಗೆತ ಕೊಡುತ
ಬಂದ ಒಬ್ಬನ ಜೊತೆಗೆ ಪ್ರಶ್ರಿತವನುಡಿದಿಹನು.
ಅವನದೇ ಒಂದು ತೆರ ನುಡಿತ.

ಬಂದಾತ ಇವನ ಪ್ರತಿಕಕ್ಷಿ ಒಬ್ಬನ ಹೆಸರ
ಹೇಳೆ, ವಾಲ್ಟೇರ್ ಅವನ ಕುರಿತು
"ಅವನು ಗುಣವಂತ, ಹಿರಿಕವಿ," ಎಂದು ಹೊಗಳಿದನು
ತಮ್ಮೊಳಿಹ ಭೇದವನು ಮರೆತು.

ಬಂದಾತನೆಂದ: "ಸ್ವಾಮಿ, ಆತ ನಿತ್ಯವೂ
ನಿಮ್ಮ ಬೈವನು; ಅವನ ಅರಿವು
ಅಂತಿರಲು, ನೀವವನ ಹಿರಿಯನೆಂದರಿತಿಹಿರಿ;
ನಿಮ್ಮಂತವರಲಿ ಇದೆ ತೆರವು."

"ಇಬ್ಬರರಿವೂ ನಿಜಕೆ ತಪ್ಪಿಯೇ ಇರಬಹುದು"
ಎಂದ ವಾಲ್ಟೇರ್ ಒಡನೆ ನಗುತ;
ಬಳ್ಳಿ ಹೂತಂತೆ ಮಿಂಚಿತು ಅವನ ಮೊಗದ ನಗೆ;
ತನ್ನಂತೆ ನಡೆದಿತ್ತು, ಅಗೆತ.

# ಆಚಾರ್ಯ – ಗಾಣಿಗ ಸಂವಾದ

ಆಚಾರ್ಯರೊಮ್ಮೆ ಗಾಣದ ಬಳಿಗೆ ಬಂದರು;
ಎತ್ತ ಕಟ್ಟಿತಲಿಹನು ಗಾಣದವ ಮರಕೆ;
ಗಾಣದೆತ್ತಿನ ಕೊರಳಿನಲಿ ಒಂದು ಗಂಟೆ;
ದುಡಿವ ಜೀವಕೆ ಗಂಟೆ ಯಾವ ಸಿಂಗರಕೆ?

ಆಚಾರ್ಯರಿವನ ಕೇಳಿದರು: "ಎಲ ತಮ್ಮ,
ನಿನ್ನ ಈ ಬಸವ ಬಹು ಚೆಲುವನೇನಲ್ಲ;
ಬಡಕಲೆತ್ತಿರುವ ಅಂದಕೆ ಗಂಟೆ ಬೇರೆಯೆ?"
ಇವನೆಂದ: "ಗುರುಗಳೇ, ಅದು ಸೊಗಸಿಗಲ್ಲ;

"ಎತ್ತ ಸುತ್ತಲು ಬಿಟ್ಟು ನಾ ನೆರಳಿನಲ್ಲಿ
ಮಲಗಿಕೊಂಬೆನು. ಎತ್ತು ನಡೆವಷ್ಟು ಹೊತ್ತು
ಗಂಟೆ ಕೇಳುವುದು. ನಿಂತಾಗ ಹೇ ಎನಲು
ಎತ್ತು ನಡೆವುದು, ಗಂಟೆ ಕೇಳುವುದು ಮತ್ತು."

ಆಚಾರ್ಯರೆಂದರು: "ಅದೆಂತು? ಗಂಟೆಯು ಸದ್ದು
ಎತ್ತು ನಡೆದೇ ಆಗಬೇಕೆ? ನಿಂತಲ್ಲೆ
ನಿಂತು ತಲೆ ಕೊಡಹಿದರು ಸದ್ದಹುದು. ನಿನ್ನೆತ್ತು
ಇಂತು ಗೆಯ್ಯದು ಎಂದು ನೀನೆಂತು ಬಲ್ಲೆ?"

ಗಾಣದವನದಕೆ ಹೇಳಿದ: "ಗುರುಗಳಿತ್ತಿಗೆ
ಶಾಸ್ತ್ರಗೀಸ್ತ್ರವ ಕೇಳಿ ಅಂತೆಲ್ಲ ಚಳಕ
ಬಂದರೂ ಬರಬಹುದು. ಈ ನಮ್ಮ ಬಡ ಬಸವ
ಅಷ್ಟು ಬುದ್ಧಿಯನು ಕಲಿತಿಲ್ಲ ಈತನಕ."

## "ನಾನು ರಜಪೂತ್ನಿ"

ಹೆಂಗಸೊಬ್ಬಳು ಬಾವಿಯಲಿ ನೀರಿಗಾಗಿ
ಇಳಿದಿಹಳ. ಬಂದನಾಯೆಡೆ ಒಬ್ಬಯೋಧ.
ರಾಂಡ್ ದಾರಿಬಿಡು ಎಂದ. ರಾಂಡ್ ಎಂಬಮಾತು
ಬಾಯ್ಗೊಬ್ಬಿನುಡಿದುದು. ಅಹಂಗ್ರಹದಬಾಧ.

ನಿಮಿರಿನಿಂತಿತು ಹೆಣ್ಣಬಾಗಿದ್ದ ಒಡಲು;
ಶಿರವೆತ್ತಿ ಕಣ್ಣಿನಲಿ ಉಕ್ಕಿನೊಲು ನೋಟ
ಎದುರನೋಟವನು ತಾಕಿತು; ತುಟಿಗಳಲುಗವು;
ಮೂರ್ತಿಯನು ಕಂಡೆ ಆಯಿತು ಯೋಧನಾಟ.

ಕ್ಷಣದೆಕೇಳಿತು ಮಾತು: "ನಾನು ರಜಪೂತ್ನಿ
ರಾಜಪುತ್ರರ ತಾಯಿ." ಆತ್ಮಗೌರವದ
ಮಾತಿಂದ ಯೋಧ ತಾ ತಪ್ಪಿದೆನೆ ಎಂಬ
ನೋವಿಗೂ ಮಿಕ್ಕ ಆನಂದವನು ಸವಿದ.

"ತಪ್ಪುಮನ್ನಿಸಿ ತಾಯೆ" ಎಂದು ಕೈಮುಗಿದ.
ಆಕೆ ತನ್ನದೆ ಪಾತ್ರೆಯಲಿ ನೀರವೊಗೆದು
ಯೋಧನಿಗೆ ಕುಡಿಯೆಕೊಟ್ಟಳು. "ನನ್ನ ಹಿರಿಮಗ
ನಿನ್ನಂತೆ ಇದ್ದ; ಕುಡಿ, ತಾಯ್ ಎಂದೆ ಬಗೆದು."

ಅಯ್ಯೊ ಎಂದಿತು ಯೋಧನೆದೆ: "ತಾಯೆ, ಮಗನ
ನಿಜವಾಗಿ ತಿರುಗಿ ಕಂಡೆನು ಎಂದೆ ನೆನೆಯು"
ಎಂದು ಮಣಿದನು. ಸಂದುವಾತ್ಮಗೌರವಕೆ
ಗೌರವ, ಶೋಕ ಪ್ರೇಮಕೆ ಕರುಣ ವಿನಯ.

## ಬರ್ನಾರ್ಡ್ ಷಾ ಮಾತು

ಷಾ ಮಹಾಶಯನ ನಾಟಕವೊಂದು ನಡೆಯುತಿದೆ;
ನೋಡುತಿಹ ಮಂದಿ ಅದರಾನಂದದ
ತುಂಬು ಹೊಳೆಯಲಿ ಸಿಲುಕಿ ಮನವೊಪ್ಪಿ ಲೇಖಕನ
ಒಡನೆ ರಂಗದಿ ನೋಡ ಬೇಕೆಂದಿದೆ.

ಬಂದು ರಂಗದಲಿ ನಿಂತನು ಗ್ರಂಥಕರ್ತ; ಸಭೆ
ಹುಚ್ಚು ಹಿಡಿದಂತೆ ಚಪ್ಪಾಳೆ ತಟ್ಟಿ
ಮೆಚ್ಚಿಕೆಯ ತೋರಿತು. ಹೊಟ್ಟೆಯುರಿಯುವನೊಬ್ಬ
ಪಿಷ್ ಎಂದ ಬಲವಾಗಿ ಉಸಿರಕಟ್ಟಿ.

ಷಾ ಅವನ ಕಡೆಗೆ ತಲೆಬಾಗಿ ನುಡಿದನು ನಗುತ:
"ಅಣ್ಣ, ನಿನ್ನಭಿಮತಕೆ ನಾನೊಪ್ಪಿದೆ;
ಆದರೀ ನಾಲ್ಕು ಸಾವಿರ ಜನಕೆ ಪ್ರತಿಯಾಗಿ
ನಾವಿಬ್ಬರೆಲ್ಲಿ? ಸೋತೆವು ತಪ್ಪದೆ."

ನಾಟಕಕೆ ಸಮನಾಗಿ ಮಂದಿಯನು ಮೆಚ್ಚಿಸಿತು
ಷಾ ಗೆಯ್ದ ಅವಸರದ ನಗೆಯ ಟೀಕೆ;
ಹಗೆಯ ಮನಮುರಿದು ಮುಖಕೆಟ್ಟುದನು, ಸಭೆಯಜನ
ಕೈ ಕುಟ್ಟಿ ನಲಿದುದನು, ಹೇಳಬೇಕೆ?

# ದೊರೆ ದಳಪತಿ

ಹಿರಿತನದ ಕೋಟೆಯುಲಿ ಕುಳಿತು ಕೆಡು ನುಡಿಯಿಂದ,
ಇವರೆಮ್ಮ ಎದುರಿಸರು ಎಂದು,
ಬಡತನದ ಬಯುಲಿನಲಿ ನಿಂತವರ ಹೊಡೆಯುದಿರು ;
ತಿರುಗಿ ಬಹುದೊಂದಲ್ಲ ಒಂದು.

ಫ್ರಾನ್ಸ್ ದೊರೆಯು ಸೇನೆಯುಲಿ ಒಬ್ಬ ದಳಪತಿ ಇಹನು ;
ರೂಪು ನಡೆ ನಗೆ ನೋಟ ಎಲ್ಲ
ದೊರೆಯೆ ತದ್ವತ್ ; ಒಂದೆ ಪ್ರಾಯು ; ಈ ಸೋಜಿಗವ
ಎಲ್ಲರೊಲು ದೊರೆ ಕೂಡ ಬಲ್ಲ.

ತಾನು ದೊರೆಯುಂತಿರಲು ದಳಪತಿಗೆ ಕೊರೆಯೇನು ?
ಆ ಬೊಮ್ಮಯುಂತೆ ಈ ಬೊಮ್ಮ.
ದೊರೆಗೆ ದಳಪತಿ ತನ್ನ ತೆರನಿಹುದು ರುಚಿ ಇಲ್ಲ ;
ಏಗೆಯ್ವ ಎಂಬ ಒಮ್ಮೊಮ್ಮೆ.

ಒಂದು ಸತ್ಕಾರದಲಿ ಯೋಧವಸ್ತ್ರವ ಧರಿಸಿ
ದೊರೆ ಪ್ರಮುಖ ಜನದಿ ಸುಳಿಯುತ್ತ
ಎದುರಿನಲಿ ದಳಪತಿಯು ನೋಡಿದನು. ಅನುಚಿತದ
ಹಾಸ್ಯಕೆರಗಿತು ಆವನ ಚಿತ್ತ.

"ಓಹೊ ದಳಪತಿ ಚೆನ್ನವೇ?" "ಮಹಾಸ್ವಾಮಿಗಳ
ಕೃಪೆಯಿಂದ ಇಂತು." "ಸರಿ; ನಾನ್
ಎಷ್ಟೊ ಸಲ ಕೇಳ ಬಯಸಿಹೆನು; ನೀವಿಷ್ಟೊಂದು
ನನ್ನ ಹೋಲುವಿರಿ, ಇದು ಏನು?

"ನಿಮ್ಮ ತಾಯ್ ನಮ್ಮ ತಾಯವರ ಪರಿವಾರದಲಿ
ಅರಮನೆಯಲಿದ್ದರೇ ಎಂತು?"
ಅನುಚಿತದ ಹಾಸ್ಯ; ಅದ ಮಾಡಿದಾತನೊ ದೊರೆ;
ನುಡಿದ ದಳಪತಿ ಅಂತೆ ನಿಂತು:

"ತಾಯಲ್ಲ; ತಂದೆ ಇದ್ದರು." ಕೊಟ್ಟ ಹಾಗಕ್ಕೆ
ದೊರೆಗೆ ಸಂದಿತ್ತು ಮುಪ್ಪಾಗ.
ನಗೆ ಸತ್ತು ಮಾತು ತೋರದೆ ಬೇರೆ ಮಂದಿಯನ್
ನುಡಿಸೆ ನಡೆದನು ಅವನು ಬೇಗ.

## ರಾಯಪಾಲು

ಮಹಾರಾಜ ಮಾನ್‌ಸಿಂಹನ ಬಳಿಗೆ
ರಾಹೋಲ್ ಚೌಧುರಿ ಹರನಾಥ
ನಾಡ ಸ್ಥಿತಿಯನು ತಿಳಿಸಲು ಬಂದನು,
ಚದುರು ನಡೆಗೆ ಹೆಸರಾದಾತ.

ರಾಜಪ್ರತಿನಿಧಿ, ಆತನ ಸೇವಕ,
ರೈತರು ತೆರುತಿಹ ಕರಗಳಲಿ
ಬಹಳವ ತಾವೇ ತಿಂಬರು; ಉಳಿದಿಹ
ಕೊಂಚವ ದೊರೆ ಕೊಂಡನೆ ಕೊಳಲಿ.

ಚೌಧುರಿ ರಾಜನ ಸನ್ನಿಧಿಗೈದಿದ,
ಕಾಣಿಕೆ ತಟ್ಟೆಯ ಮುಂಚಾಚಿ;
ಕೊನೆಯಲಿ ಹೊನ್ನಿದೆ; ಪಕ್ಕಕೆ ಬೆಳ್ಳಿ;
ಕುರುಡು ಕಾಸು ಒಂದಿದೆ ಈಚೆ.

ಅರಸು ಹೊನ್ನೆಡೆಗೆ ಕೈಯನು ನೀಡಿದ;
ಚೌಧುರಿ ತಪ್ಪಿಸಿ "ಪ್ರಭುವೆ ಅದು
ಪ್ರತಿನಿಧಿಗಳ ಪಾಲು" ಎಂದನು. ದೊರೆ
ಬೆಳ್ಳಿಯ ತೋರಿಸಿ ನುಡಿದ: "ಇದು?"

"ಪ್ರತಿನಿಧಿಗಳ ಸೇವಕನದು" "ನಮಗೆ?"
"ಪ್ರಭುವಿಗೆಂದು ಇಲ್ಲಿದೆ ಕಾಸು:
ಇದುವರೆಗೂ ನಾವಿತ್ತಿಹ ಕರದಲಿ
ಭಂಡಾರಕೆ ಸಂದುದು ಈಸು."

ಚೌಧುರಿಯರ್ಥವ ತಿಳಿದನು ಮಾನ;
ಪ್ರತಿನಿಧಿ ಸೇವಕರನು ಕಿತ್ತು
ಇತರರ ನೇಮಿಸಿದನು. ಆ ಇತರರು
ತಿನ್ನರೆನಲೆ ರಾಜನ ಸೊತ್ತು?

## ಲೋಕ್‌ಮನ್

ಇಸ್ಲಾಮ್ ಧರ್ಮದ ಆದ್ಯರೊಳುಂಟು
ಲೋಕ್‌ಮನ್ ಹೆಸರಿನ ಹಿರಿಯ ಮಹಂತ;
ಎಷ್ಟೋ ಸಂಗತಿಯಲಿ ಈ ಕಾಲಕು
ನಡೆದಿದೆ ಈತನೆ ಹಾಕಿದ ಪಂಥ.

ಯಾರೋ ಇವನನು ಕೇಳಿದರೊಮ್ಮೆ:
"ಗುರುಗಳೆ, ಎಲ್ಲಾ ಸಂದರ್ಭದಲು
ನಿಶ್ಶಂಕೆಯ ನಿಶ್ಚಯವನು ನುಡಿಯುವ
ದೃಢವನು ಯಾರೆಡೆ ಕಲಿತಿರಿ ಮೊದಲು?"

"ಕುರುಡರಿಂದ ಕಲಿತೆನು," ಎಂದನು ಗುರು;
"ಎದುರೊಳೇನಿಹುದು ಹಳ್ಳವೊ ಮೇಡೊ,
ದಾರಿಯೊ, ಬೇಲಿಯೊ, ತಿಳಿಯದೆ ನಡೆಯರು
ಕುರುಡರು. ನನ್ನದದೇ ಕ್ರಮ, ನೋಡು."

# ಎಡ—ಬಲ

"ಕನ್‌ಸರ್ವೆಟಿವ್ ಪಕ್ಷ ಸೋತು ಹೋಯಿತು ; ಈಗ
ಲೇಬರೇ ರಾಜ್ಯವನು ವಹಿಸಿ
ನಡಸತೊಡಗಿದೆ ; ಶುಭವ ನೋಡಿತಲ ಇಂಡಿಯಾ
ಇಷ್ಟುದಿನ ಕಷ್ಟವನು ಸಹಿಸಿ,"

ಎಂದ ರಘುಪತಿ. ರಮಾನಾಥ ಹೇಳಿದ ನಗುತ :
"ಇಂಡಿಯಾ ಗೋವನೀವರೆಗೆ
ಬಲದ ಕೈ ಕರೆಯುತ್ತಿದ್ದಿತು. ಈಗ ಎಡ ಕೈಯೊ ?
ಒಳಿತು, ಜೈ, ಎಡದ ಕೈ ಕರೆಗೆ."

# ನರಿ ಮಂಗ

ಒಂಟೆಗಳುದ್ವಾಹೋತ್ಸವ ನಡೆದಿರೆ
ಗಾಯನ ಮಾಡುತ ಸಭೆಯಲಿ ಕತ್ತೆ
ಒಂಟೆಯ ಚೆಲುವನು ಹೊಗಳಿತು. ಒಂಟೆ
"ಎಂಥ ಗಾನ ಇದು" ಎಂದವು, ಮತ್ತೆ.

ಮದುವೆಗೆ ಸೇರಿದ ನರಿ ಮಂಗಗಳು
ತಮ್ಮತಮ್ಮಲೇ ಮುಸಿ ಮುಸಿ ನಕ್ಕು
ಎಂತೋ ಇದ್ದವು. ಅರಿಯದ ಹಂದಿ
ಕೇಳಿತು: "ಅಣ್ಣಾ, ಏನಿದು ಠಕ್ಕು?"

"ಮಂಗಗಳಿರುವೆಡೆ ಒಂಟೆಯ ಚೆಲುವನು
ಹೊಗಳುವ ಪರಿಯಿದು ನಾಚಿಕೆಗೇಡು"
ಎಂದಿತು ನರಿ. ಮರುನುಡಿಯಿತು ಮಂಗ;
"ಇಂಪಿನೊಳಿಂಪು ನರಿಗಳ ಹಾಡು."

# ಹೂಗಳ ವಾದ

"ನಾನೊಂದೇ ಹೂ ಈ ವನಕೆಲ್ಲ"
ಮುತ್ತುಗ ಮುಖವನು ಎತ್ತಿತು ಮೊರೆಯಿತು;
"ಕೆಂಪು ಹೊರತು ಬಣ್ಣಗಳೇ ಇಲ್ಲ"
ಎಂದುಳಿದೆಲ್ಲಾ ಬಣ್ಣವ ಜರೆಯಿತು.

ಬದಿಯಲಿದ್ದ ವನಮಲ್ಲಿಗೆ ಅದುರಿತು;
ಕೆಂಡವೆ ಆಯಿತು ಸಂಪಿಗೆ ಕನಲಿ;
ಪಾರಿಜಾತ ವೃಂತವನುಳಿದುದುರಿತು;
ಸುರಗಿ ಸುಮ್ಮನಿದ್ದಿತು ಗುಂಪಿನಲಿ.

ಪಾದರಿ ಸುರಹೊನ್ನೆಯ ಕುರಿತು: "ಅಹಾ
ಕೇಳಿದೆಯಾ" ಎಂದಿತು. ಸುರಹೊನ್ನೆ
ಹೇಳಿತು: "ಈ ತರಳನ ಮಾತು ಮಹಾ
ವಾಕ್ಯವೆ? ಹುಟ್ಟಿತು ನಿನ್ನೆ ಮೊನ್ನೆ."

ನಾಗಲಿಂಗವೆಂದಿತು: "ಅಷ್ಟೇ ಸರಿ;
ಇಂತಹ ಮಾತಿಗೆ ಮರುಮಾತಾಡಿ
ಏನು ಪ್ರಯೋಜನ?" ಹೇಳಿತು ಕೇಸರಿ:
"ಇದು ಹೂವೆ? ನನಗೆ ಹೂತನ ಬೇಡಿ."

ನಂದಿ ಮುತ್ತುಗಕೆ ಎಂದಿತು ; “ಅಣ್ಣ,
ನೀ ಹೂ ನಿಜ ; ಆದರು ನೀ ಒಂದೇ
ಹೂ ಎನಲಾಗದು. ಮುಚ್ಚಿಹ ಕಣ್ಣ
ತೆರೆ ; ನೋಡು, ನಿನ್ನ ಹಿಂದೆ ಮುಂದೆ ;

“ನೀ ಹೂ ಎಂತೋ ಅಂತೇ ಹೂವೀ
ಪಾದರಿ ಕುರವಕ ಮಲ್ಲಿಗೆ ಸಂಪಿಗೆ.
ಅಲ್ಲಗಳೆವುದೇ ನಮ್ಮನು ನಾವೇ ?
ಕೊನೆಯೋ ಮೊದಲೇ ಬಣ್ಣಕೆ ಕಂಪಿಗೆ ?

“ವನವನ ಹೂತಿದೆ ; ಹೂವದ ಗಿಡವೇ
ಕಾಣದು ವನದಲಿ, ನೋಡು ; ವಸಂತ
ಗಿಡಮರ ಬಳ್ಳಿಯ ಒಂದನು ಬಿಡದೆ
ಸೋಕಿರುವನು ; ಪುಷ್ಪಕುಲ ಅನಂತ.”

ಲಂಟಾನಾ ಹೂ ಗೊಂಚಲು ನುಡಿಯಿತು :
“ಮುತ್ತುಗದಣ್ಣನ ನುಡಿಯನು ನೀನು
ಅರಿತುಕೊಳ್ಳದೆಯೆ ದೂರಲು ನಡೆಯಿತೆ ?
ನೀ ಹೂ ಅಲ್ಲೆನಲಿಲ್ಲವನೇನೂ.

“‘ಹೂವಿನ ಜಾತಿಗೆ ಸೇರಿದರಾಯಿತೆ ?
ನರುಗಂಪಿರುವುದೆ ಹೂವಿನ ಲಕ್ಷಣ’
ಎಂದು ನಿಮ್ಮವರು ಮಾಡಿದ ಕಾಯಿದೆ
ತಪ್ಪೆಂಬನು ; ಇದೆ ಅವನ ವಿವಕ್ಷಣ.

“ಕಂಪು ಎಂದರೂ ನಮ್ಮಂತವರು
ಒಪ್ಪಿಕೊಳ್ಳುವೆವೊ ಏನೋ! ನೀವು
ಕಂಪಿನ ಜೊತೆಯುಲಿ ಸೇರಿಸುವ ನರು
ತೀರಾ ಹೊಲಸು ಎಂಬೆವು ನಾವು.

“ನೀವೆಲ್ಲರು ನರುನರು ಎನ್ನುವ ಆ
ಪೊಗರಿನ ಕಂಪಿಗೆ ಯಾವುದು ಆಳತೆ?
ನೀವು ಸಮ ಎಂದರೆ ಅದೆ ಸಮಯು,
ನೀವು ಒಳಿತು ಎಂದರೆ ಅದೆ ಒಳಿತೆ?

“‘ವನ ವನ ಹೂತಿದೆ!’ ಮಾತಿನ ಸೊಗಸೆ!
ಹೂ ಎಂದಿರ ನಮ್ಮನು ಈ ಮುಂದು?
ನಿವ್ಮೊಲವಿನ ಕಣ್ಣೀರಿನ ಬೊಗಸೆ
ತರ್ಪಿಸುತಿದೆ ಸೋದರರನು ಕೊಂದು.

“ನೀವು ಮಾಡಿದುದೆ ಶಾಸ್ತ್ರ, ಜ್ಯೋತಿಷ;
ನೀವು ಬರೆದು ಗೆರೆ ಎಳೆದಿಹ ಜಾತಕ
ಇಹರನೆ ಇಲ್ಲ ಎನುತಿದೆ. ಈ ವಿಷ
ಸಲ್ಲ. ನಿಲ್ಲಲಿ ಇನ್ನೀ ಪಾತಕ.

“ನಿಮ್ಮಾ ಕಂಪೇ ನರು ಎನಲೇಕೆ?
ಕಂಪನಿತೇನೂ ಇಲ್ಲದ ತುಂಬೆ
ಶಿವನ ಸೇರದೆ? ನಿದರ್ಶನ ಬೇಕೇ
ಬೇರೆ? ಗಮಗಮಿಸಿತೇ ದಾಳಿಂಬೆ?

“ ನೀವಾವುದ ನರುಗಂಪೆಂಬಿರೊ ಆ
ಕಂಪಿರುವುದೆ ಹೊಂಗೆಯ ಹೂವಿನಲಿ?
ಆದರು ಅದರಾ ಎಡೆಗೈತರುವ
ತುಂಬಿ ನಿಮ್ಮ ಸೇರದು ಏನೆನಲಿ?

“ ನರುಗಂಪಿನ ಹೂ ನಾವೇ ಶ್ರೇಷ್ಠ
ಎಂದೇ ಬೀಗಿರುವಿರಿ ಬಹುಕಾಲ.
ಮುಗಿಯಿತು ನಿಮ್ಮಾ ಹಮ್ಮಿನ ಕೋಷ್ಠ;
ಮುಗಿದಿರುವುದು ಈ ಮಹೇಂದ್ರಜಾಲ.

“ ‘ ಫಲವಾಗುವ ಹೂ ಹೂವೇ ಅಲ್ಲ’
ಇಂತಿದೆ ನೋಡಲು ನಿಮ್ಮಾ ಎಣಿಕೆ.
ಬೆಡಗಲಿ ಮೆರೆಯೆನೆ ಮೆರೆಯಲು ಬಲ್ಲ
ಹೆಣ್ಣು, ಹೆರುವಳೇ ಮಗುವನು ಗಣಿಕೆ?

“ ಕಾಣದೆ ನಿಮಗಾ ಬತ್ತದ ಗದ್ದೆ?
ಪೈರೊಣಗುತಲಿದೆ; ಗೊಬ್ಬರವಿಲ್ಲ;
ಗಮಗಮ ಎಂಬಲಿ ನಿಮಗಿಹ ಶ್ರದ್ಧೆ
ಅದನುಳಿಸುವ ಕೆಲಸಕೆ ಬರದಲ್ಲ!

“ ಸ್ವಾರ್ಥದ ಕೋಡಿನ ತಲೆಯಲಿ ನಿಂತು
‘ ಲೋಕದ ದುಃಖಗಳನು ಮರೆತೇವೆ’
ಎಂದು ಹೊರಟಿರುವ ನಿಮ್ಮನು ಎಂತು
ಹೂಗಳೆನ್ನುವುದು? ಸ್ವಾರ್ಥವೆ ಹೂವೆ?

"ಪೈರನು ಸಲಹಲು ಗೊಬ್ಬರವಾಗಿ
ಮುಗಿಯುವ ಹೊಂಗೆಯ ನಾ ಹೂವೆಂಬೆ;
ಯಾರು ಜಗದ ಉಪಯೋಗಕೆ ಬಾಗಿ
ಬಾಳರು, ಅವರನು ಹೂವೆನೆ ನಂಬೆ."

"ಇವರನು ಹೂ ಅಲ್ಲೆಂದೆವೆ ನಾವು?"
ಎಂದಿತು ಪಾದರಿ. ಹೇಳಿತು ಸುರಯಿ:
"ಕಾರಣವಿದ್ದೇ ನೋವುದೆ ಬೇವು?
ತಾನೇ ಕಹಿವುದು, ಊಹಿಸಿ, ಕೊರಗಿ."

"ಮುತ್ತುಗ ಆಡಿದ ಮಾತೊಂದತ್ತ;
ಲಂಟಾನಾ ನುಡಿದುದು ಇತ್ತಿತ್ತ."
"ಆ ದೊರೆ ಪಿತ್ತಕೆ ಈ ಅರೆ ಚಿತ್ತ
ಬೆರೆತಿಂತಾಗಿದೆ ಮುಂದಕೆ ಎತ್ತ?"

"ತನ್ನೆದೆಯಲಿ ತಾ ಕಂಪನು ತಂದಿತೆ
ಯಾವುದೆ ಹೂ?" "'ನಾಗೊಬ್ಬರ ಅಹೆನು
ಕಂಪಿನ ಹೂ ಆಗೆನು,' ಎಂದೆಂದಿತೆ
ಏನು ಹೊಂಗೆ? ಅರಿವೆವೆ ಈ ಹವಣು?"

"ಕೇಳಿತೆ ಪಿತ್ತ?" "ಅದು ಅವರತ್ತ."
"ನರು ನರು ಎಂಬರು ಉಸುರುವ ನಾತ...."
"ಸಹಿಸಲಾರೆ ನಾನಿವರೀವುತ್ತ...."
"ಏನು ಅಹಂ!" "ಇಹುದಿದಕೆ ಪಪಾತ."

ಎಂದಿತು ಅಲ್ಲೊಂದಿಲ್ಲೊಂದು ದನಿ;
ತುಮುಲವಾಗಿ ಬೆಳೆಯಿತು ಈ ವಾದ.
ಹೇಳಲೇನಿದರ ಸ ರಿ ಗ ಮ ಪ ದ ನಿ.
ಯಾವುದಕೂ ಹೇಸದು ದಾಯಾದ.

ತಾನುದರದಿ ತಾಳಿದ ಹೂವೀತೆರ
ವಾದಿಸೆ, ಕೇಳಿದ ನಗರೋದ್ಯಾನ
ಹೇಳಿತು: "ಮಕ್ಕಳೆ, ಏತಕೆ ಭೀಕರ
ವಾದವಿವಾದ? ಬಿಡಿರಿ ಅಭಿಮಾನ.

"ಹೂವಾಗಿರುವಿರಿ: ಅದುವೇ ಪುಣ್ಯ;
ನಿಮ್ಮೆಲ್ಲರನೂ ಮಾಡಿದ ದೈವ
ನಡೆಸಿದಂತೆ ನಡೆಯುವುದೇ ನಾಣ್ಯ.
ಒಬ್ಬನೆ ಗೆಯ್ದನು ಎಲ್ಲಾ ಹೂವ.

"ಎಲ್ಲಾ ಎನಲೇ? ಇದು ಅದು ಬೇರೆಯೆ?
ಅರಿತಿರೊ, ನೀವೆಲ್ಲಾ ಒಂದೇ ಹೂ;
ನಿಮ್ಮೆಲ್ಲರಲೂ ಲೋಕಕೆ ಸಾರಿದೆ
ಒಂದೇ ಸ್ವರ್ಗದ ಒಂದೇ ಬೇಹು.

"ವಸಂತ ಬಂದನು, ನನ್ನೆಡೆ ನಿಂದನು;
'ನೀನೂ ನಂದನವಾಗು' ಎಂದು
ಕಿವಿಯೊಳೂದಿದನು; ಹರುಷಕೆ ಸಂದೆನು;
ನೀವು ಎಲ್ಲರೂ ಆದಿರಿ ಅಂದು.

"ಅವನಾ ಆನಂದದ ಹೊರರೂಪ,
ನಿಮಗೆ ಏಕೆ ನಾವೆಂಬಭಿಮಾನ?
ಹತ್ತು ತೆರದ ನಿಮ್ಮೆಲ್ಲ ಕಲಾಪ
ಅವನದೆಂದರಿಯೆ ಅದುವೇ ಜ್ಞಾನ.

"ಬಾಳಿರಿ ಎಲ್ಲರು ; ಅರಿತವೊಲೆಲ್ಲರು
ಬೆಳೆಯಿರಿ, ಅರಳಿರಿ ; ಕಂಪನೆ ಬೀರಿ ;
ಗೊಬ್ಬರವಾದರು ಸರಿಯೇ. ಕ್ಷುಲ್ಲರು,
ಎರಡೂ ಆಗದವರು ದಿನ ತೀರಿ."

ತಾಯಿ ಪದಾರ್ಥವೆ, ತಾಯ್ನುಡಿ ನನ್ನಿಯೆ,
ತಮ್ಮನು ತಾವರಿಯುದ ತನುಜರಿಗೆ?
ಕಾದುವ ಮಕ್ಕಳ ಬೇಡವೊ ಎನ್ನುವ
ತಾಯಿ ತಾಯೆ? ಮೂಲೆಯ ಕಸಪರಿಗೆ.

ಬೇಡವೆಂದರೂ ಹೂಗಳ ಗುಂಪು
ಕೇಳದೆ ತಮ್ಮಂದದಿ ತಾವರಳಿ
ಕಾದುತ ಇದ್ದವು. ಗಾಳಿಗೆ ಕಂಪು
ಸಂದೊಡನೆ ನೆಲವ ಕಂಡವು ಉರುಳಿ.

ಗೊಬ್ಬರವಾದೆಯು, ಆಗದೆ ಹೋದೆಯು,
ಎಂಬುದ ಕೇಳದೆ ಹರಿಯಿತು ಗಾಳಿ ;
ಸೇನಾನಿಯುನೇ ಕೇಳದು ; ಪ್ಯಾದೆಯು
ಬೆಸಗೊಳ್ಳದೆ ನಡೆಯದೆ ವೈಹಾಳಿ?

# ಗಂಟು ಜಗಳ

ರಾಮಣ್ಣ ಒಂದು ಎಮ್ಮೆಯ ತಂದ; ಭೀಮಣ್ಣ
ಅದ ನೋಡಿದವನು, "ನಿನ್ನೆಮ್ಮೆ ತಕ್ಕಷ್ಟು
ಒಳ್ಳೆಯದೆ; ಆದರೂ ಹಸುವ ಕಟ್ಟುವುದೆ ಸರಿ;
ಇನ್ನೆಷ್ಟು ಹೇಳಿದರು ಎಮ್ಮೆಯೇ ರೊಷ್ಟು;"

ಎಂದು ಬುದ್ಧಿಯ ನುಡಿದ. ನುಡಿದುದರ ಮರುದಿವಸ
ಎಲ್ಲಿಂದಲೋ ಒಂದು ಎರವಲೆಮ್ಮೆಯನು
ತಂದು ಮನೆಯಲ್ಲಿ ಕಟ್ಟಿದ. ಇದಕೆ ರಾಮಣ್ಣ
ಹೇಳಿದ: "ನನ್ನಲ್ಲಿ ಕಂಡ ಕಮ್ಮಿಯನು

"ಭೀಮಣ್ಣನೂ ಕಟ್ಟಿಕೊಂಡನೇ! ಎಮ್ಮೆಯೇ
ತಪ್ಪೆಂದನಲ್ಲ; ಈಗೇನಾಯ್ತು ಟೀಕೆ?"
ಗೆಳೆಯ ಶಾಮಣ್ಣ ಮರು ನುಡಿದ: "ಅವನೆಮ್ಮೆಯನು
ನೋಡದೆಯೆ ಅದ ನೀನು ದೂರುತಿಹೆಯೇಕೆ?"

ರಾಮಣ್ಣನೆಂದ: "ಗೆಳೆಯನ ಎರವಲೆಮ್ಮೆಯನು
ನಾ ದೂರಲಿಲ್ಲ. ಎಮ್ಮೆಯೆ ಕೂಡದೆಂದು
ಈ ದಿವಸ ಹೇಳಿ ಮರು ದಿವಸವೇ ಭೂಪತಿ
ಎಮ್ಮೆ ಕಟ್ಟಿದ. ನುಡಿದುದೊಂದು; ನಡೆ ಒಂದು."

"ನೀನು ಒಬ್ಬನೆ ಹಾಲು ಕುಡಿಯಬೇಕೆನ್ನುವೆಯ?
ಪರತೃಪ್ತಿಯನು ಕಲಿಯಬೇಕು, ರಾಮಣ್ಣ;
ಗಂಟು ಜಗಳದ ಬಂಟನಾಗದಿರು, ಒಳಿತಲ್ಲ;"
ಎಂದು ನೀತಿಯ ಕಲಿಸಿ ಗೆಲಿದ ಶಾಮಣ್ಣ.

## ಮೂರು ಕರು

ಮೂರು ಕರು ಜೊತೆಯಾಗಿ ಮಾಳದಲಿ ಮೇಯುತ್ತ,
ದೂರದಲಿ ಒಳ್ಳೆ ಹುಲ್ಲಿಹುದೆಂದು ತೋರಿ,
ಅತ್ತ ಸಾರಿದವು. ದಾರಿಯಲಿ ಕಾಲುವೆ ಒಂದು:
ಕರುಗಳಲಿ ಒಂದು ದಾಟಿತು ಅದನು, ಹಾರಿ.

ಬೇಸಾಯಗಾರ ಗೌಡನ ಮನೆಯ ಕರು ಅದು.
ಜೋಯಿಸರ ಮನೆಯ ಕರು ಇನ್ನೊಂದು, ತಾನು
ಕಾಲುವೆಯ ದಾಟಬಲ್ಲೆನೆ ಎಂದು ಹಿಂದೆಗೆದು,
ಮತ್ತೆ ಹಾರಿತು: ಸಾಲದಾಯ್ತೊಂದು ಗೇಣು.

ಮೂರನೆಯ ಕರು ಗೌಳಿಗರದು. ಇತ್ತಲೆ ನಿಂತು
"ನಾನತ್ತ ಬರಲಾರೆ ಕಾಲುವೆಯ ದಾಟಿ"
ಎಂದು ಹೇಳಿತು. ದಾಟಲಿಲ್ಲ ಸರಿ; ಕಾಲು
ದಾಟದೆಯೆ ಬರಿ ಭಯಕೆ ನಡುಗಿತಾಪಾಟಿ.

ಮೊದಲ ಕರು ಜೊತೆಯುವರ ಕುರಿತು "ಏನಯ್ಯ,
ನಿಮ್ಮ ತಾಯದಿರ ಕೆಚ್ಚಲಲಿ ಹಾಲಿಲ್ಲೆ ?
ಸಣ್ಣ ಕಾಲುವೆ ದಾಟುವುದಕಿಷ್ಟು ಕಷ್ಟವೆ"
ಎಂದು ಹಳಿದಿತು, ಉಳಲು ಬೆಳೆಯುತಿಹಪಿಳ್ಳೆ.

ಜೋಯಿಸರ ಕರು "ನಮ್ಮ ತಾಯ ಕೆಚ್ಚಲಲಿ
ಒಂದು ಮೊಲೆಯಲಿ ಮಾತ್ರ ಹಾಲಿಹುದು" ಎಂದಿತು.
"ಓ! ನಮ್ಮ ತಾಯ ಕೆಚ್ಚಲಲೆರಡು ಮೊಲೆಯಲಿ"
ಎನೆ ಗೌಡಕರು, ಜೋಯಿಸರದು ಮನನೊಂದಿತು.

ಕಾಲುವೆಯ ಇತ್ತ ನಿಂತಿದ್ದ ಗೌಳಿಗರ ಕರು
ಈ ಎರಡು ನುಡಿದ ನುಡಿ ಕೇಳಿ "ಅಣ್ಣದಿರೆ,
ಕೆಚ್ಚಲೆಂದರೆ ಏನು? ನಮ್ಮ ತಾಯಿಗಿಲ್ಲೇನೊ"
ಎಂದು ಉಸುರಿತು. ಎಲಾ ಗೌಳಿಗನ ಚದುರೆ.

## ವೀಣೆಯ ಕೊಟ್ಟಿಗೆ

ಬಾದ್ಷಾ ಒಮ್ಮೆ ವೈಣಿಕನನು
　　ಕರಸಿ ಎದುರು ಕೂರಿಸುತ,
ನುಡಿಸಿ ಎಂದು ಬೆಸಸಿದರು.
　　ಅರಸುಹುಬ್ಬು ಹಾರಿಸುತ.

ಸುತ್ತ ಬಂದು ಸೇರಿದರು
　　ನಾಲ್ಕೊ ಆರೊ ಹೆಂಡರವರು;
ಮದುವೆ ಆಗದವರೊ, ಆದ
　　ಹೆಣ್ಣೊ! ಯಾರು ಕಂಡರಿವರು?

ಸರಸ; ಹರುಷ; ಸುಖಾಲಾಪ;
　　ಸುಣ್ಣ; ಸುರಮ; ಅಡಕೆ ಎಲೆ
ದೊರೆಯ ಮನವ ಸೆಳೆವ ಆಟ;
　　ಸುಳಿವ ಕೈಯ ಕುಲುಕು ಬಳೆ.

ಜೊತೆಗೆ ಇವರು ಹೆತ್ತ, ಹೆರದ
　　ಹಸುಳೆ, ತರಳ, ಬಾಲಕರು;
ಕೂಗಿ ಹಾರಿ ಚೀರಲವು,
　　ತಡೆವ ಮೂಳ ಶ್ಯಾಲಕರು.

ದೊರೆಗೆ ಹತ್ತು ಮನಸು : ಒಂದು,
ಅರ್ಧ, ಇನಿಸು, ಇತ್ತ ಕಡೆ.
ಚಿಲುಮೆ ಸಿದ್ಧವಾಗುತಿಹುದು ;
ಕೂಸು ಬಹುದು ಮುತ್ತು ಕೊಳೆ.

ಇಂತ ಸಂತೆಯೊಳಗೆ ಗಾನ
ವೈಣಿಕನಂಗುಳಿಯ ಸಾರಿ
ವೀಣೆಯಲ್ಲಿ ಮೂಡಬಹುದೆ?
ಮಂಕು ಕುಳಿತ ವೀಣೆಗಾರ.

"ಯಾಕೆ? ನುಡಿಸಿ," ಎಂದು ದೊರೆ
ಕಣ್ಣ ತೆರೆದು ಸನ್ನೆಗೈದು
ಮತ್ತೆ ಬೆಸಸೆ, ಈತ ಮಿಡಿದ.
ಸ್ವರ ಹೊರಟವು ನಾಲ್ಕು ಐದು ;

ಮುಂದೆ ಹೊರಡಲಿಲ್ಲ. ಬಾದ್ಷ
ನುಡಿದರೊತ್ತಿ ; "ಏನಿರೈಯು!
ಎದುರಿಗಿಹುದು ಕಟ್ಟಿಗೆಯೋ
ವೀಣೆಯೋ? ನಡಸಿ ಕೈಯ."

ವೈಣಿಕನಿಗು ಕೆಟ್ಟಿತು ಮನ.
"ಎದುರಿಗಿಹುದು ಕಟ್ಟಿಗೆಯೇ
ಅಹುದು, ಖಾವಿನ್‌ದ್ ; ಇದನು ಸಿಗಿದು
ಕಳುಹಬೇಕು ಕೊಟ್ಟಿಗೆಗೆ."

## ಲೆಕ್ಕ—ಲೇಖನ

ಎಂದ ಲೇಖಕ: "ಲೆಕ್ಕ ಸುಲಭ, ಲೇಖನ ಕಷ್ಟ;
ಎರಡೆರಡು ನಾಲ್ಕೆನಲು ಆಯ್ತು ಗಣಿತ;
ನೀ ಬರುತ್ತಾನೆ, ನಾ ಹೋದ, ಎನೆ ಮುಗಿಯಿತು
ನಾ ಒಬ್ಬ ಲೇಖಕ ಎಂಬ ಕುಣಿತ."

## ದೊಡ್ಡವರ ಗಣಿತ

ಯಜಮಾನ ಹೇಳಿದ ಗುಮಾಸ್ತನಿಗೆ: "ಎರಡೆರಡು
ನಾಲ್ಕೆಂದು ನನಗೆ ನೀ ಕಲಿಸುವೆಯ, ಧೃಷ್ಟ?
ಎರಡೆರಡು ಎಷ್ಟೆಂದು ಹೇಳುವನು ನೀನಲ್ಲ;
ನಾನು; ಐದೆಂದು ಬರಿ; ಅದು ನನ್ನ ಇಷ್ಟ."

## ಮೀರಾ

ಬೃಂದಾವನದಲಿ ನಂದಕಿಶೋರನ
ಆಟದ ತಾಣಗಳನು ಕಣ್ಣಾರ
ನೋಡಿ ತಣಿವ ಹಿರಿಯಾಸೆಯ ಭರದಲಿ
ಸಾರಿ ಬಂದಿಹಳು ಮೀರಾ.
ಮಂದರ ಗೋವರ್ಧನ ಉದ್ಧಾರಾ
ನಂದ ಯಶೋದಾ ಪ್ರಿಯ ಸುಕುಮಾರಾ
ಸುಂದರ ವೇಷಾ ಜಗದಾಧಾರಾ
ಎಂದು ಭಕ್ತಿಯಲಿ ಮೊರೆದು
ಐತಂದಿರುವಳು ಹರಿ ಹರಿದಾರಿಯ
ದೂರವನು ಅಬಲೆ ಜರಿದು.

ಪುಣ್ಯಕ್ಷೇತ್ರದ ಕಾರ್ಯವ ಆ ದಿನ
ನಡಸುತ ನಿಂದಿರುವನು ಗೋಸ್ವಾಮಿ
ಜೀವಾನಂದ ಮಹಾಶಯ; ನಿಷ್ಠುರ
ವಿರಕ್ತ, ಬಹು ನಿಷ್ಕಾಮಿ;
ಕಾಮಿನಿ ಆಶೀವಿಷ, ಹಾಲಾಹಲ;
ಎದುರಲಿ ಹೆಣ್ಣಿರೆ ಬಿಡದು ಕುತೂಹಲ;
ಸಲ್ಲದು ಮುಕ್ತಿ ಸ್ಥಲದಲಿ ಕಾವಳ;
ಎಂದುದೆ ಒಂದು ಕಠೋರ
ಶಾಸ್ತ್ರ ಗೆಯ್ದಿಹನು: ಈಯೆಡೆ ಅಡಿಯಿಡೆ
ಇಲ್ಲ ಹೆಣ್ಗೆ ಅಧಿಕಾರ.

ಕ್ಷೇತ್ರದ್ವಾರಕೆ ವೇಗದಿ ಸಾರಿದ
ಭಕ್ತೆಗೆ ಅಲ್ಲಿಯ ಬಾಗಿಲ ಕಾವ
ಒಡೆಯನಾಣತಿಯ ತಿಳಿಸಿದ; ಆಕ್ಷಣ
ಕುದಿಯಿತು ಹೆಣ್ಣಿನ ಜೀವ.
ಶ್ಯಾಮ ಸುಂದರಾ ಪ್ರಿಯವ್ರಜ ಬಾಲ
ಗೋಪ ವಧೂ ಜನ ಪ್ರೇಮ ವಿಲೋಲಾ
ಜ್ಯೋತ್ಸ್ನಾ ವಿಸ್ತೃತ ಸುರಾಸಲೀಲಾ
ವೃಂದಾವನವಿನ್ನು
ಗಂಡು ಜೀವಗಳ ಮಾತ್ರವೆ ಹೊರೆವುದೆ?
ಹಾಳಾಗಲಿ ಹೆಣ್ಣು?

ಅನ್ನವನೊಲ್ಲದೆ ನೀರಿಗೆ ನಿಲ್ಲದೆ
ಕೃಷ್ಣಾ ನಿನ್ನಯ ಸೇವೆಗೆ ತಂದ
ಪ್ರೇಮ ವ್ಯರ್ಥವೇ, ದೋಷವೆ ಹೆಣ್ಣಿನ
ಒಡಲಲಿ ಬಂದುದರಿಂದ?
ಯಾರು ಕಂಡರಿದ ನಿನ್ನ ಚರಿತೆಯಲಿ?
ದೋಷ ನಿಜಕೆ ಗೋಸ್ವಾಮಿಯ ಮತಿಯಲಿ.
ಇಲ್ಲಿ ಅಂದು, ಹರಿ, ನಿನ್ನ ಜೊತೆಯಲಿ
ಚೆಲುವಿನ ಈ ವನಗಳಲಿ
ಗಂಡಿಗು ಹೆಚ್ಚಿಗೆ ಹೆಣ್ಗಳು ನಡೆಯರೆ
ಹಗಲಲಿ ಅಂತೆ ಇರುಳಲಿ?

## ಸುನೀತ

ಹಸುಳೆಯು ದಿನ ಎದೆಹಾಲನು ಕುಡಿಸಿ,
ಬೆಳೆದ ದಿವಸ ಬಿದ್ದರೆ ಹಿಡಿದೆತ್ತಿ,
ಉಡುಗೆಯುಡಿಸಿ ಚೆಂತೊಡುಗೆಯ ತೊಡಿಸಿ,
ಇರುವೆಯ ಗೂಡೆನೆ ಮುತ್ತಿ,
ಹರೆಯದಿ ಜೊತೆಯಲಿ ಸರಸವನಾಡಿ
ಬೇಸರ ಬರದಂದಕೆ ಸರಿಜೋಡಿ
ಓಡಿ ಬೇಡಿ ಕಾಡಿ ಹಾಡಿ
ಹೆಣ್ಣೆಂಬರ ಕುಲ ಆಗ
ರಚಿಸಿದ ಭಕ್ತಿಯ ಗೋಪುರ ಇಂದು
ಹುತ್ತಾಯ್ತು : ಗಂಡೆ ನಾಗ.

ಕುದಿಯಿತು ಹೆಣ್ಣಿನ ಜೀವ; ಕುದಿಯಿತು
ಅವಳ ಅಡಿಯ ಅಡಿಯಲಿ ಭೂಮಿ;
ಇಂಥ ಭಕ್ತಿಯನು ಬೇಡವೆನ್ನುವನೆ?
ಎಲಾ ಎಲಾ ಗೋಸ್ವಾಮಿ!
ತಿಂಗಳಿರುಳುಗಳ ಅಂದಿನ ಗಾನ
ತಣಿಸಿದ ತೃಣ ಜಲ ತರು ಪಾಷಾಣ
ಭಕ್ತೆಯ ಬರವಿಗೆ ತಳೆದಭಿಮಾನ
ಕುಗ್ಗಿತು ಅವಳಭಿಭವಕೆ.
ಇಂದೆ ಕುಗ್ಗಿತು? ಕುಗ್ಗಿತು ಎಂದೊ
ಪ್ರಕೃತಿಯ ಲವಲವಿಕೆ.

ಗಾಳಿಯು ಹರಿವಿನಲೇನೋ ಬೇಸರ;
  ಬೆಳಕಲಿ ಬೆರೆತಿದೆ ಏನೋ ಮಂಕು;
ತಳಿರೂ ಹೂವೂ ಕಾಣವು ವನದಲಿ;
  ತಟ್ಟಿದೆ ಯಾವುದೊ ಸೊಂಕು.
    ಹೆಂಗಳು ಸೇರದ ಮುಕ್ತಿಯು ನೆಲದಲಿ
    ಬಹುಶಃ ಸೇರದು ನಮ್ಮಯ ಚಿಲಿಪಿಲಿ
    ಎಂದು ಹಕ್ಕಿ ನೈರಾಶ್ಯದ ತಳದಲಿ
      ಸ್ವರ ಮರೆಸಿದ ರೀತಿ
    ಸುಮ್ಮನಿಹವು ಗಿಳಿ ಗೊರವಕ ನವಿಲು;
      ಮೌನ ಮುದ್ರಿಸಿತು ನೇತಿ.

ತಾನೂ ಹೆಣ್ಣಲ್ಲವೆ? ಆಶ್ರಮದ
  ಮುಖ್ಯದ್ವಾರದ ಆಚೆಗೆ ಯಮುನಾ
ಚೆಂದದಗತಿ ಮರೆತಂದದಿ ಹರಿವಳು
  ಸೊಗಸದೆ ಏಕೋ ಗಮನ.
    ಮಿಾಯ ಬರುವ ಹೆಣ್ಗಳ ಕಾಲಂದುಗೆ
    ಮುಡಿಯಿಂದುದುರಿದ ಮಲ್ಲಿಗೆ ಬಂದುಗೆ
    ಮರಳಿ ಬಾರವೇ? ಬಹವೇ? ಎಂದಿಗೆ
      ಎನ್ನುತ ತನ್ನೊಳಗೇ
    ಆಸೆಯೊಡನೆ ಸಂವಾದಿಸಿ ನಡೆದಳು
      ನೊಂದು ಎಲ್ಲ ಗಳಿಗೆ.

ಅಂದೇ ನೊಂದಸು ನೊಂದವು ಮತ್ತೆ
ಭಕ್ತೆ, ರಾಣಿ, ಮೀರಾ ಜೊತೆಗೆ.
ಯುಗಯುಗಾಂತರವೆ ಸೃಷ್ಟಿ ದುಃಖಿಸಿದೆ
ಹೆಣ್ಣಿಗಾದ ಈ ಗತಿಗೆ.
"ಏನು ಮಾಡುವಳೊ ಮೀರಾ ಈಗ!
ಹೊರಟೇ ಹೋದಳೆ ಒಳ್ಳಿತು ಬೇಗ!
ಸಾಕೀ ಅವಮಾನದ ಅನುಭೋಗ"
ಎಂದಾ ನೆಲ ಜಲ ತೀರಾ
ಕುದಿದಿವೆ ನೋವಲಿ; ಕುದಿದಳು ಅಂತೇ
ಜೀವದಾಳದಲಿ ಮೀರಾ.

ಜೀವದಾಳದಲಿ ಕುದಿದು ಆಕ್ಷಣವೆ
ಮನದಲಿ ನಿಶ್ಚಯಗೆಯ್ದಳು ಮೀರಾ.
ಹೆಣ್ಣ ವಾಣಿಯಲಿ, ಅಚ್ಚರಿ ಎನಲೇ,
ಮೂಡಿತೊಂದು ಅಧಿಕಾರ.
ಅಚ್ಚರಿಯೆನಲೇತಕೆ? ಇದೆ ವಾಣಿ
ರಾಜ್ಯವನಾಳಿತು; ಈ ಫಣಿ ವೇಣಿ
ರಾಣಾ ಕುಂಭನ ಬಿಂಕದ ರಾಣಿ.
ತನ್ನನು ನಿಲ್ಲಿಸಿದ
ದ್ವಾರಪಾಲಕಗೆ ಒರೆದಳು: "ನಿಮ್ಮ
ಪ್ರಭುವಿಗೆ ಸಲ್ಲಿಸಿದ:

"ಬೃಂದಾವನ ಕೃಷ್ಣನ ಅಂತಃಪುರ;
ಇಲ್ಲಿ ಶ್ರೀ ಕೃಷ್ಣ ಒಬ್ಬನ ಹೊರತು
ಗಂಡಿರಬಾರದು. ಜೀವಾನಂದರು
ನಡೆಯಲಿ ಈ ಹದನರಿತು.
ಕೃಷ್ಣನ ರಾಣೀವಾಸವ ಹೊಕ್ಕು
ತಾಣ ತಮ್ಮದೆನ್ನುವುದಕು ಮಿಕ್ಕು
ನಾನೂ ಗಂಡು ಎನ್ನುವ ಸೊಕ್ಕು
ಯಾರಿಗು ಸಲ್ಲದು, ಜೋಕೆ!
ಇದ ಮರೆತವರಿಗೆ ಕೃಷ್ಣನ ದಂಡನೆ
ತಪ್ಪದು: ಹೇಳಲಿ ಏಕೆ?

"ರಾಣೀವಾಸದ ಸೇವೆಗೆ ಇಲ್ಲಿ
ಬರಿಯ ಹೆಣ್ಣೇ ಹಿಂಡೇ ಇರಬೇಕು.
ತಪ್ಪಿ ಯಾವುದೇ ಗಂಡು ಬಂದಿರಲು
ಅಟ್ಟು ಆಚೆಗದ ನೂಕು.
ಗೋಸ್ವಾಮಿ ತಮ್ಮ ಆತ್ಮವ ಮರಳಿ
ಪರಿಕಿಸಿ ತಾ ಹೆಣ್ಣೆನೆ ಒಳಗಿರಲಿ;
ಗಂಡೆನಿಸುತಲಿರೆ ಹೊರಗೈತರಲಿ;
ಹುಟ್ಟನಿಂದ ಹೆಣ್ಣಾದ
ಅರಮನೆಯೊಳಿಗ ನಾನೊಳಹೊಗುವೆನು;
ಬೇಡ ತಡೆವ ಉನ್ಮಾದ."

ದರ್ಪದಿಂದ ಈ ನುಡಿಯನು ಮೀರಾ
ನುಡಿದು "ಕೃಷ್ಣ ಹೇ ಗಿರಿಧರ ಬಾಲ"
ಎಂದು ಭಜನೆಯಲಿ ನಿಂತಳು, ಭಜನೆಗೆ
ಜೀವವೆ ಹಾಕಿರೆ ತಾಲ.
ಕೃಷ್ಣ ಭಕ್ತೆ ಆಡಿದ ಈ ಮಾತ
ಗೋಸ್ವಾಮಿಗಳಿಗೆ ತಿಳಿಸಿದ ದೂತ.
ಬುದ್ಧಿ ತಿಳಿದು ಅತಿ ಭೀತಿಯೊಳಾತ
ಒಡನೆ ಬಾಗಿಲೆಡೆ ಬಂದ:
ಕೃಷ್ಣ ಭಕ್ತ ಭಕ್ತೆಯರೆದುರಾದರು,
ಮೀರಾ ಜೀವಾನಂದ.

ಅರಿಯನೆ? ಗಾವಿಲನೇ ಗೋಸ್ವಾಮಿ?
ಸಾರಿ ಬಂದು ದೇವಿಯ ಕಂಡು
ತನಗೂ ಹಿರಿಯಳ ಗುರುತಿಸಿ ತಿಳಿದನು,
ಚೆದರಿರೆ ಹಮ್ಮಿನ ಹಿಂಡು.
"ತಪ್ಪಿತು, ಅವಮತಿಗೆಯ್ದೆನು" ಎಂದು,
ಪಶ್ಚಾತ್ತಾಪದ ಕಿಚ್ಚಲಿ ಬೆಂದು,
"ನನ್ನನು ಮನ್ನಿಸಿ ಒಳಗೈತಂದು
ನಿನ್ನೀ ಮನೆಯನು ಆಳು"
ಎನ್ನುತ ಮಣಿದನು; ತಡೆದಳು ಮೀರಾ;
ಹಿರಿಯವು ಎರಡೂ ಬಾಳು.

ಬೃಂದಾವನದಲಿ ಗಿರಿಧರ ಬಾಲನ
ಲೀಲೆಯ ತಾಣಗಳನು ಕಣ್ಣಾರ
ನೋಡಿ ಚೇತನವ ತುಂಬಿ ತಣಿಸುತ
ಮುಂದೆ ಸಾರಿದಳು ಮೀರಾ.
ಗೋಪಾಲಕೃಷ್ಣ ಧೃತವನಮಾಲಾ
ಮಾಯಾ ವಿಸ್ತೃತ ತ್ರಿಭುವನ ಜಾಲಾ
ನೀಲಮೇಘಸಮಸುಂದರಬಾಲಾ
ಎಂದು ಮೊರೆದು ಹಂಬಲಿಸಿ
ತನ್ನ ಮರೆತು ಮುಕ್ತಿಯ ಗತಿಯರಿತಳು
ಜೀವವ ಕೃಷ್ಣಗೆ ಸಲಿಸಿ.

# ಕ್ವೆಟ್ಜಲ್ ಕೊವಾಟಲಿ

## ೧

“ ನಿನ್ನ ಮತ?” “ಲೋಕ ಮತ.”
“ಲೋಕ ಮತ?” “ವಿಶೋಕ ಮತ”
“ ಶೋಕ ಮತ! ಇದಾವ ಕತ?”

ತೆಂಕ ಅಮೇರಿಕದ ಒಂದು
ದೇಶ; ಕಾಲ ತುಂಬ ಹಿಂದು;
ಎಣಿಸಿ ಇಂದನಂದು ಎಂದು.

ದೈವ ಕ್ವೆಟ್ಜಲ್ ಕೊವಾಟಲಿ,
ಅವನಿಗಿಷ್ಟ ಜೀವ ಬಲಿ,
ಎಂಬ ಹಳೆಯ ಶ್ರದ್ಧೆಯಲಿ

ನಡೆಯುತಿರುವ ದೇವರಡಿಗ
ಪ್ರಶ್ನಕಾರ. ಪ್ರತಿಯ ನುಡಿವ,
ಕೊಲೆಯೆ ಹೊಲ್ಲ ಎಂಬ ತುಡುಗ.

“ ಶೋಕ ಮತ! ಇದಾವ ಕತ?
ಎಲಾ ಕೇಳು ನಿನ್ನ ಹಿತ;
ಇರಲಿ ನಡೆಗೆ ನುಡಿಗೆ ಮಿತ.

"ಕ್ವೆಟ್ಜ್ಲ್ ಕೊವಾಟಲಿಯು ನಿನಗೆ
ದೇವರಲ್ಲ? ಅವನ ದನಿಗೆ
ಕಿವಿಕೊಡೆಯಾ ನೀನು ಕೊನೆಗೆ?

"ನುಡಿವುದಿಲ್ಲ? ನಿಲ್ಲು ಎದಿರು;
ಸಾಕು ನಿನ್ನ ಮೌನ ಚದುರು;
ಬಲ್ಲೆಯಲ್ಲ ನನ್ನ ಹದಿರು?"

"ನಿನ್ನ ಹದಿರು!" "ಹದಿರು; ಅಹುದೊ;
ಏಕೆ ಹದಿರು ಎನಲು ತಗದೊ?"
"ಏಕೆ ತಗದು? ಚೆಲ್ಲು ವೊಗೆದು."

"ಚೆಲ್ಲು! ಎಲಾ ನನ್ನ ಚೆಲ್ಲು
ನಡೆವುದೆಮ್ಮ ಕಾಡೊಳೆಲ್ಲು;
ನಡೆವುದೆಲ್ಲಿ ನಿನ್ನ ಜೊಲ್ಲು?"

"ಕಾಡಿನಲ್ಲಿ ನಡೆಯೆ ತಕ್ಕ
ಸೊಲ್ಲು ನಿನತು" "ಎಲಾ ಮುಕ್ಕ
ನಿಲಿಸು ಒಡನೆ ನಿನ್ನ ಸೊಕ್ಕು.

"ಎಲ್ಲರಂತೆ ನಡೆ; ಬಾಳು;
ಇಲ್ಲ ನಿನ್ನ ತಲೆ ಹೋಳು;
ಯಾವುದಿಷ್ಟ? ತಿಳಿ; ಹೇಳು"

"ಇಷ್ಟವಲ್ಲ; ಸತ್ಯ" "ಸತ್ಯ!
ಸತ್ಯವಲ್ಲ; ನಿನ್ನ ಹತ್ಯ;
ಇಂತ ಕೊಬ್ಬಿಗದು ಅಗತ್ಯ.

"ನಮ್ಮ ಕಾಡ ಮಂದಿ ಎಲ್ಲ,
ಒಬ್ಬ ಬಿಡದೆ, ನಾನು ಬಲ್ಲ
ಎಷ್ಟೊ ಕಾಲ, ಏನೆ ಇಲ್ಲ

"ನಾಲ್ಕು ನೂರು ವರುಷ, ನಮ್ಮ
ದೇವರನ್ನು ನಂಬಿ, ತಮ್ಮ
ಬದುಕ ನಡಸಿ ಬಂದರಮ್ಮ."

"ಬದುಕನಲ್ಲ; ಸಾವ ನಡಸಿ"
"ಸಾವು! ಸಾವೆ ಇಂತು ನುಡಿಸಿ
ಸಾರಿತಹುದು ನಿನ್ನ ಅಡಸಿ.

"ಜನ ಹಾಕಿದ ಗೆರೆಯು ಹಾರಿ
ಇಚ್ಛೆ ಬಂದ ಮಾತ ಕಾರಿ
ಅದೇ ಸತ್ಯ ಎಂದು ಸಾರಿ

"ಕಾಡ ಜನದ ಮನವ ಕೆಡಿಸಿ
ಗುರು ನಾ ಎಂದು ಉಗ್ಗಡಿಸಿ
ನಿನ್ನ ಹುಚ್ಚ ಜನಕೆ ಕುಡಿಸಿ...."

“ಹುಚ್ಚ! ಅಯ್ಯ ನಿನ್ನ ಮೆಚ್ಚು
ನನ್ನ ಹುಚ್ಚ ಮಿಕ್ಕ ಹುಚ್ಚು;
ಕೇಳು ತುಟಿಯನಿನಿಸು ಕಚ್ಚು.

“ದೈವದೆದುರು ಜೀವ ತೆಗೆವ
ಹದನ ಧರ್ಮವೆಂದು ಬಗೆವ
ಮನುಜ ಪಾಪಿ; ಜಗಕೆ ಹಗೆವ.

“ದೈವ, ಬಾಳ್ವ ಉಸಿರ ದೈವ:
ಒಳಗೆ ಕುಳಿತು ಸದಾ ‘ಜೀವ
ಜೀವ’ ಎನ್ನುತಿಹುದು. ಯಾವ

“ಕೆಟ್ಟ ಗಳಿಗೆಯಲ್ಲೊ ಅದನು
ಕೇಳಿದೊಬ್ಬ, ಬೆಸಸುವುದನು
ಬೇಡಿತೆಂದು ತಿರುಗಿಸಿದನು.

“ಬಾಳು, ಬಾಳು, ಎಂದ ಸೊಲ್ಲು,
ಬಾಳನೆನ್ನ ಎದುರು ಕೊಲ್ಲು,
ಎಂದಾಯಿತು; ಎಂಥ ಕುಲ್ಲು!”

“ಕುಲ್ಲು ಅದು! ನಿನ್ನ ಸೊಲ್ಲು
ಮೆಲ್ಲು! ಉದುರಿಸುವೆನು ಹಲ್ಲು;
ಇನ್ನು ನೀನು ಬಾಳಿ ಎಲ್ಲು.

“ದೈವ ಏನ ಬಯಸುತಿದೆ
ಅದನು ಕುಲ್ಲು ಎನ್ನುವೆದೆ
ಅದುವೇ ಪಾತಕದ ಮೊದೆ.

“ಹೋಗು, ನೀನು ನಾಶವಾಗು;
ಬಲಿತ ಮುಂಡೆ, ಬಂಡೆ ತಾಗು;
ದೈವದೆದುರು ಉಸಿರ ನೀಗು.”

೨

ಏನ ನುಡಿದ ದೇವರಡಿ
ಅದೇ ಶಾಸ್ತ್ರ; ಜನದ ಮುಡಿ—
ದೊರೆ ಎಂಬಲಿ ಇವರ ನುಡಿ—

ಅಡಿಯು ನುಡಿಗೆ ಅಕ್ಕೆ ಎಂದ.
ಕೊಲೆಯು ಬೇಹು ಸಾರಿ ಬಂದ;
ಧರ್ಮವೀರನೆದುರು ನಿಂದ.

ಜೊತೆಯು ಆಳು ಮುಂದೆ ಬಂದು
ಇವನ ಕೊಂಡು ಒಯ್ದಿತಂದು;
ಇಷ್ಟದ ಬಲಿ ದೈವಕೆಂದು.

ಎಲ್ಲ ಬಲಿಗೆ ಮಿಕ್ಕ ಬಲಿ
ಬಂದು ಕ್ವೆಟ್ಜ್ಲ್ ಕೊವಾಟಲಿ
ಇದಿರು ನಿಂತ ಧರ್ಮಕಲಿ.

“ಓಮೊ ನನ್ನ ಹೃದಯದಲಿ
ಸದಾ ‘ಜೀವ’ ಎನ್ನುತಲಿ
ಇರುವ ಕ್ವೆಟ್ಜ್ಲ್ ಕೊವಾಟಲಿ

“ನಿನಗೆ ಶರಣು. ‘ಜೀವ ಜೀವ’
ಎಂದು ನನ್ನೊಳುಲಿವ ದೈವ,
ಬರಲಿ ಮುಂದಿಗದೇ ಭಾವ.”

ಶುಭವ ಕೋರಿ ನುಡಿದ ನುಡಿ
ಮುಗಿಯಲಿಲ್ಲ. ದೈವದಡಿ
ಸಿಡಿದ: “ಸಾಕು ಹರಟೆ; ಕಡಿ.”

ಚಿಮ್ಮಿತು ಕಡುಗತ್ತಿ; ರಕ್ತ
ಚಿಮ್ಮಿತಂತೆ; ರುಂಡ ಅತ್ತ
ಹಾರಿತು; ಕೆಡೆದೊಡಲು ಇತ್ತ.

ಇಂತು ಮುಗಿದ ಕೃಪೆಯ ಕಲಿ.
ಆದರೆ ನಾನೇನೆನಲಿ
ದೈವ ಕ್ವೆಟ್ಜ್ಲ್ ಕೊವಾಟಲಿ

## ಸುನೀತ

‘ಜೀವ’ ‘ಜೀವ’ ಎಂದ ತೆರ
ಜನಕೆ ಕೇಳಿತೊಂದು ಸ್ವರ;
ಬಾನ ಬೆಳಕಿನೊಂದು ಕರ,

ಮುಗಿಲಿನಿಂದ ನೆಲಕು ನೀಡಿ
ನೋಳ್ಪ ಕಣ್ಗೆ ಬೆರಗು ಮಾಡಿ
ಬಿದ್ದ ಒಡಲ ಸೋಕಿ ಆಡಿ,

ಮಡಿದ ಉಸಿರನೆಳೆದು, ಕೊಂಡು,
ಬಾನ ತಲೆಯೊಳೊಂದು ಚೆಂಡು
ಮಾಡಿತಂತೆ; ತಾರೆ ದಂಡು

ಅದನು ತಮ್ಮ ಹಸುಳೆ ಮಾಡಿ
ನಡುವೆ ಪೀಠವೊಂದ ನೀಡಿ
ಹೊಗಳಿತಂತೆ, ಬಳಸಿ, ಹಾಡಿ.

ತಾರೆ ಇವನ ನಡಸಿಕೊಂಡ
ತೆರನ ನೋಡಿ, ಈ ಪ್ರಚಂಡ
ದಿವದ ಖಂಡ ಎಂದು ಕಂಡ

ದೇವರಡಿಗ, ಮನದಿ ಭೀತಿ
ಹುಟ್ಟಿ, ಹೇಳ ಬರದ ರೀತಿ
ಚೀರಿ ಮಡಿದ: ಇದು ಪ್ರತೀತಿ.

೩

ಮುಂದಿ ಎಲ್ಲ ಅದ್ಭುತವನು
ಕಂಡು, 'ದಿವವ ಸಾರಿದವನು
ಏನು ನುಡಿದ ಅದೇ ಹವಣು'

ಎಂದು ತನ್ನೊಳರಿಯಿತಾಗ.
ದೊರೆಗೆ ಇದೇ ತೆರ ಸರಾಗ
ತೋರಿ ಅವನು ನುಡಿದ ಬೇಗ.

"ನಮ್ಮ ದೈವ, ತನಗೆ ಇನ್ನು
ಕೊಲೆ ಒಲ್ಲದು, ಹಾಲು ಹಣ್ಣು
ಹೂವು ಧೂಪ ಅಷ್ಟೆ ಚೆನ್ನು,

"ಜೀವರಾಶಿಯಾಣಿ ಮುತ್ತು
ಇವನನುಂಡು ತಾನು ಮುತ್ತು
ಸವಿಯಲಾರೆ ಬೇರೆ ತುತ್ತು,

"ಎಂದು ಬೆಸಸಿದಂದ ನನಗೆ
ಕಂಡಿದೆ. ಇನ್ನಿಲ್ಲಿ ಧಣಿಗೆ
ನೀಡಿ ಹೊಸತು ತೆರದ ತಣಿಗೆ."

೪

ಜೀವ ಬಂಧು, ನೆಲನ ಕರೆಯ
ತೊರೆದು, ಹೊರೆದನಿಲ್ಲ ಬರಿಯ
ಮನುಜ ಕುಲವ; ಕೋಳಿ ಕುರಿಯ

ಪಶುಪಕ್ಷಿಯ ಕಾದನಾತ.
ಕಾಯನೇನ ವ್ಯತಿ ವಿಜೇತ?
ತನತು ಎಲ್ಲ ಜೀವವ್ರಾತ.

ಹಳೆಯ ಮತಕೆ ಅಡಗ ತಿಂಬ
ದೈವ; ಸಾವು ಅದರ ಬಿಂಬ;
ಬಲಿಯೆ ಅದರ ಕಳಸ, ಗುಂಬ.

ಉಸಿರ ತೆಗೆತ ಹೊಲ್ಲ ಎಂಬ
ಮತಿ ತಂದಿತು ಹೊಸತು ಇಂಬ:
ಬೇರೆಯಾಯ್ತು, ಧರ್ಮಬಿಂಬ.

೫

ಜೀವ ಬಂಧು ಆಗ ಆಗ
ನುಡಿದ ನುಡಿಯ ಅಡ್ಡ ಹಾಗ
ಹೊಸ ಪಂಥದ ಆಗುಹೋಗ

## ಸುನೀತ

ನಿರವಿಸಿತು.   ಅದೇನನಾತ
ನುಡಿದ, ಮುಂದಿ ಅಂಥ ಮಾತ
ಕೋದೆಸಗಿತು ಧರ್ಮಗೀತ.

ಕ್ವೈಟ್ಜ್‌ಲ್ ಕೊವಾಟಲಿಯೆ ದೈವ;
ರಕ್ಕೆಗಳನು ತಳೆದ ಹಾವ
ರೂಹು ಅವನ ಲಸದ್ಭಾವ.

ಹುತ್ತೊಳಡಗಿ ಮರೆದ ಹಾವು
ಅವನು; ಹುತ್ತು, ಲೋಕ, ನಾವು;
ಅವನೆ ಹುಟ್ಟು; ಅವನೆ ಸಾವು.

ಕ್ಷಣ ನಿಲ್ಲದೆ ಸದಾ ಸರುವ
ತಾಣದಲ್ಲಿ ಹಾಯುತಿರುವ
ಸತ್ವ: ನೋಡಿ ಗರಿಯ ಹರವ.

ಅಣುರೇಣುವಿನಲ್ಲಿ ಅಡಗಿ,
ಹುಲ್ಲ ಊಗಿನಲ್ಲಿ ನಡುಗಿ,
ಎಲ್ಲ ಉಸುರ ಬಾಳ ಬಡಗಿ,

ಬಾಳ್ವೆ ನಾನು ಎಂದೆಂಬನು,
ಬಾಳು ಎಂದು ನಮಗಿಂಬನು
ನೀಡಿ, ತುಂಬಿಯೂ ತುಂಬನು.

ಬಾಳು ಎಂಬುದವನ ಮಂತ್ರ ;
ಬಾಳಿಸುವುದು ಅವನ ತಂತ್ರ ;
ಬಾಳ್ವಿಗೆಲ್ಲ ಅವ ನಿಯಂತ್ರ.

“ಬಾಳು, ಬಾಳು, ನನ್ನ ರಾಜ ;
ಬಾಳಿಸು, ಅದು ಶುಭದ ಬೀಜ :
ಇವೇ ನನಗೆ ಪೂಜೆ ಸಾಜ.

“ಎಲ್ಲ ಉಸಿರು ಒಂದು ಕಣಾ ;
ಉಸಿರುವೆನು ಅದೆಲ್ಲೆಡೆ ನಾ ;
ನೆನೆ ಇದ ನೀ ಅನುಕ್ಷಣ.

“ಮನುಜ, ಕತ್ತೆ, ಹಕ್ಕಿ, ಹಲ್ಲಿ ;
ಉಸಿರು ಕಾಂಬುದೆಲ್ಲಿ ಅಲ್ಲಿ
ಇಹೆನು ನಾನು, ತೂರಿ, ಚೆಲ್ಲಿ.

“ನೋಯಬೇಡ ನೀನು ; ನೋವ
ನೀಡಬೇಡ ಹೊರೆಗೆ ; ಯಾವ
ಉಸಿರೆ ನೋಯೆ, ಅದರ ಕಾವ

“ಸಹಿಸುತಿಹುದು ನಾನೆ ಕೊನೆಗೆ.
ಜಗಳವೆ ಆತನಿಗೆ ನಿನಗೆ ?
ಹೊಡೆದುಕೊಳ್ಳಿ : ಬೇನೆ ನನಗೆ.

“ನಿನ್ನ ರುಚಿಯನರಿತು ಅದನು
ಗಳಿಸಿಕೊಳ್ಳು. ಹೊರೆಯು ಹದನು
ಅಂತೆ. ಅದಕೆ ಒದಗುವುದನು

“ಕಲಿತುಕೊಳ್ಳು. ಇದೆ ವಿಶೋಕ;
ಇದೇ ಲೋಕ, ಇದೇ ನಾಕ;
ಇದೇ ಸ್ವರ್ಗಸುಖದ ಪಾಕ.”

೬

ಕೃಪೆಯು ಕಲಿಯು ಹಿರಿಯು ಜೀವ
ಸೇರಿತಂದು ಬೆಳಕ ರೇವ.
ಇನ್ನರಿಯನು ಅವನು ಸಾವ.

ಅಂತೆ ಮುಂದಿ ಅರಿಯಿತಂತೆ
ಲೋಕ ಕೊಂದ ಕೃಪೆಯು ಚಿಂತೆ
ತಾರೆ ಅಹವು; ಆದುವಿಂತೆ.

ನೆಲ ಒಲ್ಲದ ಕೃಪೆಯು ಕಣ
ನಭವ ಸಾರಿ ಮಿಣ ಮಿಣ
ನೋಳ್ಪುದೆಮ್ಮ ಪ್ರತಿಕ್ಷಣ.

ಲಕ್ಷ ಕಣ್ಣು ಲಕ್ಷ ಕಡೆಗೆ
ನೋಡುತಿದ್ದು, ಕಟುಕು ನಡೆಯೆ
ಎವೆ ಹಾಕಿವೆ, ಅಡಿಗಡಿಗೆ.

ಮಿಣುಕು ಮಿಣುಕು ಎಂದು ತಾರೆ
ಮಿಣುಕುತಿಹವು ಎಷ್ಟು ಸಾರೆ
ಗಳಿಗೆ ಗಳಿಗೆಗಷ್ಟು ಬಾರಿ

ಜೀವರಾಶಿ ಲೋಕದಲಿ
ತಂತಮ್ಮಲೆ ಹಿಂಸೆಯಲಿ
ಗೆಯ್ವುವು ತಂತಮ್ಮ ಕೊಲೆ.

ಉಸಿರ ತೆಗೆವುದೊಂದೆ ಸರಿ
ಸಾವೆಂಬೆಯ ? ನಿಜವನರಿ :
ನೋವೆಲ್ಲವು ಸಾವ ಮರಿ.

ಪೆರರ ಒಡಲ ನೋಯಿಸಲೆ
ಎಂದು ಯೋಚಿಸುವುದರಲೆ
ಹುದುಗಿರುವುದು ಸಾವ ಸೆಲೆ.

ಮೆಯ್ಯುಕಟುಕುವ ಚೇಳು ಎಂತು
ಮನವ ಚುಚ್ಚಿ ನುಡಿವನಂತು
ಸಾವಿನಾಳು, ದುಷ್ಟ ಜಂತು.

ಇಂತು ಸಾವು ನೋವ ದೇಸಿ
ಯಾವುದಕೂ ಒಳಗು ಹೇಸಿ
ಮಿಣುಕುತಿಹವು ತಾರೆ ರೋಸಿ.

ಕೊಲೆಯ ಬುದ್ಧಿ ಜಗದಿ ಮೀರೆ
ಮೀರಿ ಬೆಳೆಯೆ ಒಂದು ತಾರೆ
ಜಗಕೆ ಕೃಪೆಯ ಪಥವ ಸಾರೆ

ಇಳಿದುಬಹುದು. ನೆಲಕೆ ಇಳಿದು
ಜಗದ ಎದೆಯ ಕಸವ ಬಳಿದು
ನಡೆವುದಿಲ್ಲಿ ಕೃಪೆಯ ತಳಿದು.

೭

ಕ್ವೆಟ್ಜಲ್ ಕೊವಾಟಲಿಗೆ ಅಂದು
ಶರಣು ಹೋದ ಜೀವಬಂಧು
ಇಂತ ತಾರೆಗಳಲಿ ಮುಂದು.

ಕಾಲ ಕಳೆಯೆ ಅವನ ಜನ
ತಮ್ಮ ಮಕ್ಕಳಿಗೆ ಗಗನ
ತೋರಿ ತೋರುವರು ಇವನ.

“ಸುತ್ತಲೆಲ್ಲ ಬೆಳಕ ಮಾಲೆ
ಹಾಡುತಿರಲು ಎಲ್ಲ ವೇಳೆ
ಹೊಳೆವನಿವನು ತಲೆಯ ಮೇಲೆ.

“ಕಾಣನಹುದು ಕೆಲವು ಹೊತ್ತು ;
ಆಗ ಇವನು ಜಗಕೆ ಮುತ್ತು
ಇಳಿದು ಬಂದಿರುವನು, ಗೊತ್ತು.

“ಕರುಣೆ ಧರ್ಮಕೆಲ್ಲ ಬೇರು ;
ಇದ ಮರೆ, ಧರ್ಮವನು ದೂರ ;
ಇದ ನಡೆ, ದೈವವನು ಸೇರು.

“ಎನ್ನುತ ಛಲ ಮಾಡುವನು ;
ಕಲ್ಲೆದೆಗಳ ಕಾಡುವನು ;
ತನ್ನನೆ ಈಡಾಡುವನು ;

“ಮತ್ತೆ ತಾರೆಯಾಗುವನು ;
ಮತ್ತೆ ನೆಲಕೆ ಸಾಗುವನು ;
ಸಾವಿಗೆ ತಲೆ ಬಾಗುವನು.

“ಜಗಕೆ ಕೃಪೆಯ ಸಾರಿ, ಸತ್ತು
ಸತ್ತು, ಇವನಿಗೀಗ ಮಿತ್ತು
ನಿತ್ಯದ ಸಂಗಾತಿ, ತೊತ್ತು.

“ ಇಂತು ಇವನು ನೆಲಕೆ ಬಂದ
ವೇಳೆ ನೀನು ಎಷ್ಟು ಚಂದ
ಇಣಿಕು.  ಕಾಣೆ ತಾರೆ ಒಂದ.

“ ಆಗ ಭೂಮಿಯಲ್ಲಿ ಒಂದು
ಉಸಿರು, ಕೃಪಾರಸದ ಸಿಂಧು,
ಕಾಂಬುದು ; ಅದೆ ಜೀವಬಂಧು.

“ ಕೊಲೆಯಿಲ್ಲದೆ ನಿಲದು ಸತ್ಯ
ಎಂದ ಲೋಕವೆಲ್ಲ ಪಿತ್ತ
ಏರಿ ಗಳಹುತಿರಲು ಸುತ್ತ,

“ ‘ ಸಲ್ಲ ’ ‘ ಸಲ್ಲ ’ ಎಂದು ದನಿ
ನುಡಿವುದೊಂದು, ಖನಿ, ಖನಿ ;
ಅದೇ ನಮ್ಮ ಜೀವ ಮಣಿ.

“ ಕೊಲುವೆನೆನಲು ಬಿಡದು ತನ್ನ
ಛಲವ.  ತನ್ನ ಸಾವ ಬನ್ನ
ಎಂದು ಬಗೆವುದಿಲ್ಲ, ಅಣ್ಣ.”

೮

ಎನಿತು ಸರಳ ಏನು ಮೊಳಸು,
ಎಳೆಯ ಜನದ ಮನದ ಬೆಳಸು !
ಏನೆ ಇರಲಿ ಕಲಿಕೆ ಪೆಡಸು.

ಧರ್ಮದೂತ ನೆಲಕೆ ಬಂದು
ಸಾರೆ, ಕೃಪೆಯೆ ದಾರಿ, ಎಂದು,
ನಗುವುದು ಪಶು ಅವನ ಕೊಂದು

ಕೃಪೆಯ ಸಾರಿ ಜೀವ ಭಕ್ತ
ಸತ್ತುದೆಷ್ಟು ಬಾರಿ! ರಕ್ತ
ಸೋರಿತೆನಿತು, ಏನು ಎತ್ತ !

ಜಗವ ಹೊರೆವ ಕೃಪೆಯ ತಾರೆ,
ಹೊರೆವ ತನ್ನ ಆಸೆ ತೀರೆ,
ಬರಲಿ ಬೇಕದೆಷ್ಟೊ ಸಾರೆ.

ಎಷ್ಟೊ ಸಾರೆ ಬಂದಿತಹುದು :
ಇನಿಸು ಎಂದು ಎಣಿಸತಗದು ;
ಬಹುದು ಮರಳಿ ಒಗೆದು ಒಗೆದು.

ಅದುವೆ ರಾಮ; ಅದುವೆ ಕೃಷ್ಣ;
ಅದುವೆ ಬುದ್ಧ ವಿಜಿತತೃಷ್ಣ;
ಜಿನ ಹಿಂಸಾ ಅಸಹಿಷ್ಣು;

ಗುರುವರೇಣ್ಯ ಶಂಕರರು,
ರಾಮಾನುಜ ಮಧ್ವಗುರು,
ದಯಾ ಧರ್ಮ ಚಾಲಕರು;

ನಾನಕ, ಬಸವಣ್ಣ, ಮಿಕ್ಕ
ಇಂಥ ನಮ್ಮ ನಾಡ ಹೊಕ್ಕ
ಇತರ ಪಥಗಳಿತರ ತಕ್ಕ;

ಬೇರೆ ನಾಡ ಜಹರತುಷ್ಟ,
ಗುರು ಮಹಮದ್; ಯೇಸುಕ್ರಿಸ್ತ,
ಲವೊಜುವಾದಿ ಗುರು ವರಿಷ್ಠ.

ಕ್ರೂರತನದ ಈ ವಿರೋಧಿ
ಜೀವ, ಎಲ್ಲ ದಯಾವಾದಿ,
ಕೃಪೆಯು ತಾರೆ, ಏಕಪಾದಿ.

ಬಂದವಂದು; ಬಹವು ಮರಳಿ.
ಬರಲಿ; ಮರಳಿ ಮರಳಿ ಬರಲಿ;
ಆತ್ಮಘಾತದಿಂದ ನರಳಿ

ಕೊರಗುತಿರುವ ಜಗದ ಬಾಳ
ಮೇಲೆ ಕೃಪೆಯು ಜೇನು ಹಾಲ
ಹರಿಸಿ ಸಲಹಲೆಲ್ಲ ಕಾಲ.

ನೆಲಸಿ ನಿಲಲಿ ಅವರ ಮತ,
ಲೋಕ ಮತ, ವಿಶೋಕ ಮತ,
ಸರ್ವಭೂತಹಿತೇ ರತ.

# ಕಲ್ಪಾಂತ?

ಹಾಳು ಬಿದ್ದೂರಿನಲಿ ಹಗಲಿನಲೆ ನರಿತೋಳ
ಹದ್ದು ಗೂಗೆಗಳಾಳುವಂತೆ, ಲೋಕದಲಿಂದು
ಸ್ವಾರ್ಥ ದಂಭ ಅನೀತಿ ಘಾತಕತೆ, ಏನೊಂದು
ಸಂಕೋಚ ಪಡದೆ ಮುಂಬರಿದು, ಮನುಜರ ಬಾಳ
ಅಶಿವದಲಿ ವಿಾಯಿಸಿವೆ. ಆಸುರೀ ಸ್ವರವೋಳ
ಮಾನವನ ಬಾಳು ಸಾವಿನ ಹೊಲಬೊ ಎಂಬೊಂದು
ಭ್ರಮೆಯ ಹುಟ್ಟಿಸುತ ಒಳ್ಳಿತರ ನುಡಿಯನೆ ಕೊಂದು
ಜಗವ ತುಂಬಿದೆ, ಹೇಯ, ಮಾರಕ, ಖರ, ಕರಾಳ.
ಸೃಷ್ಟಿಯಲಿ ಮನುಜ ಎಂಬೊಂದು ವೃಕ್ಷವನೆಟ್ಟು
ಒಂದು ಕಲ್ಪದ ಕಾಲ ಬೆಳಸಿ ಎಂದೋ ಎಲ್ಲೊ
ಇದರ ಹೂ ಹಣ್ಣು ಕಾಣುವುದೆಂಬ ಆಸೆಯನು
ಪೋಷಿಸಿದ ದೇವ ಮರ ಕೊಂಕಿಡಲು ಹೇಸಿದನೊ?
ಇನ್ನು ಇದು ಬಾಳುವುದು ಬೆಳೆಯುವುದು ಬರಿಸೊಲ್ಲು
ಎಂದು ನಿಶ್ಚಯಿಸಿ ಇದಮುಗಿಸಿದನೊ, ಮನಕೆಟ್ಟು?

## ವಿಪಿನ ವಿಹಾರಿ

ಕಾಮ ಲೋಭ ಕ್ರೋಧ ಮೋಹ ಮದ ಮಾತ್ಸರ್ಯ
ಹೊದರು ಮೆಳೆ ಕಾಡಾಗಿ ಬೆಳೆದು, ಮನುಜನ ಹೃದಯಃ
ದಂಡಕಾರಣ್ಯವಾಗಿದೆ. ಇಲ್ಲಿ ಇನಿಸು ದಯ
ಇನಿಸು ದಾಕ್ಷಿಣ್ಯ ಇನಿಸಾದರೂ ಔದಾರ್ಯ
ಇಲ್ಲವಾಗಿದೆ. ಸದಾ ಸುಳಿದಾಡುತಿವೆ ಕ್ರೌರ್ಯ
ಮೋಸ ವಂಚನೆ ಕಪಟ, ಹುಲಿ ಹಂದಿ ಹಾವಾಗಿ;
ಕಾಡನಾಳಿಹವು, ಎಲ್ಲೂ ತಾವೆ ತಾವಾಗಿ,
ಕುಂದ ಕಾಣದೆ ನಿಂದ ಇರುಳು ನೈಶಾಚರ್ಯ.
ಇಂತಪ್ಪ ಶತಲಕ್ಷ ಕೋಟಿ ಬಾಳುವೆಗಳಲಿ
ಒಂದನೂ ಬಿಡದೆ ಎಲ್ಲದರಲೂ ಬಂದಿದ್ದು
ವಿಪಿನವಾಸವ ನಡಸುತಿರುವ ಅಂತರ್ಯಾಮಿ
ಇಲ್ಲೇನು ಮೃಗಯೆಗೆಂದೈತಂದೆಯಾ ಸ್ವಾಮಿ?
ಇದು ಏನು ನಿನ್ನ ರಾಜ್ಯದ ಕಡೆಯ ಸರಹದ್ದೊ?
ನೀ ಬಳಲದಿಹುದೇನು ಇನಿತು ಕಾಡಲಿ ತೊಳಲಿ?

# ವಿಶ್ವೇಂದ್ರಜಾಲ

ನೋಡಿಹೆನು ಇಂದ್ರಜಾಲಿಕನಾಡುತಿರುವಾಟ.
ಅವನು ಮೇಲಕೆ ಎಸೆವುದೆಂಟು ಗಾಜಿನ ಬುರುಡೆ;
ಯಾವುದೇ ಕ್ಷಣ ಅವನ ಕೈಯೊಳಿರುವುದು ಎರಡೆ.
ಯಾವುದೂ ನೆಲಕೆ ಬೀಳದು. ನೋಡುತಿಹ ನೋಟ
ಯಾವೊಂದು ಹೊತ್ತಿನಲಿ ಯಾವ ಬುರುಡೆಯ ಓಟ
ಎತ್ತ ಎಂಬುದ ಗ್ರಹಿಸಲಾರದಿರೆ, ಎಂಟನೂ
ಬಿಡದೆ ನಡಸುವ ಒಂದು ಚಲನದ ನಿಘಂಟನು
ಕಲ್ಪಿಸಿದೆ ಆಡುವನ ಕೈ ಮನದ ಪರಿಪಾಠ.
ಲಕ್ಷೋಪಲಕ್ಷ ಸಂಖ್ಯಾಕ ನೀಹಾರಿಕಾ
ಶತಲಕ್ಷ ಸಾಹಸ್ರ ಸೂರ್ಯೇಂದುತಾರಕಾ
ನಿವಹವನು ಶತಕೋಟಿ ಯೋಜನದ ನಭಕೆಸೆದು
ಎಲ್ಲವೂ ಅಲ್ಲಿಯೇ ಆಡುತಿರುವಂತೊಸೆದು
ನಲಿಯುತಿಹ ಇಂದ್ರಜಾಲವನರಿಯಬಲ್ಲುದೆ
ಈ ಮನಸು ಈ ಬುದ್ಧಿ ಈ ನನ್ನ ಹುಲ್ಲೆದೆ?

## ತಾಯಾದ ಕೃಷ್ಣ

ಒಂಬತ್ತು ದಿನಕೆ ಹೆಣ್ಣಾಗಿ ಉಡುಪಿಯ ರಾಯ
ಕುಳಿತಿಹನು ಭಕ್ತರೆದುರಲಿ; ಬದಿಗೆ ಇವು ಹಸ್ತ
ತಾಯ ವೈಭವವ ಮೆರೆಯುತ ಸೊಂಡಿಲನು ಎತ್ತಿ
ಸಂತಸದಿ ನಿಂದಿಹವು. ತಾಯಿ ಅಭಯದ ಕೈಯ
ನೀಡಿ, ನಗೆ, ನಗೆ ಅಲ್ಲ, ಎಂಬ ಯಾವುದೊ ಮಾಯ
ಕಣ್ಣು ತುಟಿಗಳ ಬಳಿಯ ಬೆಳಗೆ, ಮಗುವೇ ಸ್ವಸ್ತಿ
ಎನುತಿಹಳು. ಉಳಿದಂದು ಇದೆ ಮೂರ್ತಿ, ಈ ವ್ಯಕ್ತಿ
ಗಂಡೆ? ಕೃಷ್ಣನೆ? ರೀತಿ ಬೇರೆ; ಒಂದೇ ಕಾಯ?
ಬೃಂದಾವನದೊಳಂದು ಕೃಷ್ಣ ಬೆಡಗಲಿ ನಡೆಯೆ,
ಹೆಣ್ಣೆಲ್ಲ ಅವನ ಗಂಡೆಂದು ತಿಳಿಯಿತು, ಗಂಡು
ಇದು ಹೆಣ್ಣಾಗಾಡಿ ಎಂದಿತು, ಎಂದು ಕತೆಯುಂಟು
ಇಂದಿಂತೆ ಆಗುತಿದೆ. ಒಡಲು ಆತ್ಮಕೆ ಉಡುಗೆ.
ಬೇರೆಯಾಯಿತೆ ಉಡುಗೆ? ಬೇರೆ ರೂಪವ ಕಂಡು
ವಸ್ತುವೇ ಬೇರೆ ಎನಿಸುತಿದೆ ಮಾಯೆಯ ಅಂಟು.

# ಧೃತಿ

ಇಂತಾದರೆ ಗತಿ? ಅಂತಾದರೆ ಗತಿ?
ಉಂತಾದರೆ ಗತಿ? ಎನುತಿದೆ ಮನಸು;
ಚಿಂತೆಯ ಹರಳನು ಹಣ್ಣೆನೆ ಅಗಿಯುವ
ಪಂಥದಿ ನಿಜವನು ಮರೆದಿಹ ಕನಸು.

ಎಂತೇ ಆಯಿತು; ಮನವೇ, ನೀನು
ಮಾಡುವುದೇನಿದೆ? ಉಣುವುದು ಹೊರತು?
ಏನೇ ಆದರು ಸರಿ, ಎಂಬುದ ಕಲಿ;
ಉಳಿವೆನೆಂಬ ಉಸಿರಿಗೆ ಅದು ಗುರುತು.

ಬಾಳಿದು ದಿನವೂ ನಡೆಯುವ ಪಾಠ;
ದಿನವೂ ನಡೆದಿದೆ ಪ್ರಶ್ನೆ, ಪರೀಕ್ಷೆ.
ಮೊದಲಲೆ ಪ್ರಶ್ನೆಯ ಮಾತೇ? ಏನನೆ
ಕೇಳಲಿ, ಹೇಳುವೆನೆನು, ಅದೆ ದೀಕ್ಷೆ.

ಪ್ರಶ್ನೆಯನೂಹಿಸಿಕೊಳ್ಳುವ ಭರದಲಿ
ಪಾಠವ ಮಾಡದೆ ಬಿಡುವುದು ಜಾಣೆ?
ಈ ಕ್ಷಣ ಸೋಲದೆ ನಡೆ; ಬಹ ದಿವಸ,
ಏನೆ ಬರಲಿ, ನೀ ಗೆಲ್ಲದೆ ಮಾಣೆ.

# ಆಶೆಯ ತಾರೆ

೧

ಎಷ್ಟೋ ಕಸ; ಅಪರ ಮರೆಗೆ
ಅಲ್ಲಿ ಇಲ್ಲಿ ಇನಿಸು ರಸ.
ಎಷ್ಟೊ ಒರಟು, ಎಷ್ಟೊ ಬಿರಟೆ;
ನಡುವೆ ಅಲ್ಪ ಸೊಲ್ಪ ಹಸ.

ಕ್ರೋಶಕೋಟಿ ಬಾನದಾಳ
ಬರಿದು; ಮಧ್ಯೆ ಒಂದು ತಾರೆ:
ಬೆಳಕ ತುಣುಕು; ಅದನು ಸುತ್ತಿ
ಬಲಿತ ಶೂನ್ಯಕಿಲ್ಲ ಮೇರೆ.

ನೂರು ಕಾಡುಮಾತು; ಕೊನೆಗೆ
ಒಂದೆ ಒಂದು ಸವಿಯನುಡಿ.
ಬೆಟ್ಟ ಬೆಟ್ಟ ಕಲ್ಲು; ಎಲ್ಲಿ
ವಜ್ರ ಕೆಂಪ ಹರಳ ಹುಡಿ?

ಬಂಜೆ ನೆಲವೆ ಬಹಳ; ಇನಿಸೆ
ಹಸುರು; ಅದೂ ಸೊಪ್ಪುಸೆದೆ.
ಎಷ್ಟು ಬೇಕು ಕ್ರೂರ ಜೀವ?
ಎಲ್ಲಿ ಮರುಗಿ ಕರಗುವೆದೆ?

ನಮ್ಮ ಜಗವ ನಡೆಸುತಿರುವ
ಸೂತ್ರವೆ ಇಂತೆಂಬವೊಲಿದೆ.
ಇದಕೆ ಬೇಸರೇಕೆ? ತಿದ್ದಿ
ಬಾಳ್ವ ಯತ್ನವೇಕೆ ಬರಿದೆ?

೨

ಬದುಕ ಭಾರದಿಂದ ದಣಿದು
ಸೋತವೇಳೆ ಎಣಿಕೆ ಇಂತು
ಜೋತು ಬೀಳುತಿಹುದು; ಮಿಡಿದು
ಮಿಡಿಯದಿಹುದು ಜೀವತಂತು.

ಬೇಡ, ಮನವೆ; ಬೇಡ, ನಿನಗೆ
ಈ ನಿರಾಶೆ; ಗಗನವೆಲ್ಲ
ಶೂನ್ಯವಾಗಲಿಲ್ಲ; ತಾರೆ
ಇಹವು; ಇದನು ಬಲ್ಲೆಯಲ್ಲ.

ನಭಕೆ ತಾರೆ ಎಂತು ಅಂತು
ನಿನಗೆ ಆಸೆ; ಇದನು ಮಾತ್ರ
ಮರೆಯ ಬೇಡ; ಬೇಡ; ಜೋಕೆ;
ನಿನಗಿದೆ ಮಾಂಗಲ್ಯ ಸೂತ್ರ.

ಕ್ರೋಶ ಕೋಟಿ ಬಾನ ತುಂಬಿ
ಶೂನ್ಯ "ಗೆದ್ದೆ ನಾನು" ಎಂಬ
ಕ್ಷಣದಿ, ನೋಡು, ಬೆಳಕ ಚೂರು
"ಇಲ್ಲ" ಎಂಬ ಸಮಾರಂಭ.

ಶೂನ್ಯವೆಂಬುದೆಲ್ಲಿ ಇಹುದು
ಅಷ್ಟು ಮಾತ್ರ ಅದರ ತಾಣ;
ಇಲ್ಲಿ ಅಲ್ಲಿ ಇದ್ದ ತಾರೆ
ಆವರಿಸಿವೆ ಎಲ್ಲ ಬಾನ.

ವಜ್ರ ಕೆಂಪ ಹರಳ ಹುಡಿ,
ಎಲ್ಲೊ ಚೆಲ್ಲಿ, ಒಳಗೆ ಸಿಕ್ಕಿ,
ಬರಿಯ ಕಲ್ಲೆ ಹಿರಿದು ಎಂದು
ಒಪ್ಪಿದುವೇ, ಮಣ್ಣು ಮುಕ್ಕಿ?

ಬಂಜೆ ನೆಲವೆ? ದೃಷ್ಟಿಯಿಟ್ಟು
ನೋಡು: "ನೆಲವೆ, ಎಷ್ಟು ಬಂಜೆ
ನೀನು?" ಎನ್ನುತಿಹುದು ಬಿತ್ತು
ಒಂದಾವುದೊ, ಹಗಲು ಸಂಜೆ.

ಕಾಡ ಮಾತು ನೂರ ಮರೆಸಿ
ಸವಿಯ ನುಡಿ ಅದೊಂದು ನಿಲದೆ?
ಇದನು ಅವಕೆ ಮಿಗಿಲು ಎಂದು
ಅರಿತೇ ನೀನಿದಕೆ ಒಲಿದೆ.

## ಸುನೀತ

ಇನ್ನು ಬೇಡ ಈ ನಿರಾಶೆ,
    ಮನವೆ; ಬೇಡ ಈ ಜಿಹಾಸೆ;
ಬಾಳ ನಭದ ತಾರೆ, ನೆಲದ
    ಹಸುರು, ಮಲೆತು ನಿಲಲಿ ಆಸೆ.

ಶೂನ್ಯ ಶೂನ್ಯವಲ್ಲ; ಬೆಳಕ
    ಬಯಸಿ ಹರಿದ ಬಯಲ ಹೊಲ;
ಎಲ್ಲೆ ಇರಲಿ ಬೆಳಕ ಕಂಡೆ
    ನಿಲುವೆನೆಂಬುದದರ ಛಲ.

ಬಂಜೆ ಎಂಬ ಭೂಮಿ ಹಸುರ
    ಬಯಸಿ ನಿಂತ ಕನ್ನೆ ಮಣ್ಣು;
ಎಂದೊ ಆದರ ಕನಸು ಫಲಿಸಿ
    ಒಗೆವುವಲ್ಲಿ ಹೂವು ಹಣ್ಣು.

ತನ್ನ ಗರ್ಭದಲ್ಲಿ ಚೆಲ್ಲಿ
    ಚೆದರಿದೊಳಿತ ಚೆಂದ ಮಾಡಿ
ಹಡೆವುದೆ ಈ ಸೃಷ್ಟಿಯಾಟ;
    ಉಸಿರು, ಚೆಲುವು, ಬೆಡಗು, ಗಾಡಿ.

ಸೋಲು ಸಲ್ಲ ಇದರೊಳೆಂದೂ;
    ಚೆಲುವು ಗೆಲವು ಒಂದೆ ಸರಿ;
ಶೂನ್ಯದುದರದೆಲ್ಲ ಕಡೆಯು
    ಬೆಳಕ ಕಾಣು, ಮುಂದೆ ಹರಿ

## ಸುನೀತ

ಕೃಷ್ಣಪಕ್ಷದಿರುಳ ಸಾಲು
    ನುಂಗಿ ನುಂಗಿ ನುಂಗಿದರೂ
ಸಾಯದಿದ್ದು ಮತ್ತೆ ಬೆಳೆದು
    ಬಹುದು ಹೆರೆಯ ಚೆಂಗದಿರು.

ನೆರಳ ಹಾವು ಸಾಹಸದಲಿ
    ಗ್ರಾಸಮಾಡಿಕೊಳಲು, ಒಳಿತು,
ಎಂದು ಬಿಡಿಸಿಕೊಂಡು ಸೂರ್ಯ
    ಮತ್ತೆ ಬೆಳಗುತಿಹನು ತಳಿತು.

ಅಕೋ ನೋಡು, ಭರತ ಭೂಮಿ;
    ಕಡಲ ನೀರು ಮಲೆತು ಒತ್ತಿ
ಮುಳುಗಿಸಿರಲು, ಸಿಂಹಳದಲಿ
    ತಲೆಯನು ಎತ್ತಿಹಳು ಮತ್ತೆ.

ಅಂತು ನಿಲ್ಲು, ಎಲ್ಲ ವೇಳೆ;
    ಕಷ್ಟವಿರಲಿ, ಕತ್ತಲಿರಲಿ,
ತಾರೆಯಾಗಿ ವಜ್ರವಾಗಿ
    ಬಾಳು, ಬೆಳಗು, ಮರಳಿ ಮರಳಿ.

# ಸಂಕಲ್ಪ

ಇನ್ನೂ ಮನ ಇದನರಿಯದು; ಆದರು
ಇದೆ ನಿಜ: ಬಾಳಲಿ ಅನುದಿನ ಏನ
ತರುತಿದೆ, ಅದೆ ಈ ಜೀವಕೆ ಒಳ್ಳಿತು.
ಎಂತಿದು? ಗ್ರಹಿಸಿದೆನೇ ನಾ ಜಾಣ.

ಗ್ರಹಿಸಿ ಇದೆಂತೆಂಬುದ, ಎಲ್ಲೆಡೆಯಲಿ
ಎಲ್ಲಾ ಹೊತ್ತಲಿ ಸಮಚಿತ್ತದಲಿ,
ಕೆಟ್ಟುದ ನುಡಿಯದೆ, ತಪ್ಪನು ನಡೆಯದೆ,
ಬಾಳಿದೆನೇ, ನಿಲುವೆನಮರ್ತ್ಯದಲಿ.

ನುಡಿ ನಡೆ, ತಪ್ಪದೆ, ಚೊಕ್ಕ ಆಗಿ,
ಬಂದುದೇನು ಅದರೊಂದಿಗೆ ಬೆರೆತು,
ಅದ ತಿದ್ದುತ ತಾನೊಳಿತಕೆ ಸಂದಿತೆ
ಗುರಿಮುಟ್ಟಿತು, ಸಂಕಲ್ಪವನರಿತು.

ಬಾಳನು ನೀಡಿದ ಸತ್ವವೆ, ಎಂದೂ
ಎಲ್ಲೆಡೆಯಲು ನಿನ್ನತೆ ಸಂಕಲ್ಪ
ನಡೆವಂದಕೆ ಅನುಕೂಲಿಸಿ ನಡೆಯಲಿ
ಈ ನಾನೆಲ್ಲ, ಅಲ್ಪ, ಅನಲ್ಪ.

# ಹಲಸಂಗಿ ಜಕ್ಕವ್ವ

ಹಲಸಂಗಿ ಜಕ್ಕವ್ವ ನನ್ನವ್ವ ತಾಯೇ
ತ್ರಿಭುವನೇಶ್ವರ ಸುಂದರೇಶ್ವರನ ಜಾಯೇ
ಕರುಣಾಸ್ವರೂಪಿಣಿ, ನಿತ್ಯೆ, ನಿರಪಾಯೆ,
ಶ್ರುತಿಗೇಯೆ, ಜಗದಾಯತನೆ, ಅಪ್ರಮೇಯೆ,
ನಿನ್ನ ಚರಿತವನೊರೆಯೆ ಸನ್ಮತಿಯುನೀಯೆ
ನಿನ್ನ ಕರುಣೆಯ ಕಂದ ಎನಗೋ ಅಜೇಯೆ.

ಸಕಲ ಲೋಕಗಳ ಕಲ್ಯಾಣದಾವಾಸ
ಎಸೆದಿದೆ ತ್ರಿವಿಷ್ಟಪದ ಕಳಸ ಕೈಲಾಸ;
ಅದರೊಳೋಲಗದಲ್ಲಿ ಬೆಳಗಿಹನು ಶಂಭು;
ಎಡಬದಿಯೊಳಿದೆ ಉಮಾದೇವಿಯರ ಇಂಬು.
ಮಂಡಿಸಿಹರೊತ್ತಿನಲಿ ಗಣಪ ಆರುಮುಗ;
ನೋಡಬೇಕವರು ಕುಳಿತಿರುವ ಆ ಸೊಬಗ.
ಸುತ್ತ ಬಳಸಿದೆ ಭೂತಗಣ ಸುರವ್ರಾತ;
ಇದಿರಿನಲಿ ಕುಳಿತಿಹನು ದಿವಿಜಕುಲನಾಥ.
ದೇವರ್ಷಿ ಸಂಘ ಭೃಂಗಿಯ ನೃತ್ಯದಿಂದ
ಪಡೆದಿಹುದು ಅರಿಯೆ ಬರದೊಂದು ಆನಂದ.
ನೆರೆದ ಸುರರಿಗೆ ತಕ್ಕ ಬಾಗಿನವ ನೀಡಿ
ಪ್ರಮಥಗಣ ಸತ್ಕರಿಸುತಿಹುದು ಓಡಾಡಿ.
ಎಲ್ಲ ಜೀವಕೆ ಜೀವವೀವ ಭವನೊಳಗು
ನಲಿದಿಹುದು; ಪತಿಯುನಲಿವಿನ ಚೆಲುವ ಬೆಳಗು
ತೆರೆದಿದೆ ಉಮಾದೇವಿಯರ ಮನದ ನನೆಯ;
ಮುಟ್ಟಿಹುದು ಇದರ ಸೊಗ ಮೂಜಗದ ಕೊನೆಯ.

ಇಂತು ಮೂಜಗವ ಮುಟ್ಟಿರೆ ಶಿವಾನಂದ
ಸುಂದರೇಶ್ವರ ತನ್ನ ಕಣ್ನೋಟದಿಂದ
ತನ್ನರ್ಧ ಮೆಯ್ಯಾದ ದೇವಿಯುರ ಕುರಿತು
ಬಯಸಿದನು: ಆ ಅರ್ಧವೆುಯ್ ಬಯಕೆ ಅರಿತು
ಅಂತೆ ಬಯಸಿತು. ತಾಯಿ, ಇದೆ ನಿನ್ನ ಹಿರಿಮೆ;
ಇದೆ ಸರಿ, ಮಹಾಮಾಯೆ, ಓ ಮಹಾಮಹಿಮೆ.
ಮಿಂಚು: ಈ ನನ್ನ ಮನ ಏನ ಬಯಸಿತ್ತು?
ಮಾರ್ಮಿಂಚು: ಬಲ್ಲೆ ಈ ಮನ ಅಂತೆ ಇತ್ತು.
ಶಿವನೊಳೊದವಿದ ಭಾವ ಅವನ ಕಣ್ಮಿಂಚು;
ಮಾರ್ಮಿಂಚು ನಿನ್ನ ಕಣ್ಣದನರಿತ ಸಂಚು.
ಭಾವ ಭಾವದೊಳಿಂತು ಮೇಳೈಸೆ ಶರ್ವ
ಮರೆದನಲ್ಲಿಂದ ಒಂದರೆ ಚಣದ ಪರ್ವ.
ಭೂತಗಣ ದಿವಿಜಕುಲಪತಿ ಸುರವ್ರಾತ
ನೋಡುತಿದ್ದಂತೆಯೇ ಮೂಜಗದ ನಾಥ
ಕಾಣದಾದನು; ಅದೇ ಕ್ಷಣ ತಾಯಿ ನೀನು
ಕಾಣದಿಹೆ. ಸಭೆ, ಆಹ ಇದು ಏನು ಏನು,
ಎನ್ನುತಿರೆ, ಮರುಚಣವೆ ಮತ್ತೆ ಮೈದೋರಿ
ಕಂಡಿರೆಂದಿನ ರೀತಿ ನೀವು ಜೊತೆ ಸೇರಿ.
ಆ ಕ್ಷಣಾಂಶದ ಚರಿತೆಯಿಂದ ಹಲಸಂಗಿ
ಹೆಸರಾಂತೆ ನೀನಿಲ್ಲಿ ಶಿವನ ಅರ್ಧಾಂಗಿ.

ಎಲ ಮರುಳ! ಆ ಕ್ಷಣಾಂಶದ ಚರಿತೆಯೆಂದೆ!
ಅದರ ಫಲ ಈ ಸೃಷ್ಟಿ, ಈ ಹಿಂದೆ, ಮುಂದೆ.
ಆ ಕ್ಷಣದ ಕಣದ ಕಣದಲಿ ಒಂದು ಜಗವೇ
ಅರಳುವುದು, ಉದುರುವುದು; ಕಣವೆ, ಅದುಯುಗವೆ?

ಅಳಿದ ಮನ ಅಂತಾಯ್ತು ಯುಗವೆ ಕ್ಷಣ ಅಹುದು;
ಉಂತಾಯ್ತು ಕ್ಷಣ ಒಂದು ಯುಗ ಆಗಬಹುದು.
ಲೋಕದಾಟಕೆ ಶಂಭು ಕಾಲವನು ಹೆತ್ತ;
ಕಾಲಗೀಲಗಳು ಅವನಷ್ಟ್ರಕತ್ತತ್ತ.
ನಿಮಿಷ ಅನಿಮಿಷ ಪರಾತ್ಪರ ವಸ್ತು ತಾನು
ಬಲೆಯಾಗಿ ಬಲೆಯ ಹೊರಗಿಹುದವನ ಜಾಣು.
ಅವನೊಡನೆ ಬಲೆಯ ಹೊರಗಿಹ ಮಹಾಮಾಯೆ,
ನೀನು, ಓ ತಾಯೇ, ಅಮೇಯೇ, ಅಜೇಯೆ.
ದೇವಕುಲ ತನ್ನ ಮನದಿಂದ ಅಳಿದತ್ತು;
ಕ್ಷಣವಾಗಿ ಕಂಡಿತಾ ಮನಕೆ ಆ ಹೊತ್ತು.
ಸೃಷ್ಟಿಯಲಿ ಆ ವೇಳೆ ಎನ್ನ ಮನವಿದ್ದು
ನೋಡಿತ್ತೆ, ಹಾಯ್ದಿರದೆ ಅರ್ಧ ಯುಗ ಕದ್ದು?
ಕಣ ಅಲ್ಲಿ; ಯುಗ ಇಲ್ಲಿ, ನಿಮಗದು ಅನಂತ;
ಗ್ರಹಿಸಬಹುದೆಂತು ಮನುಜರು ಇದರ ಜೊಂತ?

ದೈವ ಜೀವನಕೆ ಯಾವಾ ಹೊತ್ತು ಬರಿದೆ
ಕ್ಷಣದರ್ಧ, ಆಗ ನೀನೀಯುಗವ ತೆರೆದೆ.
ಕೈಲಾಸದಾವರಣದಲಿ ಅಕೋ ವ್ಯೋಮ;
ಹೊಸತೊಂದು ಹಸನಾಗಿ ಖರ ತಿಮಿರ ಧಾಮ.
ಅಹ! ಅಹಾ! ಏನು ಕತ್ತಲು! ಕವಿದು ಕೊಬ್ಬಿ
ತೀವಿಹುದು ಎಡೆಯ ಬಿತ್ತರವನೇ ತಬ್ಬಿ.
ಅಲ್ಲಿ ಏನೊಂದಿಲ್ಲ; ಇಹುದೊಂದೆ; ಶೂನ್ಯ;
ಶುದ್ಧ ಸಿದ್ಧ ಅಬದ್ಧ, ತಾನೆ ತನಗನ್ಯ.
ಇಂತಿದ್ದ ಗಾಢಾಂಧಕಾರದಾಳದಲಿ,
ಅದು ಏನೊ, ಅದು ಎಂತೊ, ತಾನಾಗಿ ಕದಲಿ

ಕಣವಾಗಿ ಮೈದೋರಿತೊಂದಿಸಿಸ ಬೆಳಕು;
ಮೈದೋರಿ ಬೆಳೆದು ಹರಿಯಿತು ಮೇಲು ಕೆಳಗು;
ಅಂತೆ ಹರಿಯಿತು ಎಡಕು, ಬಲಕು, ಮುಂಬದಿಗು,
ಹಿಂಬದಿಗು, ಸುತ್ತೆಲ್ಲ ಕಡೆಗು, ಆ ಒದಗು.
ಸಿದ್ಧವಾಯಿತು ಆಗ ಒಂದು ಬ್ರಹ್ಮಾಂಡ.
ಬೆಳಕು ಒಳಹಾಯ್ದೊಂದು ತಿಮಿರ ಪ್ರಕಾಂಡ.
ಕೊನೆ ಇದ್ದರೂ ಕಾಣದನಿತದರ ದೂರ;
ಪಾರವಿದೆ, ಆದರೂ ಕಾಣದಿದೆ ತೀರ.
ಅನಿತರಲೆ ಆ ಜ್ಯೋತಿ ತಮಸುಗಳ ಬೆರಕೆ
ಒಳಗಡೆಗೆ ಉಸಿರ ಸೆಳೆಯಿತೊ ಎಂಬ ತೆರಕೆ
ಸದ್ದು ಕೇಳಿಸಿತೊಂದು; ಮತ್ತೆ ಅದೆ ಉಸಿರ
ಹೊರದೂಡಿದಂತೆ ಕೇಳಿತು ಸುಯ್ಲ ಪಸರ.
ಜೀವಂತವಾಯಿತಾ ಬ್ರಹ್ಮಾಂಡ ಆಗ;
ಇದು ಎಂತೊ ನಾನು ಬಲ್ಲೆನೆ ಆಗು ಹೋಗ?
ಉಸಿರಾಡ ತೊಡಗಿದಾ ಲೋಕ ಜೀವಿಸಿತು.
ಲೋಕಗಳ ಸಾಲಿನಲಿ ಅದು ಒಂದು ಹೊಸತು.

ಏನ ಹೇಳಲಿ, ತಾಯೆ ನಿನ್ನ ಮಾಯೆಯನು?—
ಮಾಯೆ ನಿನತಲ್ಲವೆ? ನಿನ್ನ ಆ ಪ್ರಿಯನೂ
ನಿನತು ಆಗಿರೆ ಮಾಯೆ ನಿನತಲ್ಲದೇನು?
ಅಲ್ಲ ಎನ್ನುವುದಾಗೆ ಮಾಯೆಯೇ ನೀನು—
ನೀನೆ ತಾನಾದ ನಿನ್ನಿನಿಯನಾ ಮಾಯೆ
ಬೆಳಕು ಬೆರೆತಾತಮಸಿನಂಡದಲಿ ಹಾಯೆ
ಕತ್ತಲೊಳತೂರಿದ್ದ ಬೆಳಕಿನಾಸಾರ
ಕತ್ತಲಲಿ ಅಲ್ಲಲ್ಲಿ ಒಗೆದೊಂದು ತೀರ

ತಗ್ಗಿನಲಿ ಮಡುಸೇರಿ ಘನಿಸಿದತ್ತೊಡನೆ.
ಇಂತಾಯ್ತು ಬೆಳಕ ಖಂಡಗಳೊಂದು ಘಟನೆ.
ಇಂತೊಸೆದ ಬೆಳಕಿನಲಿ ಕೆಲವು ಇದ್ದಲ್ಲೆ
ತಿಪ್ಪಲಾಟದಲಿ ತೊಡಗಿವೆ: ಮರುಳೆ? ಚೆಲ್ಲೆ?
ಉಳಿದ ಬೆಳಕಿನ ಖಂಡ ಇವುಗಳನು ಸುತ್ತಿ
ಕುಣಿದಾಡ ತೊಡಗಿದವು ಒಂದನೊಂದೊತ್ತಿ.
ಇಂತು ಬೆಳಕಿನ ಖಂಡ ಎಲ್ಲ, ಹಿರಿ ಕಿರಿದು,
ಕುಣಿಯ ತೊಡಗಿದವು ತಮ್ಮನೆ ತಾವು ಮರೆತು.
ಏನಂದವೋ ಅವರ ಆ ನಾಟ್ಯದಾಟ!
ಅದರೊಳೊಸರಿತು ಆಗ ಆ ಸ್ತೋತ್ರಪಾಠ,
ನಿಮ್ಮ ಕುರಿತೀಗಳೂ ತಾರೆಗಳ ವ್ಯೂಹ
ಹಾಡಿ ನಡಸುತಲಿರುವ ಗಾನದಾಸೋಹ.
ಹಿರಿತಾರೆ ನೇಸರಿದ್ದಲ್ಲೆ ಸುತ್ತುತಿರೆ,
ಕಿರಿ ತಾರೆ ನೇಸರುಗಳವರ ಮುತ್ತಿ ಬರೆ,
ಬೆಳಕ ಬಳಗದ ಕೇಲಿ ತುರುಗಿದಾ ಹಾದಿ
ಶಿವನ ಲೀಲೆಯ ವಿವರಣಕೆ ಆಯ್ತು ವೀಥಿ.

ನೀನವನೆ, ಅವನ ಲೀಲೆಯು ನೀನೆ, ನೀನೇ
ಅವನ ಲೀಲಾವಸ್ತು, ಪ್ರಿಯನಲಿ ವಿಲೀನೆ.
ಭವನ ಅವಿನಾಭಾವ ನೀನು, ಓ ತಾಯೆ.
ಇಂತು ಲೀಲಾ ವೀಥಿಯಾಗಿರಲು ಮಾಯೆ
ಶಿವನದರ ಮಧ್ಯೆ ವಿಹರಿಸಲು ಹೊರವಂಟ.
ಜೊತೆಗೆ ನೀ ನಡೆಯುತಿರೆ, ಈ ನಿಮ್ಮ ನಂಟ
ನೋಡಿ ನಕ್ಕಿತು ಬಯಲು ವೀಥಿ ಗ್ರಹ ತಾರೆ.
ಇದಕಿಂತ ಆನಂದ ಏನವಕೆ ಬೇರೆ?

ಇವರ ಒಳಗನು ನಲಿಸಿ ಶಿವ ಇವರ ಮಧ್ಯೆ
ತೂರಿದನು ಸಾರಿದನು : ನೀ ಜೊತೆಗೆ ಇದ್ದೆ.
ಇವರು ಕಂಡಂತೆ ಇವರಿಗೆ ಕಾಣದಂತೆ—
ಶಿವನ ಸುಳಿವಿಗೆ ಶಾಸ್ತ್ರವೇ ಅಂತೆ ಇಂತೆ?—
ಸುಳಿ ಹರಿದ, ಕಲೆ ಬೆರೆದ, ಮೆಯ್ಸ್ಗರೆದ ಶಂಭು :
ನಿನ್ನ ಹೊರತಾರು ಕಾಣರು ಅವನ ಇಂಬು.
ಇಲ್ಲಿ ಕರಿದಾಗಿ ಕಂಠದ ಗೆರೆಯು ತೋರಿ,
ಅಲ್ಲಿ ರವಿಯಾಗಿ ನಖರೋಚಿಯನು ಬೀರಿ,
ಇಲ್ಲಿ ಚಂದ್ರಮಯೂಖದಂತರಕೆ ತೂರಿ,
ನಿನ್ನತಲ್ಲದೆ ಎಲ್ಲ ಊಹೆಯನು ಮೀರಿ,
ಇಲ್ಲಿ ಬೆಳಕಿನ ಹೃದಯದಲಿ ಕತ್ತಲಾಗಿ,
ಇಲ್ಲಿ ಕತ್ತಲ ಪಡೆಯು ಬೆಳಕಿಂದ ತಾಗಿ,
ನೀ ಸದಾ ಕೈಬಿಡದೆ ನಡೆದಿರಲು ಜೊತೆಗೆ
ಬ್ರಹ್ಮಾಂಡದುದ್ಯಾನದಲಿ ಸುಳಿದು, ಮತಿಗೆ
ಸಂತಸವ ತಂದು ಕೊಂಡನು. ಸುಖಕೆ ಅವನೇ
ತೌರು ಸರಿ. ಆದರೂ ಆಟಕೀಬವಣೆ.

ಇಂತು ಕೆಲ ಹೊತ್ತು ಆಡುತಲಿರಲು ಶರ್ವ
ಅವನ ಮನದಲಿ ಮೂಡಿತಿನ್ನೊಂದು ಪರ್ವ.
ಅಹಮಿಲ್ಲದೀ ತಾರೆ ಸೂರ್ಯ ನಕ್ಷತ್ರ
ಬರಿಯ ಮಹ; ಅವರೊಳಿರುವುದು ತಾನು ಮಾತ್ರ.
ಅಹಮೆಂಬುದೊಂದ ಮಾಡುವೆನೆಂದು ಶಿವಗೆ
ಬಯಕೆ ತೋರಿತು : ತಡೆಯೆ ಅವನ ಅನುಭವಕೆ?
ಅನುಭವಕೆ ತಗುವ ಈ ನೆಲನಾದುದಾಗ;
ನೆಲಕೆ ತಗುವಂತೆ ನೀರಾಗಿಹುದು ಬೇಗ.

ಹಸಿಯೇನು, ಬಿಸಿಯೇನು, ಹಸಿರ ಸಸಿಹಸರ,
ಏನು ಐಸಿರಿಯೊ ಈ ತಾಯ್ನೆಲದ ಬಸಿರ!
ಮಹವ ಬಿಡದೊಡನೆ ಮಹವಾಗಿಯೇ ಇರುತ
ಅಹಮಂತೆ ತೋರುವುದು ಇಂತಿವರ ಚರಿತ.
ಮಹದ ಉಸಿರಲ್ಲದಿದರಲಿ ಸೊಸಿಗೆ ಸೊಸಿಗೆ
ಉಂಟು ತಮ್ಮದೆ ಬೇರೆ ಉಸಿರ ಒಂದೊಸಗೆ.
ಬೇರೆ ಉಸಿರಾದರೂ ಮಹವ ಬಿಟ್ಟಿಲ್ಲ;
ಇವ ಮಹವ ಹಿಡಿದಿಹುದು ಒಂದೆ ತೊಟ್ಟಿಲ್ಲ.
ಮಹವನುಳಿದಂತೆ ಬೆಳೆವುದು, ಬೆಳೆದು ಕೂಡ
ಹರಿದು ಸರಿಯುದು; ಇಂತು ಇವರಹಂ ಗೂಢ.
ಕಿರಿಯ ಆಕೃತಿಯಾಗಿ ಇಲ್ಲಿ ಹುಲ್ಲೆಸಳು,
ಅಲ್ಲಿ ಗರಿಯಲಿ ತೆಂಗು ಕೌಂಗು ರಾಜಿಸಲು,
ಇತ್ತ ಹಾವಸೆ ಕೋಟಿ, ಮಧ್ಯದಲಿ ಬಳ್ಳಿ
ಎನಿತೆನಿತು ಕೋಟಿ, ಆ ಅತ್ತ ನಭದಲ್ಲಿ
ತಲೆಯಿಟ್ಟು ನಿಂದಿರುವ ಅಶ್ವತ್ಥ, ಸಾಲ,
ಮಾವು ಸಂಪಗೆ ದೇವದಾರು ಹಿರಿಯಾಲ.
ಇವರೆಲ್ಲರಲಿ ನೀವು ನಿಮ್ಮರವ ಹರಿಸೆ
ಶತಕೋಟಿ ಹೂವ ಜಾತಿಗಳು ಗೋಚರಿಸಿ
ಅಹಮಾಗದೆಯೆ ಒಂದು ಬೇರೊಂದನೆಳಸಿ,
ಸನಿಯದೂರಗಳಿಂದ ಒಲಿದು ಕೆಳೆ ಬೆಳಸಿ,
ಬಾಳಿ ಬಾಳಿಸುವಂದ ನೆಲದಿ ಮೂಡಿತ್ತು:
ಚಿತ್ತೊ ಅಲ್ಲವೊ ಎಂಬ ಒಂದು ಚಿದಚಿತ್ತು.

ಇಂತು ಪೀಠಿಕೆ ನಡೆಯುತಿರೆ ನಿನ್ನ ಇನಿಯ
ನಿನ್ನಂತೆ ತಿರುಹಿ ತನ್ನಾ ಕಣ್ಣ ಕೊನೆಯ,

ಇದ್ದಂತೆ ತಾನಾದ ಒಂದು ಜೀವಾಣು.
ತನ್ನ ಅಸುವನು ಅರಿವಳೋ ಅರಸಿ ತಾನು,
ಅರಿತು ಏಗೆಯ್ವಳೋ, ಎಂದವನ ಒಳಗು
ಕೌತುಕದೊಳಿದೆ. ನೀನು ಕಾಣದುದೆ ಸುಳಿವು?
ಜೀವಾಣುವಾದ ಶಿವನರ್ಧ ಅಣು ಆಗಿ
ನೀನೊಡನೆಯೇ ಇದ್ದೆ ಸರಿಸಮಕೆ ತೂಗಿ.
ತಾನಿಹನು; ತಾನಾಗಿ ನೀನಿರುವೆ; ಆಹಾ
ಏನು ಆನಂದವೋ ಆ ಇರುವ ಭಾವ!
ನಮಗೆ ಕಾಣದ ತೆಳುವ ಲಕ್ಷ ಮಡಿ ಸವೆಸಿ
ಅಲ್ಲಿಯೂ ಇದ್ದೇನು ಎನ್ನುವ ಕಸಿವಿಸಿ
ಜೀವಾಣು ಕುಲಕೋಟಿಯಾಗಿ ಒಳಗುಕ್ಕಿ
ಸ್ವಾನುಭೂತಿಯಲಿ ನೀನಾದ ಶಿವ ಸೊಕ್ಕಿ.
ಒಂದರಲೆ ಎರಡಿರುವ ಈ ಜಾತಿ ಬೆಳೆದು
ತುಂಬಿತಾ ಅಂಡವನು ಬಹುರೂಪ ತಳೆದು.

ಒಂದರಲೆ ಎರಡಿದ್ದು ಒಂದಾಗಿ ಬೆರೆತ
ನಿನ್ನ ಅಚ್ಚರಿಯ ಚದುರನು ಶಂಭು ಅರಿತ.
ಬೇರೊಂದು ರೇವಿನೆಡೆ ಹರಿಯಿತಭಿಲಾಷೆ;
ಹರಿಯಿತದೆ ಕಡೆ ನಿನ್ನ ಭಾವ, ಶಿವತೋಷೆ.
ಎರಡಾಗಿ ಒಂದು ಕೂಡುವ ತೆರಕೆ, ತಾನು
ನೀರು ನೆಲಗಳ ಜೀವ ಒಂದಾದ ಜಾಣು.
ಒಡಲೊಂದ ತಳೆದು ಕರೆಯುಂಚಿನಲಿ ಕೆಡೆಯೆ
ತನ್ನಂತೆ ಬಂದುದಾವುದೊ ತನ್ನ ಪಡೆಯೆ.
ಅಂತೆ ಆಹುದಾದರೂ ತೀರ ಅಂತಲ್ಲ;
ಹೊಂತುಕಾರನೆ ಕಾಣ ನಿನ್ನ ಹೊಂತೆಲ್ಲ.

ಆ ಚದುರೊ! ಈ ಚದುರೊ! ನಿನ್ನ ಈ ಚದುರು
ಒದಗಿಹುದು ಕೊನೆಯಿಲ್ಲದಲೆ ಪದರು ಪದರು.

ತನ್ನ ಹೊಂತಿಗು ಮಿಕ್ಕ ಚದುರು ಮನವೊಪ್ಪಿ
ಶಿವ ತನ್ನ ಜೊತೆ ನಿನ್ನ ಒಳಕೊಂಡನಪ್ಪಿ.
ಅಲ್ಲಿಂದ ಮೊದಲಾಗಿ ನೀರು ನೆಲ ಬಾನ
ನೂರು ಕೋಟಿಯು ಜೀವ ತಾನಾದ ಜಾಣ.
ಜಾಣೆ ನೀನಾ ಎಲ್ಲ ಶತಕೋಟಿ ರೂಪ
ತಳೆದಿರಲು ನೆರೆದು ತಣಿದನು ನಿನ್ನ ಓಪ.
ಮಾನ ಗಂಡವನಾದ; ನೀ ಮಾನ ಹೆಣ್ಣು:
ಸಹಿಸುವನಿತೂ ಸುಖವನೀವ ಸವಿಗಿಣ್ಣು.
ಗಂಡಾಮೆ ಅವನಾಗೆ ನೀನು ಪೆಣ್ಣಾಮೆ;
ಗಂಡು ಹಾವವನಾಗೆ ನೀನದರ ಭಾಮೆ;
ನರಿ ನಾಯಿ ಹುಲಿ ಹಂದಿ ಮೊಲ ತೋಳ ಆನೆ,
ಎಲ್ಲ ಗಂಡವನು; ಅದರೆಲ್ಲ ಹೆಣ್ ನೀನೆ.
ಡೇಗೆ ಕೋಗಿಲೆ ಗೊರವ ಕಾಗೆ ಗುಬ್ಬಚ್ಚಿ
ಗಂಡಾದನೇ ಅವನು, ಅಕೊ ಹೆಣ್ಣು ಪಕ್ಷಿ
ನೀ ಸಿದ್ಧವಾಗಿದ್ದೆ: ಆ ಮನದ ಎಣಿಕೆ
ಎರಡು ರೂಪಾದಂತೆ ಆ ಒಂದೆ ಚಣಕೆ.
ನರನಾಗಿ ನಿಲಲವನು ನೀ ನಾರಿಯಾದೆ;
ಗಂಡು ಜೀವದ ಸುಖಕೆ ಬಾಳನೇ ತೇದೆ.
ಇಂತು ಭಾವವ ಭಾವದಿಂದ ಜೊತೆ ಸಾರಿ
ಶಿವನಾದುದಾಗಿ ವೇಗದೊಳವನ ಮಾರಿ,
ಓ ತಾಯಿ ನೀನಾದೆ ಶಿವನ ಸಂಗಾತಿ;
ಆಸೆಗೂ ಮೊದಲಾಗಿ ರೂಪಾಂತ ಪ್ರೀತಿ.

ಅಹವಿಲ್ಲದಿಹ ತಾರೆ ಗ್ರಹ ಸೂರ್ಯಗೋಲ
ಅರಿಯೆ ಬಾರದು ನಿಮ್ಮ ಅಹಮಹಂತಾಲ.
ಅಹವೆಂಬ ಭ್ರಮೆಯಿಂದ ಖಗ ಮೃಗ ವ್ರಾತ
ಅರಿಯುದಿವೆ ಓ ಮಾತೆ, ಜಗದ ಪಿತ ಆತ
ಜಗದಂಬೆ ನೀನು ಅವರಾಗಿ ಒಲಿದಾಡಿ
ನಲಿಯುತಿಹ ತೆರನ. ಇದು ಆ ನಿಮ್ಮ ಮೋಡಿ.
ಮನುಜರೆನ್ನುವ ನಾವು ನಿನ್ನ ಕೃಪೆಯಿಂದ,
ಮಮತೆ ತೊಲಗಿರೆ ಹಸಾದದಿ ಕೂಡಿ ಬಂದ
ತಿಳಿವಿಂದ, ಹತ್ತು ಲಕ್ಷಕೆ ಎಲ್ಲೊ ಒಬ್ಬ,
ಎಂದೊ ಯಾವಾಗಲೋ ನಾನೆಂಬ ಮಬ್ಬ
ಕ್ಷಣಮಾತ್ರ ಗೆಲಿದು, ಈ ಲೀಲೆಗಿದು ಹದನು,
ಎಂದು ತಿಳಿವನು. ಅಂತು ಸಂದ ತಿಳಿವದನು
ಮತ್ತೆ ಮರಸುವುದು ಅವನಹವೆಂಬ ಭಾವ.
ಮುಕ್ತಿಯಾಗುವ ಹೊತ್ತು ಬಂದಿತೇ, ಜೀವ
ತಾನಳಿದು ನಿಮ್ಮ ಈ ಲೀಲೆಯನೆ ನೆನೆದು
ಸುಖಿಸುವುದು, ಅಹವೆಲ್ಲ ರಸವಾಗಿ ಹನಿದು.

ಅಂತು ಗಂಡಾಗಿ ಶಿವ, ಹೆಣ್ಣಾಗಿ ನೀನು,
ತಳೆದ ಆ ಶತಕೋಟಿ ರೂಪುಗಳ ನಾನು
ಹೆಸರಿಸಲು ಸಲುವೆನೇ, ಶೇಷನೇನಲ್ಲ.
ಶೇಷನಾ ನಾಲಗೆಗಳೂ ನುಡಿಯ ಸಲ್ಲ.
ನುಡಿವುದೇತರದು ? ನೆನೆಯಲು ಆರದೂಹೆ,
ಪಾರರಹಿತೆ ಅನಂತೆ, ಹೇ ದುರವಗಾಹೆ.
ಗಂಡಾಗಿ ಸುಳಿದಿದ್ದ ಶಿವನ ಆ ಗಾಡಿ,
ಹೆಣ್ಣಾಗಿ ನಿಂತ ಹೆಣ್ಣಿನ ನಿನ್ನ ಮೋಡಿ,

ಇದನಾದರೂ ನೆನಹು ನಿಲುಕ ಬಹುದೇನು?
ನಿಲುಕ ಬಂದಂದು ಅದು ತಾನಲ್ಲ, ನೀನು.
ಜಗದೊಳಾಳುತ ನಾನು ಕೆಲವೊಂದ ನೋಡಿ
ಮರುಳು ಹೋದೆನು; ಹೇಳಲೇಕೆ ಆ ಖೋಡಿ.
ಕೇಸರದ ಸಿಂಗ, ಕೇಸರ ತೊರೆದ ಸಿಂಗಿ,
ಏನು ಸಮ ಗಂಭೀರ ಆ ನಿಮ್ಮ ಭಂಗಿ!
ಈ ಮಹಾ ಸತ್ವ ಒಲಿವುದು, ಒಲಿಸಬಹುದು,
ಎಂದು ಎಣಿಸಲು ಬರುವುದೇ? ತಗದು ತಗದು.
ಆದರೇನದುವೆ ಗಂಭೀರವೆದೆಗಳಲಿ
ಆಸೆ ಸುಳಿಯಿತು ಅಂದು ಜೊತೆಗಾಗಿ ತೊಳಲಿ.
ನೀ ಶಿವನ, ಶಿವ ನಿನ್ನ, ಬಯಸಿ ಕುಡಿ ಹರಿದು
ಬಾಳು ಬಾಳನು ಸೇರಿದವು ಹಂಗ ತೊರೆದು.
ಕೋಡ ಸಾರಗನಿಂತ ತೆರನೆನಿತು ಚಂದ!
ಬೊಗಸೆಗಣ್ಣೆರಳೆಯನುಸರಣೆ ಏನಂದ!
ತನಗೆ ಲೋಕವೆ ಬೇಡ ಎಂಬ ಆ ಕೋಣ
ಒಲುಮೆಯೋ ನಿಜ: ಬರಿಯ ವೇಷ ಆ ಸ್ಥಾಣ.
ಗಿಳಿಯ ಜೊತೆ ಒಂದು ಕೊಂಬೆಯ ಸೇರಿ ಒಂದೇ
ಎರಡಾಯಿತೆಂಬಂತೆ ಕುಳಿತಿಹವು ಮುಂದೆ.
ಚೆನ್ನ ನೋಡಿದೆನೆ ನೀನಿಸಿಸೇನೊ ಕಿರಿಯೆ.
ಏಕೆ? ಶಿವ ನಿನಗಿಂತ ಆ ತುಸವೆ ಹಿರಿಯ.
ನಡೆಯೇನು, ಉಲಿವೇನು, ತಲೆಯೊಲೆವಜಾಣು!
ಶಿವ ಹೆಚ್ಚೆ? ನೀ ಹೆಚ್ಚೆ? ಏನು ಎನೆ ಏನು.

ಹೆಣ್ಗಂಡು ಗರಿ ತೆರೆದು, ಸಮತೆಸುಖ ಮೆದ್ದು
ಬಾನ ತಲೆಯನು ಕುರಿತು ಹಾರಿಹವು ಹದ್ದು;

ಹೆಣ್ಣು ಕಣ್ಣನು ಕರೆದು ಮೆರೆಯುತಿದೆ ಸೋಗೆ;
ಸಿಲುಕದಿರೆ ಸಾವೆನೆಂದಟ್ಟುತಿದೆ ಡೇಗೆ;
ಎನಿತು ಬಣ್ಣದ ಎನಿತು ರಚನೆಗಳ ಪುಕ್ಕ!
ಯಾರು ಹೇಳುವರಕ್ಕ ಈ ನಿಮ್ಮ ಲೆಕ್ಕ!
ಹಕ್ಕಿ ಮಿಗಗಳ ಬೆಡಗ ಮಿಕ್ಕೊಂದು ಬೆಡಗು
ಮನುಜರಲಿ ಕಾಣುತಿದೆ ನನಗೆ ಅಡಿಗಡಿಗು.
ಈ ಗಾಡಿ ಈ ಮೋಡಿ ಈ ಸೊಬಗ ನೋಡಿ
ನಿಮ್ಮ ತನ್ನಂತೆ ಎಣಿಸಿದೆ ನರನ ಖೋಡಿ.
ಎಲ್ಲ ನಿಮ್ಮಂತೆ ಸರಿ; ನೀವು ಯಾರಂತೆ?
ನಾನರಿಯೆನೆಂಬುದೇ ಬುದ್ಧಿ ಓರಂತೆ.
ಇಂತು ಖಗ ಮೃಗ ನರೋರಗರ ಪರಿ ಪರಿಗೆ
ಮೊದಲೆನಿಸಿ ಬೆಡಗುಗಳ ಹಚ್ಚಿದಿರಿ ಒರೆಗೆ.
ತಣಿದ ಶಿವ; ನೀನು ತಣಿಸಿದೆ ಅವನ ಬಯಕೆ;
ಸೋಲನೆಂತುಟು ಶಂಭು ನಿನ್ನ ಅನುನಯಕೆ?

ಆ ಕ್ಷಣಾರ್ಧದ ಬಯಕೆ ಹರಿವಂದು ನೀವು
ನಿಂತಿಹಿರಿ ಈ ನಮ್ಮ ಹಲಸಂಗಿ ತಾವು.
ತನತೆದೆ ಪ್ರಸನ್ನವಾಗಿರಲು, ಕೈಲಾಸ
ಇಲ್ಲಿ ಮೂಡಲಿ ಎಂದಿಹನು ಸುಂದರೇಶ.
ಎಲ್ಲೆಡೆಯು ಕೈಲಾಸ; ಶಿವನಿಹನು ಎಲ್ಲೂ;
ಅವನಿಗಂಟದು ಇಲ್ಲಿ ಅಲ್ಲಿಗಳ ಸೊಲ್ಲು.
ಆ ಕ್ಷಣವೆ ಮೂಡಿತ್ತು ಕೈಲಾಸ ಇಲ್ಲಿ;
ಮೂಡಿದಿರಿ ನೀವು ಪೀಠದಲಿ ಕಳೆ ಚೆಲ್ಲಿ.
ಮುನ್ನ ನಿಮ್ಮನು ಮರೆಸಿದಾಕ್ಷಣದ ಅರೆಯ
ಮುಗಿಸಿ, ಶಂಕರ ಸಭೆಗೆ ಕವಿದಿದ್ದ ತೆರೆಯ

ಸರಿಸಿದನು. ಶಿವನೆತ್ತ ಎಂಬ ಭಯವುಂಡು,
ದಿವಿಜಗಣ ಮತ್ತೆ ನಿಮ್ಮನು ಇಲ್ಲಿ ಕಂಡು
ಧೃತಿಗೊಂಡು, ಶಿವ ಮರೆದುದಿಲ್ಲೆಂದು ಎಣಿಸಿ,
ನಿಮ್ಮ ನೋಡಿತು, ನೋಟದಿಂದೊಳಗ ತಣಿಸಿ.
ಅಂತೆ, ಮೊದಲಿಗು ಮಿಕ್ಕದೇನೊ ಆನಂದ
ಎಲ್ಲರನು ಸೋಕಿತ್ತು ಶಿವನ ತಣಿವಿಂದ.
ಕಾರಣವ ಕಾಣದೆಯೆ ಆರುಮುಗ ಗಣಪ
ನಗುತಿಹರು ; ಹೇಳಲೇ ಆ ನಗೆಯ ನುಣುಪ?
ಬಾಗಿನವ ನೀಡುತಿದೆ ಪ್ರಮಥಗಣ ಸಭೆಗೆ ;
ಜಯವಕ್ಕೆ ಶಂಭುವಿಗೆ, ಜಯ ನಿನಗೆ ಪ್ರಭುವೇ,
ಎಂದು ಭಕ್ತಿಯಲಿ ಮೊರೆದಿಹನು ನಂದೀಶ ;
ಅವನಲಿ ಅನುಗ್ರಹಿಸಲೆಂದೊಂದು ಹಾಸ
ಮೂಡಿತ್ತು ನಿನ್ನ ಅರಸನ ಮುಖದೊಳಾಗ.
ತಂಪಾಗಿ ಸುಯ್ದಿಹನು ಕಂಕಣದ ನಾಗ.

ಆಗ ತೋರಿತು ದೊರೆಗೆ, ನಿನ್ನ ಕುರಿತೊಂದು
ನಗೆ ನುಡಿಯ ನುಡಿಯನೇತಕೆ ತಾನು ಎಂದು.
ನುಡಿಯನೇತಕೆ? ಬೇರೆಯೇ? ಭೇದವೇಕೆ?
ನುಡಿದೆ ನುಡಿದನು: "ದೇವಿ, ಓಪೊ ನನ್ನಾಕೆ,
ಕೈಲಾಸದಲಿ ಒಬ್ಬಳೊಬ್ಬನೊಡನಾಡಿ
ಸುಖಿಸಿದ್ದು, ಸೃಷ್ಟಿಯಲಿ ಬಹು ಬಾಳ ಕೂಡಿ,
ಕೋಟಿ ರೀತಿಯ ಮೀನು ಹುಲಿ ಹಾವು ಹಕ್ಕಿ
ಮನುಜ ಕಿಂಪುರುಷ ಕಿನ್ನರರಾಗಿ, ಜಕ್ಕಿ
ಇಲ್ಲಿ ಹಲಸಂಗಿಯಾಗಿಹಳೊಬ್ಬ ಜಾಣೆ
ಕಂಡೆಯಾ?" ನಕ್ಕ ಭವ. ನಕ್ಕು, ನನ್ನಾಣೆ,

ನಿನ್ನ ನೋಡಿದನು: ನೋಟವೂ ಮೆಚ್ಚಿನಿಕ್ಕೆ.
ಜಕ್ಕಿ ಎನುತವನಾಗ ಜಗದ ನೋಟಕ್ಕೆ
ಒಬ್ಬ ಜಕ್ಕನೆ ಆದ; ನೀನಾದೆ ಜಕ್ಕಿ.
ಶಿವ ಮತ್ತೆ ನೋಡಿದನು ಆನಂದ ಉಕ್ಕಿ.
ನಿಮಗೆ ಒಪ್ಪದ ವೇಷವೇ ಪರಿಜೆ ನಿಲುವೆ?
ನಿಮ್ಮ ಹೊದ್ದೇ ಚೆನ್ನವೆನಿಸದೇ ಚೆಲುವೆ?
ನಗಲು ಭವ ನೀನಕ್ಕೆ: ಕರಿಹಲ್ಲ ಚಂದ,
ಮೂಗು ಮೂಗುತಿ ಬಂಧ, ತಾನೆ ಒಂದಂದ.
ಶಿವನ ನಗೆಗೆದುರು ನಕ್ಕೆಂದೆ: "ನನ್ನರಸ,
ಹಲವ ಬಯಸುವ ನಿನಗೆ ತಗುವುದೀ ಸರಸ.
ಪತಿ, ಕೋಟಿ ಕೋಟಿ ಭೂಷಣ ವೇಷಗಳನು
ಧರಿಸಿದನು; ಸತಿಧರಿಸಳೇ ಅವಳ ಕೊಳನು;
ಆಡಿದಂತಾಡಳೇ, ನಲವ ಬರಿ ಚಲಕೆ
ಒಲ್ಲೆನೆಂಬನು; ಕಾಣೆಯಾ ಅವನ ಕಲಿಕೆ?
ಅದರಿಂದ ಹೆಣ್ಣು ಆ ವೇಷಗಳ ಧರಿಸಿ
ಕೂಡಿದಳು, ಎಲ್ಲದರೊಳವನನೇ ಸ್ಮರಿಸಿ.
ನೀನೇನೊ ಹಲವಾದೆ; ನಾ ಕಂಡುದೊಂದೆ;
ಎಲ್ಲ ಆಕೃತಿಯಲೂ ನೀಮುಂದೆ ನಿಂದೆ;
ನಿನ್ನ ತಣಿಸಿದೆ ನಾನು, ರೂಪುಗಳನಲ್ಲ;
ನಿನ್ನ ಬಿಟ್ಟನ್ನೊಂದ ನಾ ಕಂಡುದಿಲ್ಲ;
ನೀನಲ್ಲದಿಲ್ಲ ಗಂಡೆಂಬುದಿನ್ನೊಂದು;
ಹಲಸಂಗಿ ಎನಲಿನ್ನು ನನಗೇನು ಕುಂದು?

ನೀನೆಂದ ಪರಿ ನಾನು ಹಲಸಂಗಿಯಲ್ಲ;
ನಾನು ಹಲಸಂಗಿ ಬೇರೊಂದು ತೆರ, ನಲ್ಲ.

ಒಲುಮೆಯಲಿ ನೀ ಚೆನ್ನ ಈ ಯೆನ್ನನೊತ್ತೆ
ಅದಕೊ ಆ ಶತಕೋಟಿ ಬಾಳ ನಾ ಹೆತ್ತೆ.
ಗಣಪ ಷಣ್ಮುಖ ಇಲ್ಲಿ ಸುಖದಿ ನಲಿದಿಹರು;
ನಲಿವರೇ ಹಸುಳೆಗಳು, ಶತಕೋಟಿ, ಅವರು?
ಆ ಹಲವು ಬಾಳ ಸುಖವನು ಬಯಸಿ ನಾನು
ಹಲಸಂಗಿ; ಹಲಸಂಗಿ ಆಗಂತೆ ನೀನೂ."

ನಗೆ ನುಡಿದ; ದಿಟನುಡಿದೆ; ತಾಯ ಹಟ ಹಿಡಿದೆ;
ಒಂದನೇ ಒಲಿದು ಹಲಸಂಗಿ ಪದ ಪಡೆದೆ.
ತ್ರಿಭುವನೇಶ್ವರನ ಮನವೊಲಿಸಿ, ಓ ತಾಯೆ,
ಮೂಲೋಕವನು ಹೆತ್ತು ಹೊರೆದೆ ನಿರಪಾಯೆ.
ಭಕ್ತರನು ಕಾವ ಚಟದಲಿ, ಮಹಾಮಾಯೆ,
ಗಚ್ಚಿನೀಗುಡಿಯ ಗದ್ದಿಗೆಯಲಿ, ಅಮೇಯೆ,
ನಕ್ಕ ಕರಿಹಲ್ಲು, ಮೂಗುತಿ ಇಟ್ಟ ಮೂಗು,
ಮಗುವ ಕರೆಯುವ ಹಸನ ಕನಿಕರದ ಚಾಗು,
ಎದುರು ಕುಳಿತಿಹೆ ತಾಯೆ, ಬಾರೆ ಈ ಮನಕೆ;
ಬರುವುದೇ ಸರಿಯವ್ವ ನಿನ್ನ ತಾಯ್ತನಕೆ.
ಸರಿಯಂತೆ! ಸರಿತಪ್ಪ ಕಲಿಸಲೇ ನಿನಗೆ?
ಎನತು ಹಿತ ತಿಳಿಯದೇ ತಾಯ್ಗೆ ತನತನಗೆ?
ನೀನಾಗಿ ಕನಿಕರಿಸಿ ಕಂದನನು ಕಾಯೆ,
ನನ್ನವ್ವ ಜಕ್ಕವ್ವ ಹಲಸಂಗಿ ತಾಯೆ.

## "ಏನೇ ಬರಲಿ, ಎಂತೇ ಇರಲಿ!"

ಏನೇ ಬರಲಿ, ಎಂತೇ ಇರಲಿ,
ಅನುದಿನ ಯಾವ ಅಸುಖ ಸುಖ ತರಲಿ,
ಬಾಳ ಗೊಂದಲದ ಕರ್ಕಶದೆದೆಯಲಿ
ಕೇಳುತಿರಲಿ, ಹರಿ, ನಿನ್ನ ಮುರಲಿ.

ನೋವ ಲೇಪದಲಿ ಬದುಕಿನ ಹಣ್ಣು
ಬಾಯೊಳಾಗಿರಲು ಎಂಥದೊ ಮಣ್ಣು,
ದೃಷ್ಟಿ ಕೆಟ್ಟು ಕತ್ತಲ ನಿಟ್ಟಿಸಿ ನಿಲೆ,
ಕಾಣಲಲ್ಲಿ, ದೊರೆ, ನಿನ್ನ ಕಣ್ಣು.

ಮೆತ್ತನ ಹಾಸಿಗೆ ಮುಳ್ಳಿನೊಲಾಗಿ,
ಬೇನೆಯ ಕಣೆ ಆತ್ಮವನೇ ತಾಗಿ,
ಇನ್ನು ಏನು ಗತಿ ಎನ್ನುವ ವೇಳೆ,
ಕೈ ಹಿಡಿದಿರು, ಕರುಣೆ, ನೀನಾಗಿ.

## ಜೀವದಾತ ಸತ್ತ್ವವನ್ನು ಕುರಿತು

೧

ನೀನು ಮಂತ್ರಿಸಿದ ಮಣ್ಣಿನ ಗೊಂಬೆ
ಮನುಜನೆನಿಸಿಕೊಂಡಿದೊ ನಡೆದಿಹೆ ನಾ.
ನಿನ್ನಿರವಿಗೆ ಈ ಗೂಡೊಂದಿಂಬೆ?
ಆದರೂ ಇದರೊಳಡಗಿಹೆ, ಗಹನ.

ಪ್ರಾಣವಾಯುವನು ಕೊಲುಮೆಯ ಬಾಲನ
ಕೆಲಸಕಿರಿಸಿ ಬಾಳಿನ ಕಮ್ಮಾಳ
ಉಸಿರಲಿ ಜೀವಾನಲದನುಪಾಲನ
ನಡೆಸಿಹೆ: ಇಕೊ, ತಿದಿಯೊತ್ತುವ ತಾಳ.

ಜೀವವೆ ನಯ; ಅದರೊಳಕಡೆ ಇನ್ನೂ
ನಯುದ ಹುರುಳು ಮನವೆಂಬಿದ ಸುಳಿಸಿ
ಅದ ನೀ ಮಿಡಿದಿಹ ತೆರನೂ ಚೆನ್ನು,
ನೋಯಿಸಿ, ನಲಿಸಿ, ತಣಿಸಿ, ಮುಳಿಸಿ.

ಕೊಲುಮೆಯ ಬಾಲನ ಸಾಕು ಬಿಡೆಂದೆಯ,
ಕೆಡೆಯಿತು ನೂರ ಎರಡು ಹಿಡಿ ಮಣ್ಣು;
ಉಸಿರೂ ಮನವೂ ಒಡಲಿನ ಬಂದಿಯು
ಪದವುಳಿದೋಡಿವೆ: ತೋರವು ಬೆನ್ನೂ.

೨

ಸಾಗರದಲಿ ಅಲೆ ಅಲೆ ಅಲೆಯೆಂತು
ಬಾಳಲಂತು ಉಸಿರುಸಿರನು ನಡೆಸಿ,
ಅವುಗಳಂತರದಿ ಎಂತೋ ನಿಂತು
ಎಂತೋ ಭಾವದ ತುಂತುರ ಸಿಡಿಸಿ,

ಕ್ಷಣ ಅನುಕ್ಷಣವು ಆಡಿಸುತೆನ್ನ
ನೀನೆ ನೋಡಿಕೊಂಡಿಹೆ ಎನ್ನೊಡೆಯ ;
ಇನ್ನೆನಗೇತಕೆ ಭೀತಿಯ ಬನ್ನ ?
ನೋಡಲೇಕೆ ಹಿಂಗಡೆ ಮುಂಗಡೆಯ ?

ನೀ ಕೈಯಾಡಿಸಿ ನಡೆಸಿದ ವಸ್ತು
ಒಳಿತರಲೇ ಮುಗಿವುದು ; ಮತ್ತೇನು ?
ನಿನ್ನ ನೋಟ ವಚಿಸಿತು : "ಶುಭಮಸ್ತು" ;
ನಿನ್ನಂಗುಲಿ ಮಂಗಲ ಸುರಧೇನು.

784-46. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರು ಮುದ್ರಿಸಿರುವರು

# ಮ ನ ವಿ

ಶ್ರೀ ನಿ ವಾ ಸ

ಜೀವನ ಕಾರ್ಯಾಲಯ
ಬ ಸ ವ ನ ಗು ಡಿ
ಬೆಂಗಳೂರು

# ವಿಷಯ ಸೂಚಿ

# ಮನವಿ

## ಶ್ರೀರಾಗ

ಎನ್ನ ಜೀವದಜೀಯ ಚೆನ್ನಕೇಶವರಾಯ
ನಿನ್ನಡಿಯೊಳೆಸಗುವೀಮನವಿಯನು ಕೇಳು

ನಾನೆಂಬಿದನುವಮಾಡಿ ಲೋಕದೀಲೀಲೆಯಲ್ಲಿ
ತಾಣ ಒಂದನು ಇದಕೆ ನೀಡಿ ಸತತ
ಏನೊಂದ ಕುಂದಿಲ್ಲದಂತೆ ಪೊರೆದಿರುವ ಅಭಿ
ಮಾನಿ ನೀನೇ ನುಡಿಸಿದೀ ನುಡಿಯನು

ದೇವನೀನಿತ್ತ ಬದುಕಿನ ಬಹಳ ಕರ್ಮದಲಿ
ಯಾವವನು ನಿನ್ನಡಿಯ ನೆನವ ಹಿಡಿದು
ಗೈವವಾ ಕರ್ಮಒಳಿತಹವೆಂದರಾರ್ಯಜನ
ಆ ವಿಧದ ಕರ್ಮ ಬೆಳೆಯಲಿ ನನ್ನಲಿ

ಈ ತೆರದ ಕರ್ಮವಾಗಲಿ ಎಂದು ನಾ ಮನದಿ
ಹಾತೊರೆದು ಮಾಡುತಿಹ ಮನವಿಯಿದನು
ಪ್ರೀತಿಯಲಿಕೇಳ್ದೆನ್ನನುದ್ಧರಿಸು ಹೇಜಗ
ನ್ನಾಥ ಮನ್ನಾಥ ಶ್ರೀ ಶ್ರೀನಿವಾಸ

# ಅರಕೆ

ಮುಖಾರಿ

ಅರಸುವುದು ಜಗವು ನಿನ್ನನು ಶ್ರೀನಿವಾಸ
ಹರಿಯೆಂದು ಹರನೆಂದು ವರಪಿತಾಮಹನೆಂದು

ಬರೆವನಿವ ಗ್ರಂಥವನು ಹರಿವನಿನ್ನೊರ್ವನದ
ಪರಿಪರಿಯ ಮಾತ ನಿಜವೆಂಬರೆಲ್ಲ
ಸರಿಯೆಂಬನೊರ್ವ ಸರಿಯಲ್ಲೆಂಬ ನಿನ್ನೊರ್ವ
ಸರಿಯೆಂಬ ಅಲ್ಲೆಂಬ ಜನವು ಎಲ್ಲಾ

ಸತ್ಯವೆಂಬುದು ರೂಪವೆತ್ತ ಸೊಗಸೆನ್ನುವುದು
ತತ್ವಜ್ಞಾನದಿ ಸುಖದ ಇಚ್ಛೆಯಲಿ ತಿಳಿದು
ಹತ್ತು ಕರಣಗಳಿಂದ ಹತ್ತಾಗಿ ಕಾಣುತಾ
ಮತ್ತೊಂದು ಬೇರೊಂದು ಹೆಸರಿಂದ ಕರೆಯುತಾ

ನೂರಾರು ಕಡೆಯಿಂದ ಸೇರಿ ಬಂದಿರುವೆಗಳು
ಬಾರಿ ಬಾರಿಗೆ ಒಂದನೊಂದಪ್ಪಿ ಕಟ್ಟಿ
ಸಾರೆಯೊಳಗಿರುವಿನಿಸು ಸಕ್ಕರೆಯ ಸೇರುವರೆ
ಕಾರಾಡುವಂತೆ ತಾರಾಡಿ ಹರಿಹರಿದೋಡಿ

# ಮರೆ

ಕೇತಾರಗೌಳ

ಎಲ್ಲವ ನೋಡಿದೆನು ಎಲ್ಲಿಯು
ನಿನ್ನ ನೋಡಲಿಲ್ಲ

ಎಲ್ಲ ರೂಪದ ಸೊಗಸನು ನೋಡಿದೆ
ಎಲ್ಲ ಗಂಧವ ರಸವನು ನೋಡಿದೆ
ಎಲ್ಲ ಸೌಖ್ಯದ ರೀತಿಯ ನೋಡಿದೆ
ಎಲ್ಲವನಾಶಿಸಿ ನಿನ್ನ ನೋಡದೆ

ಆಹಾ ಎಂದಾಶಿಸಿ ಸುಖವಿಲ್ಲ
ಮೋಹವು ಜೊತೆಯಲಿ ಖೇದವ ತಹುದು
ಮೋಹವನುಳಿದು ನೋಡುವ ಎನಲದು
ಸಾಹಸ ವರ್ತನವಾಗಿದೆ ದೇವ

ಮರೆಯಿಸಿ ನಿನ್ನನು ನಿನ್ನ ಮಹಿಮೆ
ತೆರತೆರನಾಗಿ ಹರಡಿತು ಎಲ್ಲೆಡೆ
ಮರೆಯುಳಿಯದೆ ನೀನಿಂತು ನಿಂತಿರೆ
ಅರಿಯಲಾರೆ ಅರಸಲಾರೆ

# ಮುಗ್ಧ

**ತೋಡಿ**

ನಾನೇ ಬೇಡಿದೆನೇ ಮರೆಯೆಂದು
ನಾನೇ ಮೌಢ್ಯದ ಛಲದಲಿ ಕೇಳ್ದೆನೆ

ನೀನು ಬೇಡ ನಿನ್ನ ಚಿತ್ರವ ನೋಳ್ಪೆನು
ಶ್ರೀನಿವಾಸ ಈ ಲೋಕದಿ ರೂಪವಿ
ತಾನವತಳೆದು ಎನಗೆ ಕಾಣು ಎಂದು
ನಾನೇ ಮುಗುದಾಗಿ ಬೇಡಿದೆನೇ ಹರಿ

ಮನೆಯ ಮುಂದಿನೀ ಪ್ರಕೃತಿಯ ಶೋಭೆಯ
ಅನುಭವಿಸಲ್ ಮನ ಅರಿಯದಿದೆ
ಇನಿತು ಮಾತ್ರದಾ ಸೊಬಗಿಗೆ ಚಿತ್ರದಿ
ನನೆಕೊನೆ ಪೋಗುವುದಲೆ ನಲಿದು

ಎನ್ನ ರೂಪಿನ ಬಿಂಬವನು
ಕನ್ನಡಿಯಲಿ ನೋಡಲು ಮಗು ಬಯಸಿ
ಚಿನ್ನ ನಾನಿಹೆನಿಲ್ಲಿ ಎಂದೊಡೆ ಒಪ್ಪಳು
ಕನ್ನಡಿಯಲಿ ಬಾರೆಂದು ಕಾಡುವಳು

# ಸಾಮ್ಯ

**ಕಾಂಭೋಜಿ**

ಸಾಮ್ಯವನು ಕೇಳಿ ಮನ ತಣಿಯುದಯ್ಯ
ಸ್ವಾಮಿ ನೀನಿರುವುದನು ನಿಜದಿ ಕಾಣದೆ ಬರಿಯ

ಕೆಂದಾವರೆಯತೆರದ ಚೆಲುವು ನಿನ್ನಡಿಯೆಂದು
ಚಂದ್ರನೊಂದಂದ ಸಿರಿ ಮೊಗದೊಳೆಂದು
ಸಂದನೀಲೋತ್ಪಲದ ಬೆಡಗ ಕಣ್ಣುಗಳೆಂದು
ಬಂದು ಹೋದವರೆಲ್ಲ ಹೇಳಿರುವರು

ಕೆಂದಾವರೆಯನೋಡಿ ನೀಲೋತ್ಪಲವ ನೆನೆದು
ಚಂದ್ರನಂದದ ಮೊಗವ ನೆನೆದು ಮನಕೆ
ತಂದುಕೊಳ್ಳಲು ನೋಡಿ ಸೋತಿಹುದು ಚೇತನ
ಒಂದು ರೂಪಾಗದಿದೆ ಇವರ ನೆನಹು

ಮಲ್ಲಿಗೆಯ ಬಣ್ಣವನು ಹಾಲಿನಲಿ, ಗಂಧವನು
ಒಳ್ಳೆ ಭಟ್ಟಿಯು ಸಾರದಲ್ಲಿ, ಮಗುವ
ಸಲ್ಲಲಿತ ದೇಹದಲಿ ಮಾರ್ದವವ, ತೋರಿರಲು
ಬಲ್ಲದೇ ಮನಸು ಮಲ್ಲಿಗೆಯ ನೆನೆಯೆ?

# ಮರವು

**ಆರಭಿ**

ಎಲ್ಲ ಗತಿಯೊಳು ಮನವು ನಿನ್ನ ನೆನೆಯುವ ತೆರದೆ
ಫುಲ್ಲಲೋಚನ ಎನಗೆ ವರವ ನೀಡು

ಅಂದು ನಿನ್ನಯ ಕೃಪೆ ಇಲ್ಲವೋ ಎಂದೆಂಬ
ಸಂದೇಹವಿರಲು ಮನ ಮತ್ತೆ ಮತ್ತೆ
ತಂದೆ ನಿನ್ನನು ನೆನೆಯುತಿರ್ದುದ್ದೈ ನಿನ್ನ ಕೃಪೆ
ಬಂದಂತೆ ತೋರುತಿರಲಿಂದು ತಾನು
ಮಂದವಾಗಿಹುದು ಹರಿ ಬಂದ ಸುಖದೊಳು ನಿನ್ನ
ಅಂದು ನೆನೆದಂತೆ ನೆನೆಯದು ನಿತ್ಯವು
ತಂದೆ ಸುಖವಿರೆ ಹೋಗೆ ನಿನ್ನಪದದಲಿ ಭಕ್ತಿ
ಎಂದಿನಂತಿರಲಯ್ಯ ಎನ್ನ ಮನದೆ

ಮಳೆಬರುವ ಮುನ್ನ ಬಿಸಿಲಿನ ಝಳದಿ ಜಗವೆಲ್ಲ
ತೊಳಲುತಿರೆ ಖೇದದಿಂದಳಲುವಿಳೆಯು
ಮಳೆಯ ಬೇಡುವುದನಲು ಸುಳಿಯುತೆಲ್ಲೆಡೆಯಿಂದೆ
ಸೆಳೆ ಮಿಂಚು ಮುಗಿಲೊಡ್ಡ ಸೀಳುವಂತೆ
ಕಳಕಂಠ ನಿನದವದು ಕೇಳುತಿದ್ದುದು. ಈಗ
ಮಳೆಬರಲು ಕೇಳದಂದಿನ ದನಿಗಳ
ಸೆಲೆಯೆನಲು ಕೇಳ್ಪುದೊಮ್ಮೊಮ್ಮೆ ಸಂಜೆಯಲಿ ನಿ
ನ್ನೊಳು ಭಕ್ತಿ ಮನದೊಳಂತಾಗದಿರಲಿ

## ಬೇಸರು

**ಕಾನಡ**

ಏನಯ್ಯ ಈ ಬೇಸರು ಮನದೊಳು
ಏಸಿನಿತು ಬೇಸರುವುದು

ಸೋರಲಾರಂಭಿಸಿ ಆಗಸ ನಡುವಗಲು
ಕಾರುತಲಿ ಇಹುದು ಇನ್ನೂ ನಿಲ್ಲದೆ
ತೀರತಣುವಾಗಿಹುದು ಬೀಸಿ ಬರುತಿಹ ಗಾಳಿ
ನೀರು ನಿಂತಿಹುದು ದಾರಿಗಳೊಳೆಲ್ಲ

ಮರಗಳೆಲ್ಲವು ಹಕ್ಕಿ ಉಳಿಯೆ ಬರಿದಾಗಿಹವು
ಮೊರೆಯುತಿದೆ ಪೆಣ್ಗೆ ತೋಪಿನ ಪಾರಿವ
ಗರಿನೆನೆದ ಕಾಗೆ ಗೂಡಿಗೆ ಹೋಗುತೀ ಮರದಿ
ಕರೆಯುತಿದೆ ಜತೆಯವರ ಕೊರೆದನಿಯಲಿ

ಬೇಸರೆನ್ನಯ ಮನವ ಹಿಡಿದಿಹುದು ಬಲೆಗಳನು
ಬೀಸಿ ಹಕ್ಕಿಯ ಹಿಡಿವ ಬೇಡನೆಂಬಂತೆ
ಆಸೆಯುಳಿದಾಲಿನೆಡೆ ಗರಿಯ ಬಡಿವುದ ನಿಲಿಸಿ
ಘಾಸಿಯೇತಕೆ ಎಂದ ಹಕ್ಕಿಯಂತಿದೆ ಜೀವ

# ಅಲಸಿಕೆ

**ಜಂಜೂಟಿ**

ಒಲ್ಲೆನಾವ ಕೆಲಸವನೂ ಎಂದಿಹುದಿಂದೆನ್ನ ಮನವು
ಎಲ್ಲವನೂ ಉಳಿದು ಸುಮ್ಮನಿರುವೆನೆಂಬುದು

ಅನುದಿನದೊಳು ಇಹ ಕೆಲಸವು ಇಹುದಿಂದೂ ದಿನದಿನವೂ
ಅನುರಾಗದಿನೆಲ್ಲದರೊಳು ತೊಡಗುತ್ತೆ ಇರ್ದ
ಮನವಿದಿಂದು ತಾನೇನನು ಒಲ್ಲೆನೆಂದು ನಿಂದಿಹುದು
ಅನುಕವೇನೊ ಅರಿಯೆ ನಾನು ಎಳಸುವುದೇನನೊ ಮನವು

ಮೂರುದಿನಗಳಿಂದೆ ಮಳೆಯು ಸುರಿಸಿ ಇಂದು ಸೋತಿಹ ಈ
ನೀರದಗಳು ಆಗಸದಲಿ ತಾರಾಡಿರೆ ಭಾನು
ತೋರುತಿಹನು ಸೌಮ್ಯನಾಗಿ ಒಮ್ಮೆ ಒಮ್ಮೆ ತಂಬೆಲರು
ಸಾರುತಿಹುದು ಸುಖದ ಸೊಂಪ ಮೆಲು ನಡೆಯಲಿ ದೂರದಿಂದೆ

ಹರಿ ರಾಧೆಯು ಸರಸದಿಂದೆ ಹರಿದೋಡಿಸುತಿಹನೆನೆ ಈ
ನೆರಳು ಬಿಸಿಲನೋಡಿಸುತಿದೆ ಸಿಲುಕದೆ ಇರಲು
ಅರಿದೆನ್ನುತೆ ತರುಣಿತಿರುಗಿ ಹರಿಯನೆ ಅಪ್ಪಿದಳೆಂದೆನೆ
ಹರಡಿತೊಮ್ಮೆ ಬೆಳಕು ನೆರಳು ಮರೆಯಲು ನಿಮಿಷಕೆ ತಾ

ಅರೆಯರಿಯುದ ಮರೆಯ ಸುಖವನಾವುದನಿಂದಾಶಿಸಿ ಕುಡಿ
ಹರಿವುದೊ ಮನ ಅರಿಯೆ ನಾನು ದೊರೆ ನೀ ಪ್ರೇಮ
ಭರದೊಳೆನ್ನ ಹಿಡಿದೌಂಕಲು ತಡೆದುದುಸಿರು ಎಂಬಂತಿದೆ
ಅರಿಯೆನು ಹರಿ ಈ ಅಲಸಿಕೆ ಏತಕೆ ಬಂದುದೊ ಇಂದು

# ಹೂವರಸೆ

**ಕಾಂಭೋಜಿ**

ಆವಗಾನವಿದೆಂದು ಅಂದೆಂದ ತೆರದೊಳು
ಆವ ಹೂವಿದು ಎಂದು ಇಂದೆಂದೆನು

ಶ್ರಾವಣವು ಕಳೆದೀಗ ನಾಲ್ಕು ದಿನವಾಗಿರಲು
ತೀವಿ ಹಸುರಿಂದೆಸೆಯುತಿರಲು ತಿರೆಯು
ದೇವ ನಾನಿತ್ತಬರುತೀ ಹೂವ ಕಂಡವನು
ಆವ ಹೂವಿದು ಎಂದು ಅರಿಯದಿಹೆನು

ಬಂಗಾರವನು ಪುಟಕೆ ಹಾಕಿ ಊದಿಸೆ ಬರುವ
ರಂಗಿನೊಂದತಿಶಯದ ಶೋಭೆಯಿಂದ
ಶೃಂಗಾರವಾಗಿ ಕಣ್ಣಿಗೆ ಕೌತುಕವ ಕೊಡುವ
ಪಾಂಗಿನಲಿ ಮೆರೆಯುತಿಹುದೀ ಹೂವಿದು

ಆವ ಹೂವೆಂದು ಬಳಿಯಲಿ ಹೋಗಿ ನೋಡುವೆನೆ
ದೇವ ನಿನ್ನಯ ಸೃಷ್ಟಿಯೊಂದು ಸೊಬಗು
ಆವತೆರನಲ್ಪತಾಣದಲು ಕಾಣಲುಬಹುದು
ಹೂವರಸೆಯಲಿ ಕಣ್ಣಕೊಂಡುದಿಂತು

## ಬಳಕೆ

**ಕಾಂಭೋಜಿ**

ಏನಾಗಲೆಳಸುತಿಹೆ ಜೀವ
ಏನಾಗಲೆಳಸುತಿಹೆ ಅರಯುಸಿನೋಡು

ಅಲ್ಪ ಯೋಚನೆಗಳನು ಮಾಡಿ ಸಂತತ ಮನಕೆ
ಅಲ್ಪವೆಂದೆನಿಪ ವಕ್ರದಗತಿಯು ಕಲಿಸೆ
ಕಲ್ಪಾಂತರದ ಕೊನೆಯುವರಗೆ ಬರಬರುತ ಅ
ತ್ಯಲ್ಪವಾಗುತೆ ವಕ್ರಸಾರವಹೆ ನೀ

ವಿಷಯುವಾವುದು ಹಿಡಿದೊಡೆಯು ವಿಷವನೆಣಿಸುತೆ
ವಿಷಮು ಯೋಚನೆಯುನೇ ಮಾಡುತಿರಲು
ವಿಷಬಿಂದು ವ್ಯೈವೆತ್ತು ಹುಳು ಹಾವು ಅಪ್ಪಂತೆ
ವಿಷದ ಯೋಚನೆಯ ಆಶ್ರಯುವಪ್ಪೆ ನೀ

ಮಲವ ಕಳೆ ಮನದಿಂದ ಜೀವ ಸುನಿ
ರ್ಮಲವಾಗುತಿರಲು ದೃಢಯತ್ನದಿಂದೆ
ಲಲಿತವಹುದಾತ್ಮ ಹೂವಂದದಲಿ ಅರಳಾಗಿ
ಮಲರವೊಕ್ಕುಳನೊಳಗೆ ಲೀನವಹುದು

# ಹೆಮ್ಮೆ

## ಶ್ರೀರಾಗ

ನಾನು ಎನ್ನುವುದು ಕಳ್ತಲನೆಸಗದಂತೆ
ನೀನೊಳಗ ಬೆಳಗು ಚಿದ್ರೂಪಾ

ಜಂಭವನು ಬಿಡು ಎಂದು ಗೆಳೆಯು ಹೇಳಿದರೆ ಮನ
ಮುಂಬರಿದು ಜಂಬವೆಲ್ಲಿಯುದೆನ್ನಲಿ
ಎಂಬದೈಯಾ ನಾನು ಕಾಣೆನೇ ಎಂದೆಂಬ
ಜಂಭವನು ಬರಸೆಳೆದು ಅಪ್ಪಿಹಿಡಿದು

ಕೆಲಸ ನಿನ್ನದು ಎಲ್ಲ ಎಲ್ಲವನು ನೀ ಮಾಳ್ಪೆ
ಫಲವು ನಿನ್ನದು ಎಂದು ಬಲ್ಲೆ ನಾನು
ತಿಳಿದಿಹುದ ಜನ ತಿಳಿಸಿ ನುಡಿಯೆ ಕೋಪಿಪೆನಯ್ಯ
ಕಳಚು ಈ ದುರಭಿಮಾನವನು ಮನದಿಂದ

ಬುದ್ಧಿ ತಿಳಿದಿಹ ದಿಟವ ಆತ್ಮ ಅಂತರ್ಯದಲಿ
ಸಿದ್ಧಿಗೊಳಿಸದೆ ಇಹುದು ದೇವ ದೇವ
ಮೊದ್ದುತನವಿದ ಹರಿಸು ಅರಿತರಿವು ಚೇತನವ
ಶುದ್ಧಾಂಗವಾಗಿ ಬೆಳಗುವವೊಲೆಸಗು

ಮುತ್ತಿ ಕವಿದಿಹುದು ನಾನೆಂಬ ಅಭಿಮಾನವಿದು
ಇತ್ತಲಿಂದಟ್ಟಿದೊಡೆ ಅತ್ತ ಹರಿದು
ಎತ್ತಲಾದರು ಜೀವದೊಳೆ ಇರುವೆನೆನ್ನುವುದು
ಒತ್ತು ಈ ಮೌಢ್ಯವನು ಉಸಿರಾಚೆಗೆ

# ಹಿರಿಯದು

**ಕಾಂಭೋಜಿ**

ಹಿರಿದ ನೋಡಿದೊಡೆ ಅರಿಯುವ ದೃಷ್ಟಿಶಕ್ತಿಯನು
ಹರಿಯೆನಗೆ ನೀಡು ನಿನ್ನನು ಅರಿವರೆ

ಆಗಸದ ದುರ್ಗಮದ ಮೇರೆಯನು ಮೀರಿರುವ
ಸಾಗರವ ಅದು ನೆಲವ ಸೋಂಕುವೆಡೆ ನೋಡೆ
ಸಾಗರವೆ ಇದು ನಮ್ಮ ಊರಕೆರೆ ಸ್ವಲ್ಪ ಹಿರಿ
ದಾಗೆ ಇದರಂತೆ ಆಗದೆ ಎನಿಪುದು
ಊರಕೆರೆಯಿಂದ ಸಾಗರ ಎನಿಸುವೀಹದನು
ಬೇರೆಯಾಗಿಹುದು ಆರಯಿಸಿ ನೋಡೆ
ನೀರು ನೆಲವನು ಹಿಡಿದ ತೀರದೆಡೆಯಿಂದಲ್ಲ
ದೂರದಾಂತರ್ಯದಾ ಭರದಿನಲ್ತೇ

ಹಿರಿಯರೆಂದೆನಿಸುವರು ದಿನದಂತೆ ಇರುವುದರ
ತೆರವ ನೋಡುತೆ ಇವರು ಹಿರಿಯರೇನು
ಇರುವರೆಮ್ಮಂತೆಯೆನ್ನುತೆ ಮನದೆ ಕಿರಿದೆನಿಸಿ
ಅರಿಯದಿಹುದಯ್ಯ ಮನ ಹಿರಿಯತನವ
ಆರಯಿಸೆ ಹಿರಿದು ಹಿರಿದೆನಿಸುವುದು ದಿನದಿನವು
ತೋರುವಾ ಸಾಮಾನ್ಯ ಚರಿಯೊಳಲ್ಲ
ದೂರದಾಂತರ್ಯದಾಳವತುಳಿದ ಜೀವನದ
ಭಾರದಿಂದಲ್ತೆ ಇದನರಿಯೆ ನಾನು

# ವಾಮನ

## ತೋಡಿ

ಅರಿಯದೊಲು ಬಾರಯ್ಯ ಮನ ತನ್ನ ನಿನ್ನೊಳಗೆ
ಮರೆವುದನು ಕಲಿವ ಮುನ್ನ

ಮೊದ ಮೊದಲು ಬರ ವಂದು ಮೆದುಗಮನದಲಿ ಬಂದು
ಎದೆವುಗುವ ಸೊಬಗಿಂದೆ ಇನಿದನಿಯ ನಗೆಯಿಂದೆ
ಎದುರಿನಲಿ ನಿಂದಿರುತೆ ಎದೆಯ ಕುಂದಿಸದಂತೆ
ಮೊದಲು ಸ್ವಲ್ಪವನು ಕೇಳು ಹರಿಯೇ
ಮೊದಲು ಸ್ವಲ್ಪವನು ಕೇಳು

ಮೊದಲು ಸ್ವಲ್ಪವ ಕೊಡಲು ಮನವು ತಾನೊಪ್ಪುವುದು
ಅದನು ಸ್ವೀಕರಿಸಿ ಹಿರಿದಾಗು ಅಲ್ಲಿಯೆ ದೊರೆಯೆ
ಹೃದಯದಾಗಸವನೆಲ್ಲವ ನೀನೆ ತುಂಬು ದೊರೆ
ಇದಕೆ ಮನ ಒಪ್ಪ ಬಹುದು ಹರಿಯೇ
ಇದಕೆ ಮನ ಒಪ್ಪಬಹುದು

ಒಮ್ಮೆಯೇ ಹಿರಿದಾಗಿ ಬಂದು ಎಲ್ಲವನೆನಗೆ
ಸುಮ್ಮನೆಯೆ ಕೊಡು ಎನಲು ಹೆದರಿ ಮನ ಚೆದರುವುದು
ತಮ್ಮ ನೀನಾರು ಇರು ತುಸ ಎಂದು ತಡೆಯುವುದು
ನೆಮ್ಮಲಾರದು ನಿನ್ನನು ಹರಿಯೇ
ನೆಮ್ಮಲಾರದು ನಿನ್ನನು

# ಬೇಡಿಕೆ

## ಮೋಹನ

ಜೀವನವಿದ ಸ್ವೀಕರಿಸೈ
ದೇವ ದಿನದಿನವ ನಿನ್ನದೆಂದೆನಿಸಿ

ಸಲಿಗೆಯೊಳಿಲ್ಲಾ ದಿನವನೆನ್ನೊಡನೆ
ಕಳೆಯಲಾಗದೊಡೆ ಕಾರ್ಯವಿಹುದರಿಂ
ಕೆಲಕೆ ಬಂದು ಕ್ಷಣನಿಂದು ನಡೆಯೈ
ಜಲಜನಯನ ಇದನಾದರು ಸಲಿಸೈ

ಮನೆಗೆ ಬರಲು ಮನ ಇಲ್ಲವಾದೊಡೆ
ಎನಗೆ ಕೇಳ್ವವೊಲು ದೂರದಿಂದಲೇ
ಕನಿಕರಿಸೊಂದೇ ಸ್ವರವನು ಕೊಳಲಿಂ
ನೆನೆಯುತೆ ಅದನು ದಿನವನು ಕಳೆವೆನು

ಇಂತಾದರು ಎಂತಾದರು ನಿನ್ನಯ
ಚಿಂತೆಯಿಂದೆ ಇರವೆಲ್ಲವ ಸೋಕಿ
ಸಂತತ ನಿನ್ನೊಳು ಬಾಳ್ವವೊಲೆಸಗಿ
ಅಂತರಾತ್ಮ ಎನ್ನ ನಿನ್ನವನೆನಿಸೈ

# ಗುಟ್ಟು

ಯದುಕುಲ ಕಾಂಭೋಜಿ

ಎಲ್ಲರೊಡನಿರುವಾಗ ಎಲ್ಲರಂತಿರುತಿರ್ದು
ಫುಲ್ಲಲೋಚನ ಮನದೆ ಪ್ರೇಮವಿರಲಿ

ಸಲಿಗೆ ಇಹುದೆಂದೆನಲು ಕೇಳಿ ಕರುಬುತೆ ಮನದಿ
ಕೆಲಬರೆನ್ನುವರು ಇವ ನಿತ್ಯ ಸೂರಿ
ಹಲವರೆಮ್ಮನು ಉಳಿದು ಬಲುಮೆಯ ನಮ್ಮೊಡೆಯ
ಹುಲು ಮಾನಿಸನ ಇವನ ಮೆಚ್ಚನೆಂದು

ಇನ್ನು ಕೆಲಬರು, ಮರುಳೆ ದೊರೆಯ ಮನದೊಳು ಅಂತು
ನಿನ್ನ ಕಂಡರೆ ಪ್ರೇಮವಿಹುದಾದೊಡೆ
ಸನ್ನೆಯನು ಮಾಡು ನೋಡುವ ಎಂದು ಹೇಳುವರು
ಉನ್ನತನು ದೊರೆ ನೀನು ಕುನ್ನಿಯೆನ್ನುವರು

# ಹಂಬಲು

## ಮೋಹನ

ಅರೆಯಲಿ ಬಿಡುವೆಯ ತೊಡಗಿದ ಕಾರ್ಯವ
ಪರಿಪೂರ್ಣ ಮಾಡೋ ಶ್ರೀಹರಿ
ಪರಿಪೂರ್ಣ ಮಾಡೋ

ಮುನ್ನದಿನದಿ ನಾ ಮಗುವಾಗಿರುವಂದು
ಇನ್ನೂ ಅರಿಯದಿರಲೂ ಏ
ನನ್ನೂ ಅರಿಯದಿರಲೂ
ಚೆನ್ನ ನೀನು ಬಂದು ಎನ್ನೊಡನಾಡುತೆ
ನಿನ್ನ ಸೊಬಗ ತೋರಿದೆ ಎನ್ನ
ನಿನ್ನವಳನು ಮಾಡಿದೆ ಅರೆಯಲಿ

ಹರೆಯವು ತಂದುದು ಅರಿವಿನ ಪ್ರೇಮದ
ಅರಿದಾದ ಬೇನೆಯನು ಹರಿ
ತರಲಿಲ್ಲ ಅದು ನಿನ್ನನು
ಮುರುಳಿ ಬಾರನು ಹರಿ ಎಂಬರು ಸಖಿಯರು
ಕಿರಿಯಳು ನಾನೆಂಬರು ಆಸೆ
ಹಿರಿದು ಎಂದೆಣಿಸರು ಅರೆಯಲಿ

ಮೌನದ ಕಣ್ಣ ವಿಲಾಸದ ಹಾಸದಿ
ನಾನು ಬರುವೆನೆಂದೇ ಹರಿ
ನೀನದ ಮರೆಯುವುದೇ
ದಾನವ ಮರೆಯದೆ ಬಾರೊ ಬಾರದಿರೆ
ಮಾನ ಉಳಿವುದೇನೋ ನಿನ್ನ
ಮಾನ ಉಳಿವುದೇನೋ ಅರೆಯಲಿ

ಎನ್ನನರಿಯದೆ ಬಂದು ಎನ್ನ ಮನವನು ಪೊಕ್ಕು
ಎನ್ನ ನಿನ್ನವಳನು ಮಾಡಿದೇ ಹರಿ
ನಿನ್ನವಳನು ಮಾಡಿದೇ
ಚೆನ್ನಾ ಹಿಡಿದು ಅಂದು ಇಂದು ಬಿಡುವೊಡೆ
ಗನ್ನಗತಕವಾಗದೆ ಹರಿ
ಅನ್ಯಾಯವಾಗದೇ ಅರೆಯಲಿ

# ವಿವರಣೆ

**ಜಂಜೂಟ**

ನಾನೆನ್ನ ಮರೆತ ಸಮಯದಿ ಏನನೆಂದರೂ
ನೀನೆನ್ನ ಬಿಡಬಾರದು

ಒಂದು ಸಮಯದಿ ಮಾನವು ಸೋತು ಎಡೆಬಿಡದಿಂತು
ಕಂದಿಸುವುದೇಕೆನ್ನ ನೆನ್ನಬಹುದು
ಒಂದು ತಾಸಾದರೂ ಬಿಡಬಾರದೇತಕೆ
ಎಂದು ಮುಳಿದಿರುವಂತೆ ಕಾಣಬಹುದು

ಪೋರು ಮಾಡುವ ಅಣುಗನನು ತಾಯಿ ಒಂದು ಸಲ
ಚೀರುತಿಹೆ ಏಕೆಂದು ಗದರಬಹುದು
ಸಾರಿ ದೂರವನವನು ಕಣ್ಗೆ ಕಾಣಿಸದಿರೆ
ತಾರಾಡಿ ಅರಸಿ ಅಳಲುವಳು ತಾಯಿ

ಪೀಡಿಸುವ ಪ್ರಿಯನ ಪ್ರೇಯಸಿ ಮುಳಿದು ಒಮ್ಮೊಮ್ಮೆ
ಕಾಡಿಸುವುದೇಕೆ ಎಡೆಬಿಡದೆ ಎನಲು
ಮೋಡಿ ಮಾಡುತೆ ಓಡಿ ಪೋಪುದವನೊಳು ಸರಿಯೆ
ಬೇಡುವೆನೊ ನೀನಿಂತು ಗೆಯ್ಯಬೇಡ

ಅಳಲಿದರು ಬಳಲಿದರು ಬಸವಳಿದು ಬಾಡಿದರು
ಮುಳಿದು ಮಾಣೆಂದು ಇನ್ನೇನೆಂದರೂ
ಉಳಿಯಬೇಡವೊ ಎನ್ನ ಉಳಿದೊಡೆಯು ಕರೆದೊಡನೆ
ಬಳಿಗೆ ಬರುವಂತೆ ಬದಿಯಲೆ ನಿಂದಿರು

# ಕನಿಕರ

## ಮಧ್ಯಮಾವತಿ

ಎಲ್ಲಿ ದಾರಿತಪ್ಪಿ ಎಲ್ಲಿ ಬಂದೆ ಕೃಷ್ಣ
ಎಲ್ಲ ಊರನುಳಿದು ಇಲ್ಲಿಗೇಕೆ ಬಂದೆ

ಗೋಪಿಯರು ಇಲ್ಲಿ ಎತ್ತಿಕೊಳ್ಳುತಿಲ್ಲ
ಗೋಪಾಲರಿಲ್ಲಿ ಜೊತೆಯಾಡಲಿಲ್ಲ
ತಾಪಸರು ಬಂದು ಪೂಜಿಸಲು ಇಲ್ಲ
ಗೋಪಾಲ ಬಾಲ ಇಲ್ಲಿಗೇಕೆ ಬಂದೆ

ಆಲಯವು ನೀರಲಿ ವ ುಳುಗೆ ಗೋ
ಪಾಲನೀನಿಂತು ಬಯಲಲ್ಲಿ ನಿಂದೆ
ಬಾಲಕೃಷ್ಣ ಇದ ನೋಡಿಯು ಎನ್ನ
ಆಲಿಗಳು ಎಂತು ಸಹಿಸಿಕೊಂಡಿಹವು

ಕೋಪದಿಂದೆ ನೀ ಕೆರಳಿ ನೋಡುವರೆ
ಶಾಪಕಂಜುವೆವು ಭಕ್ತಿ ತೋರುವೆವು
ಕೋಪಕಂಜುವರು ಹಾಸಕಂಜುವೆವೆ
ಗೋಪಾಲ ನೀ ನಗು ನಗುತ ನಗುತ

# ಮೂರ್ಖ

## ನಾದನಾಮಕ್ರಿಯೆ

ಮೂರ್ಖ ಮಾಡಬೇಡ ಮನುಜ
ಮೂರ್ಖ ಮಾಡಬೇಡ

ಹೆಂಡಿರನುಳಿದವ ದಂಪತಿಯೆಂತೊ
ಮುಂಡವನುಳಿದರೆ ದೇಹವಿದೇಕೊ
ಷಂಡನಾಗಿ ಮಕ್ಕಳ ಹೆರುವರೆ ಬ್ರ
ಹ್ಮಾಂಡವ ನೋಡದೆ ದೇಹರ ಕಾಣ್ಬರೆ ?

ಅರಿವರಿವೆನುತಲಿ ಅರಿವಿಲಿ ತನದಲಿ
ಮರುಗಿಸಿ ಮನವ ಕಣ್ಣಿನ ಎವೆಗಳು
ತೆರೆಯಲಿಕಿರುವುದ ಮರೆಯುತೆ ಮುಚ್ಚಿ
ಹರಿಯನು ಇರವಿನ ಹೊರಗೇ ಬಿಡುವೆಯ ?

ಇಲ್ಲಿಯ ಕರಣದ ನೆರವನು ಇಲ್ಲಿ
ಒಲ್ಲೆನು ಎನ್ನುವೆ ಇಂತೇ ಅಲ್ಲಿ
ಅಲ್ಲಿಯ ಕರಣವನೊಲ್ಲೆನು ಎನ್ನುವೆ
ಎಲ್ಲಿಯು ಇಂತೇ ಎಲ್ಲವ ತೊರೆಯುವೆ

# ಅಕ್ಷಯ ವಸ್ತ್ರ

**ದೇವಗಾಂಧಾರಿ**

ಅಕ್ಷಯಾಭಯುವ ಮಾಯಾ ವನಿತೆಗೆ
ರಕ್ಷಕನಿತ್ತಿರುವಂತಿಹುದು

ದುಷ್ಟಜೀವಿ ದುಶ್ಶ್ಯಾಸನನಂದು
ಧೃಷ್ಟತನದಿ ದ್ರೌಪದಿಯ ಸೀರೆಯನು
ಅಷ್ಟು ಹೊತ್ತು ಎಳೆದೆಳೆದು ಹಾಕಿ ಬಹು
ಕಷ್ಟದಿಂದ ಕೈಸೋತು ನಿಂತಿರಲು
ಮೂರು ಮೂರು ಎಳೆದಷ್ಟು ಸೀರೆ
ತೋರವಾಗಿ ಗಿರಿಯಂತೆ ತೋರುತಿರೆ
ನಾರೀಮಣಿ ತಾನೆಂದಿನಂತೆಯೆ
ಸೀರೆ ಸಹಿತ ಮಾನದೊಳುಳಿದಂತೆ

ಸೃಷ್ಟಿಯ ಪರಿಯನು ಅರಿಯುವ ಎಂದು
ಎಷ್ಟು ಮಂದಿ ವಿಜ್ಞಾನ ಶಾಸ್ತ್ರಿಗಳು
ಇಷ್ಟಕೆ ತೋರಿದ ತೆರದಿ ವಸ್ತುಗಳ
ಕಷ್ಟದಿಂದೆ ಪರಿಕಿಸಿ ನೋಡಿರಲು
ನೂರು ಜನರ ತಿಳಿವಿದು ನೂರ್ನೂರು
ಭಾರದ ಹೊತ್ತಗೆ ಸಾಲನು ತುಂಬಿ
ತೋರ ಆದರೂ ಮುಗಿಯಿತಿಲ್ಲಿಗೆನ
ಲಾರದೆ ಅವರಿಹ ರೀತಿಯು ನೋಡಲು

# ಬಿಂಕ

**ಕಾಂಭೋಜಿ**

ಬರಿಯ ಬಿಂಕದ ಮಾತ ಬಡಿವಾರದಲಿ ನಿನ್ನ
ಸರಿಪಡಿಸಿಕೊಳಲು ನೋಡುವೆವು ಹರಿಯೆ

ವೈರಾಗ್ಯವನು ಕುರಿತ ಮಾತ ಮಳೆಯನು ಕರೆದು
ಆರಾಧ್ಯರೆಂದು ಬಿರುದನು ತಳೆದು ಬಾಗಿ
ನೈರಾಶ್ಯ ಸಾಶ್ಯಗಳ ತರ್ಕದಲಿ ಮೆಯ್ಮರೆದು
ಧೀರಾಗ್ರಣಿಗಳಾಗಿ ನಾಲಗೆಯಲಿ

ಸನ್ಯಾಸವೆನ್ನುವೆವು ವಿನ್ಯಾಸಮಾಡುವೆವು
ಕನ್ಯಾಸಮೂಹವೆನೆ ಕಣ್ಣಾಲಿವುದು
ಅನ್ಯಾಯದಲಿ ಮನವ ಬೆಳೆಯಿಸುತೆ ಹರಿ ನಿನಗೆ
ಶೂನ್ಯವನು ಮಾಡಿ ಮೆಚ್ಚಿಪೆವೆಂಬೊಲು

ಎಷ್ಟು ಸೀರೆಯನುಡಲು ನಾಟಕದ ಬಾಲಕನು
ಸೃಷ್ಟಿಯಲಿ ವನಿತೆಯಾಗುವನೆನ್ನದೆ
ಇಷ್ಟು ವೇಷವ ಹಾಕಿ ಅಷ್ಟು ಮಾತನು ಆಡಿ
ಧೃಷ್ಟತನದಲಿ ನಿನ್ನನೊಲಿಸಲೆಳಸಿ

# ಮೋಸ

ನಾದನಾಮಕ್ರಿಯ

ನಾಮ ಹಾಕುವೆನು ಬನ್ನಿರಿ ಎಂದು
ನಾಮದಯ್ಯ ಬಂದ

ನಾಮವ ಧಪ್ಪನೆ ಮೊಗದಲಿ ತೀಡಿ
ಸೋಮಯಾಜಿಯಾ ಮೊಮ್ಮಗ ನಾನು
ಆ ಮೊದಲ್ಯಾಂಡನ ಮರಿಮಗನೆಂದು
ನಾಮ ಹಾಕುವೆನು ಬನ್ನಿರಿ ಎಂದು

ಪೊಂಗಲಚ್ಚೇರ ಮಾಡಿಸೆ ನೀವು
ರಂಗನ ಒಲವನು ಕೊಡಿಸುವೆ ನಾನು
ಶಿಂಗಗೆ ಶಿಪಾರ್ಸು ಮಾಡುವೆನೆಂದು
ಪಂಗನಾಮ ಹಾಕುವೆನೆಂದು

ಕಾಸಯೆ`ನಗೆ ಕೊಡಿ ಸ್ವರ್ಗಕೆ ಹೋಗಿರಿ
ಈಶಗೆ ನಾಕಳುಹಿದೆನೆಂದೆನ್ನಿರಿ
ದಾಸನ್ ಎನ್ನುತೆ ಎದುರಿಗೆ ಬಂದು
ಈಸೀಚೇರನು ಕೊಡುವನು ನಿಮಗೆ

# ಸೊಣಗ

ಖರಹರಪ್ರಿಯ

ಮನ್ನಿಪುದು ಅತಿಯಾದ ಈ ಶ್ರದ್ಧೆಯು
ನಿನ್ನ ಊಳಿಗದವನ ಮೂಢ ಭಕ್ತಿಯಿದೆಂದು

ಸತ್ಯಸ್ವರೂಪ ಸತ್ಯವ್ರತನೆ ನಿನ್ನಂಕೆ
ನಿತ್ಯ, ಆದರೊಳು ಸತ್ಯ ಸೌಜನ್ಯವೇ
ನಿತ್ಯ, ಇದನರಿದರಿದು ಎನ್ನ ಮನ ಒಮ್ಮೊಮ್ಮೆ
ಮಿಥ್ಯ ಏತಕೆ ಬದುಕಿತೆಂದೆಂಬುದು

ಸರಿಯಾದುದೆನ್ನುವುದು ಕಷ್ಟದಲಿ ಸಿಲುಕಿರಲು
ಸರಿಯಲ್ಲವೆನ್ನುವುದು ಸುಖದೊಳಿರಲು
ಅರಿತವನು ಪೊರೆವವನು ನೀನಿಹುದ ಮರೆತು ಮನ
ಮರುಗುವುದು ಧರ್ಮರಕ್ಷಣೆ ತನತೆನೆ

ಮನೆಯ ಪಡೆದೊಡೆಯ ಬಾಗಿಲಿನೊಳೇ ಕುಳಿತು ಸು
ಮ್ಮನೆ ಇರಲು ಬರಹೋಗುವರ ನೋಡುತೆ
ಶುನಕ ಆಮನೆ ತನ್ನದೆಂಬಂತೆ ಗೊರ್ರೆಂದು
ಮುನಿವಂತೆ ನಾನು ಜಗದಲಿ ನಡೆದಿರೆ '

# ಕೋಗಿಲೆ ಕಾಗೆ

ಆನಂದಭೈರವಿ

ಅರಿಯೆನು ಹರಿಯೇ ನಿನ್ನ ನಿಯೋಗದ
ಪರಿಯಿದು ಎಂಬುದನು

ಒಳ್ಳಿದಿದನು ನಾ ಮಾಡಲು ತೊಡಗಿಜೆ
ಎಲ್ಲಿ ಇವರು ಎನಗಡ್ಡಿ ಬರುವರೋ
ಎಲ್ಲಿ ಎನ್ನ ಈ ಆಸೆಯ ವರಿಂದೆ
ಸಲ್ಲದೆ ಪೋಪುದೊ ಎಂದು ಅಂಜಿದೆನು

ಒಳ್ಳಿದು ಇದು ನಿನ್ನದು ಎಂಬುದನೂ
ಎಲ್ಲರ ಮನದೊಳು ಸುಳಿಯುತೆ ನೀನು
ಕಲ್ಲೆದೆಗಳನೂ ಕರಗಿಸುವುದನೂ
ಫುಲ್ಲಲೋಚನಾ ಅರಿಯೆನು ನಾನು

ನಿನ್ನದು ಹರಿ ಈ ಒಳ್ಳಿತು ನೀನಿದ
ಎನ್ನೊಳಿಟ್ಟು ಭ್ರಮೆಯಿಂದದ ನಾನು
ಎನ್ನದೆಂದು ಮುದ್ದಿಸುವವೊಲೆಸಗಿಹೆ
ಇನ್ನೆಲ್ಲರನೂ ಇಂತೇತಿದ್ದುವೆ

# ವ್ಯಾಜ

**ಮೋಹನ**

ಎಂತಾದರೂ ನಾನು ನನ್ನದು ಎನ್ನುವ
ಚಿಂತೆಯು ಎನ್ನನು ಬಿಡದಿಹುದು

ಮನೆಯ ಬೇಡಿದೆನು ಮಕ್ಕಳು ಮರಿಗೆಂದು
ಧನವ ಬೇಡಿದೆನು ನಾ ಬಡಜನಕೆಂದು
ಜನ ಹೊಗಳಲಿ ಎಂದೆ ಬಳಗವು ಮೆಚ್ಚಲು
ಅನಿತಾಸೆಯೂ ಎನ್ನ ಮನದಾಸೆ

ಸಂತಸದಲಿ ಇಡು ಎಂದೆ ತಾಯಿ ತಾ
ಚಿಂತಿಸದಿರಲೆಂದು ದೇಶಕೆ ಎನುತ ದು
ರಂತದಾಸೆಯಿಂದೆ ಕೀರ್ತಿಯ ಬೇಡಿದೆ
ಇಂತೆಲ್ಲ ಬೇಡಿದುದೆನಗಾಗಿ

ಬೇಡಿದೆ ನಾನತಿಮೂಢನು ಅರಿಯದೆ
ಕಾಡುಹೋದ ಕರು ಕರೆವಂತೆ ಅಲೆವಂತೆ
ಬೇಡುವುದೆನ್ನೊಳಗಚ್ಚರಿಯಲ್ಲ ನೀ
ನೀಡುತೆ ನಗುತಿಹುದಚ್ಚರಿಯು

# ಶ್ರಾವಣದ ಕೋಗಿಲೆ

ಆನಂದಭೈರವಿ

ಹರೆಯುದಲ್ಲಿ ಹರೆಯುದಾಸೆ ಬರುವ ದಿನದೆ ಬೇರೆ ಆಸೆ
ಹರಿ ಎನ್ನೊಳು ಕಾಲ ಕಾಲದಾಸೆಗಳನು ನೀನೆ ತರುವೆ

ವೈಶಾಖದಿ ಕೇಳಿದೆನು ಕೋಗಿಲೆಯಾ ದನಿಯುನಂದು
ಆಶಾವಹ್ನಿ ದ್ರವ ಪ್ರವಾಹದಂದ ಹರಿದತೀವ
ಕ್ಲೇಶದ ಅಳಲಿಂದೆ ವೊಳಗಿ ಎಲರನೆಲ್ಲ ತುಂಬಿತದು
ಆಶೆಯ ಕ್ಲೇಶವನು ಎನ್ನ ಮನದೊಳಂತೆ ವೊಳೆಯಿಸಿತು

ಶ್ರಾವಣವನು ವರುಷ ಹೆರಲು ಕಲಕಂಠನ ಎಳೆಯುದನಿಯು
ಜೀವನದಾದಿಯಲಿ ಆಸೆಗಳನು ಕಾಣದಿರುವ ಮಗುವ
ಪಾವನಾತ್ಮ ಎಲ್ಲವನೂ ತಾಯೊಳರಿದು ಕರೆವವೊಲಿದೆ
ಭಾವ ಲಲಿತ, ಸ್ವರ ದೀನ, ಸರಳವಾಗಿ ಸುಳಿಯುತಿದೆ

ಬಾಳ ವೊದಲು ಜಗವನೆಲ್ಲ ಉಣಲೆಳಸಿದ ತೆರದ ಆಸೆ
ಸೀಳುತೆ ಮನದಾಗಸವನು ಎಲ್ಲೆಡೆಯೊಳು ತುಂಬಿದ್ದುದು
ಕಾಲ ಬರಲು ಎಲ್ಲವನೂ ನಿನ್ನೊರ್ವನೊಳೆಳಸುವಂಥ
ಚಾಳಿಯ ಮನದೆಳಸ ನೆನಗೆ ಹರಿ ನೀನೇ ನೀಡಿಪೊರೆವೆ

# ಶ್ರಾವಣದ ಸಂಜೆ

**ಮೋಹನ**

ಶ್ರಾವಣದೀ ಸಂಜೆಯಂದವನು ನೋಡಲು ಎನ್ನ ಮನಕೆ
ಯಾವುದೆ ದಿನ ಚಂದವೇ ಎನಿಸುತಿರುವುದು

ದೂರದ ಉನ್ನತವೃಕ್ಷದ ಎಲೆತೀವಿದ ತಲೆಯ ಮೇಲೆ
ತೂರಿ ಭೋರ್ಗರೆಯುತ ಮೊರೆವ ಶಬ್ದದಿಂದ ಬರುತಲಿರುವ
ಮಾರುತನಾ ದೇವರ ನಿರ್ಝರಿಣಿ ಇಳಿದು ಭೂಲೋಕಕೆ
ಸಾರಿ ಬರುತಲಿಹುದೊ ಎನಲು ಆಗಸವನು ತುಂಬಿರುವನು

ಬಾಲರೆಲ್ಲ ಸಂತೋಷದ ಅತಿಶಯದಲಿ ಜೀಯೆನ್ನುತೆ
ಕೇಳಿಗಳಲಿ ಕೂಗುತಿರುವ ನಿನದವಿಲ್ಲಿ ಕೇಳುತಿಹುದು
ಸಾಲು ಸಾಲು ಸುಂದರಿಯರ ಉದ್ಯಾನಕೆ ಕರೆದುಯ್ಯುತೆ
ಗಾಲಿಯೊಂದು ದನಿಯಲಿ ಉತ್ಸಾಹವ ರಥ ಸೂಚಿಸುತಿವೆ

ಬರುತಲಿಹನು ಕಾಂತನೆಂದು ಅರಿದಸತಿಯ ನಗುಮೊಗದೊಳು
ನೆರೆದ ಅರೆ ನಿರೀಕ್ಷೆ ಅರ್ಧ ಧೈರ್ಯದೊಂದು ತೆರದ ಸೊಬಗ
ಮೆರುಗಿನಂಥ ಮೆರುಗಿನಿಂದೆ ಮೆರೆಯುತಿಹುದು ಸಂಜೆಯೆಲರು
ಬರುವ ಮಳೆಗೆ ದಾರಿಬಿಡುತೆ ತೊಳಗಿ ಮುಳುಗುತಿಹನು ಸೂರ್ಯ

# ಭಾದ್ರಪದ

## ಕಲ್ಯಾಣಿ

ಪೀತಾಂಬರದೊಲು ತಿರೆಯೀ ಹಸುರ ಎಳೆಯ ಪೈರ ಧರಿಸಿ
ಹಾ ತಾಯೆ ಎಂಬ ಜನಕೆ ಆಹಾರವ ತರುತಲಿಹೆನು
ಕಾತರರಾಗದೆ ಇರಿ ಎನ್ನುತ ಧೈರ್ಯ ಹೇಳುತ್ತೈತರುವ
ಮಾತೆ ಪ್ರೇಮದಿಂದ ನೋಡುವಂತೆ ಸೌಮ್ಯವಾಗಿ ಇಹುದು
ಪೀತಾಂಬರದೊಲ

ಧೀರನಾಗಿ ಚಲಿಸುತೆ ಆ ಆಟದ ದಿನ ಕಳೆಯಲು ಗಂ
ಭೀರನಾಗಿ ಭೇರಿಯಂದ ಒಮ್ಮೆ ಒಮ್ಮೆ ಮೆಲ್ದನಿಯಲಿ
ಸಾರುತೀ ಪ್ರದೇಶವನೇ ಶಬ್ದ ತಾನದಿಂದೆ ತುಂಬಿ
ಮಾರುತನಖಿಲೇಶ್ವರನಾ ಸ್ತವವ ನುಡಿವ ತೆರ ಇರುವನು
ಧೀರನಾಗಿ

ಕಾಮನಳಿದು ಉದಯಿಸಿದಾ ತಿಂಗಳ ರಾತ್ರಿಯ ಸೊಬಗ
ಆ ಮಧು ಮಾಸದಲಿ ಜಗವ ತೀವಿ ಹರಿದ ಮೋಹದಲೆ
ಕಾಮಿಸಿದರ ಕಣ್ಗೆ ರೂಪವೆತ್ತು ತೋರುತಿಹವೊ ಎನಲು
ವ್ಯಾಮೋಹವ ಕೊಡುತೆಲ್ಲೆಡೆ ಎಳೆಯಜೀವ ಸುಳಿಯುತಿಹುದು
ಕಾಮನಳಿದು ಉದಯಿಸಿದಾ

# ಭಾದ್ರಪದದ ಕೋಗಿಲೆ

ಕಾಪಿ

ಕೂಗುವೆಯಾ ಕೋಗಿಲೆ
ಈಗಳೂ ದನಿಯನೆತ್ತಿ ಕೂಗುವೆಯಾ

ವರ್ಷ ಅರ್ಧ ಮುಗಿಯುತಿರಲು ಮಳೆಯಕಾಲ ಕಳೆದು ತಿರೆ
ಹರ್ಷದಿಂದ ನಗುತಲೀ ಹಸುರಪೈರ ಉ
ತ್ಕರ್ಷದಿಂದೆ ಸೊಗಯಿಸುತಲಿ ತಣಿದತೆರದೆ ಕಾಣುತಿರಲು
ವರ್ಷಾದಿಯ ಆಸೆ ಮತ್ತೆ ಮನದೊಳು ದನಿ ತಳೆಯುವಂತೆ

ಒಮ್ಮೆಮಾತ್ರ ಕೇಳ್ದುದು ದನಿ ಆಲಿಸುತೆ ಅದನು ಇ
ನ್ನೊಮ್ಮೆ ಕೇಳನೋಡೆ ಮರೆದು ಕೇಳದಿಹುದು ಕೋಗಿಲೆ
ನೆಮ್ಮದಿಯನು ಕಂಡ ಹರೆಯ ಕಳೆಯುತಿರಲು ಮತ್ತೆ ಬಯಕೆ
ಚಿಮ್ಮಿ ಮನದೆ ಆಸೆಯ ತಾ ಮಿಾಟಿದಂತೆ ದನಿಯಮಾಡಿ

ಅರಿದುದಯ್ಯ ವತ್ಸರವಿದು ತನ್ನಿರವಿನ ಫಲವನ್ನು
ಬರುವ ವರುಷ ಅದರ ಫಲಕೆ ಮರುಗಬೇಕು ಅಂದಿಗೆ
ಮರುಗಲದಕೆ ದನಿಯನೀಡೆ ಬಾ ಕೋಗಿಲೆ ಅನ್ನೆವರೆಗೆ
ಕೊರಲ ನಿಲಿಸು ತಣಿದ ಮನಕೆ ಮತ್ತೆ ಅಳಲ ಕಲಿಸದಿರು



3

# ಪ್ರತ್ಯಾಶೆ

**ಝಂಝೂಟಿ**

ಇದೆ ಕೊಳ್ ಕೊಳಲ ದನೀ ಸಖೀ
ಇದೆ ಕೊಳ್ ಕೊಳಲ ದನೀ

ಮುರಾರಿ ಬಾರನಿಂದೆಂದು ಮನದೊಳು
ನಿರಾಶೆ ಮೊಳೆದು ಹೃದಯವ ಬೀಗಿ
ಕರಿ ಮುಗಿಲು ನಭವ ಕವಿವಂತೆ ಕವಿದು
ವಿರಹದಿ ಆರವೆಯೆಲರನು ಮರುಗಿಸೆ

ಬಾರನು ಹರಿಯೆಂಬ ಭಯವು ಮನದಿ ವಿಷ
ಏರಿ ಜೀವವನು ಹೀರಿ ಬೆಳೆದು
ಕಾರದಿನದ ಮುಗಿಲೊಡ್ಡಿನ ತೆರದೆ
ಮೀರಿ ಎನ್ನುಸಿರನಾವರಿಸಿರಲು

ಮಳೆಯನು ಗರ್ಭದಿ ಹಿಡಿದ ಮೋಡವ
ಸೆಳೆದು ಸೀಳಿಬಹ ಸೆಳೆಮಿಂಚಂತೆ
ಬಲಿತು ನಿಂದ ಭಯದೊಡ್ಡನು ಭೇದಿಸಿ
ಕಳೆಯುತೆ ಸಂಜೆಯ ಖೇದವನಿದೆ ಕೊಳ್

# ಲೋಭ

ಖರಹರಪ್ರಿಯ

ಈ ಪರಿಯ ಸೊಬಗಿನ್ನು ಮರೆವುದೇ ಎಂದು ಪರಿ
ತಾಪ ಪಡುತಿಹುದೈಯ ಮನವು

ಹದಿಮೂರು ದಿನದಿಂದ ಮುಗಿಲೊಡ್ಡು ಹಬ್ಬಿರ್ದು
ಎದೆಗುಂದಲೆಲ್ಲೆಡೆಯು ಮಬ್ಬುತೀಡಿ
ಉದಯ ಮಧ್ಯಾಹ್ನ ಸಂಜೆಗಳನೇ ಮರೆಸಿರ್ದು
ಉದಯವಿದು ಸೊಗಸಾಗಿ ಬರುತಲಿರಲು

ಮೃದುವಾದ ಬೆಳಗಿಂದೆ ಮೃದುಗಮನದೆಲರಿಂದೆ
ಮೃದುವಾದ ಹಾಸಸ್ಪರ್ಶಗಳಿನೆಂದೆನೆ ಪ್ರಕೃತಿ
ಸದಯಳಾಗಿಹ ಮಾತೆಯಂತಿರಲು ಸೊಗಯಿಸುತ
ಉದಯವಿದು ಸಂತಸವ ನೀಡಿಬರಲು

ಉದಯವಿಂಥದನೆನಿತ ನೋಡಿತೋ ಪ್ರಕೃತಿ
ಮೃದು ಸೊಬಗಿನಿಂದೆನಿತು ಕೋಟಿ ಕೋಟಿ
ಹೃದಯಗಳ ನೀ ನಲಿಸಿ ಮರೆಸಿದೆಯೊ ಮೋಹನಾ
ಇದನಿನಿತು ದಿನವಾದರೂ ಅರಿಯದೆ

# ಕಾರ್ಪಣ್ಯ

**ಕಾಂಭೋಜಿ**

ಲೋಭ ಲೇಪಿತ ದೃಷ್ಟಿಯಲಿ ಸೃಷ್ಟಿಯನು ನೋಡಿ
ಕ್ಷೋಭೆಗೊಳ್ಳುವುದಯ್ಯ ಮನವು

ಕ್ಷಿತಿಯ ನೀನೆಸಗಿದಂದಿನ ಮೊದಲು ಇಂದಿಗೆ ಪ್ರ
ಕೃತಿ ಇಂತ ಉದಯವೆನಿತನು ಕಂಡುದೋ
ಮಿತಿಯನೇ ಅರಿಯದಿಹ ನಿನ್ನ ಸೃಷ್ಟಿಯ ಸೊಬಗ
ವಿತರಣೆಗೆ ಪರಿಮಿತಿಯ ಮಾತು ಏಕೆ?

ಆವಿಯನು ನಾಲ್ಕುಸಲ ಎತ್ತಿ ಮಡಕೆ ಕುಡಿಕೆ
ಸಾವಿರವ ತೆಗೆವ ಕುಂಬರ ಸೆಟ್ಟಿಗೆ
ಆವಿಗೊಂದು ಕುಡಿಕೆ ಒಡೆಯೆ ಹೋದುದೇನು?
ದೇವ ನಿನ್ನಯ ಸೃಷ್ಟಿ ಇಂತಿಹುದಲೇ

ಸೃಷ್ಟಿಯ ಸೊಬಗ ನೋಡಿ ಸುಖಿಸುವುದ ನೀಡು ಮನ
ಕಷ್ಟಪಡದಿರಲಿ ಆ ಸೊಬಗು ಮರೆಯೆ
ಸೃಷ್ಟೀಶ ಸುಖ ನಿನ್ನೊಳಗನಂತವೆಂಬುದು
ಸ್ಪಷ್ಟವಾಗಿರಲಿ ಎಂದೆಂದು ಮನಕೆ

## ಸ್ಯಾತ್

ಅಠಾಣ

ಆಗಬಹುದು, ಒಳ್ಳಿತಾಗಬಹುದು

ನಿನ್ನ ನಾಮವನು ನಾಲಿಗೆ ನುಡಿಯುತಿರಲು
ಇನ್ನು ಮೇಲದು ಮನವ ಮುಟ್ಟಬಹುದು
ಇನ್ನೊಮ್ಮೆ ಹೃದಯವನು ಮುಟ್ಟೆ ಅದು ಬಾಳನ್ನು
ಸನ್ನುತಾ ನಿನ್ನದೆಂದೆನಿಸಬಹುದು

ವೇಷಕಾದರು ನಿನ್ನ ಸೇವಕನು ಎನಿಸುವೆನೆ
ಈಸಾದರೂ ಒಳ್ಳಿದನು ಮಾಡುವೆ
ವೀಸವಮಾತ್ರವನೀಗ ನಿನಗೆ ಅರ್ಪಿಸುವೆನೆ
ಆಸೆಯನೆ ಬಿಡುವ ದಿನ ಬರಲಿಬಹುದು

ಸುಮ್ಮನೆಯೆ ನೀ ಆಟಕೆಂದು ಬಳಿಯಲಿ ಕುಳಿತು
ಒಮ್ಮೆ ಕೈಯನು ಹಿಡಿದು ನಗುತೆ ಅಂತೆ
ಒಮ್ಮೆ ಒಮ್ಮೆ ನಮ್ಮ ಮನದೆ ತಾಣವ ಕೊಳುತೆ
ನಿಮ್ಮವರು ಎನಿಸಿ ಎಲ್ಲರನು ಪೊರೆವೆ

# ಹೀನಾಯ

**ಕಾನಡ**

ಏಕೆ ಹಾಡು ಎಂದೆ ಹರಿಯೆ ಎನ್ನ
ಏಕೆ ಹಾಡು ಎಂದೇ

ಸ್ವರವನು ಅರಿಯೆ ತಾಳವನರಿಯೆ
ಸರಿಯಾದ ರಾಗ ಅಲ್ಲದದ ನಾನರಿಯೆ
ಮುರಳೀಧರ ನಿನ್ನ ಗಾನವ ಕೇಳಿ
ಮರುಳನಾದರೆ ಗಾಯಕನಾದೆನೆ

ಬಾಯ ಮುಚ್ಚಿ ಒಬ್ಬರೊಬ್ಬರ ನೋಡುತೆ
ಗಾಯಕರೆಲ್ಲರು ನಸು ನಗುತಿಹರು
ತೋಯಜಾಕ್ಷ ನಾ ಮೂಢನೆಂದರಿತೂ
ನ್ಯಾಯವೆ ನೀ ಎನ್ನ ಪಾಡೆಂದು ಕರೆದುದು

ಸ್ವರವನು ಅರಿಯದೆ ತಾಳವನರಿಯದೆ
ಹರಿ ನಿನ್ನ ಮುಖವನು ನೋಡುತೆ ಪಾಡಿದೆ
ಸರಿಯಾಯಿತೆಂದವರಚ್ಚರಿ ಗೊಂಡರು
ಮುರಹರ ಸುಮ್ಮನೆ ಕೇಳುತಿರ್ದೆ ನೀ

# ಕವನ

### ಶಂಕರಾಭರಣ

ಎನ್ನ ಕವನ ಅವನ ಕವನ ಎಂದು ನಾವು ಎಂಬದೆಲ್ಲ
ಸನ್ನುತಾ ನೋಡಲಾಗಿ ನಿನ್ನ ಕವನವೇ

ಎನ್ನ ಮನದೆ ಅವನ ಮನದೆ ಎಲ್ಲ ಮನದೆ ನೀನು ಸುಳಿದು
ನಿನ್ನ ಕೊಳಲನುಡಿಸಲಾಗಿ ಕವನವಪ್ಪುದು
ಎನ್ನದೇನು ಅವನದೇನು ಎಲ್ಲವೂ ನಿನ್ನದೆಂದು
ಚೆನ್ನಕೇಶವಾ ಅರಿವನೆನಗೆ ಕೊಡುವುದು

ವೀಣೆಯೊಂದು ತಂತಿ ಬಹಳ ತಂತಿಗಳಲಿ ಮನೆಯು ಬಹಳ
ವಾಣಿ ಬರುವುದೊಮ್ಮೆಗೊಂದು ಮನೆಯ ಮೀಂಟಲು
ಕೇಣವೇಕೆ ಮನೆಗೆ ಮನೆಗೆ ನಾನು ತಾನು ಎಂಬದಾಗಿ
ಜಾಣರದನು ವೀಣೆ ನುಡಿವುದೆಂದು ಪೇಳ್ವರು

ಎಲ್ಲರೊಳೂ ನೀನೆ ಇರುವೆ ಎಲ್ಲವ ನೀ ವ್ಯಾಪಿಸಿರುವೆ
ಎಲ್ಲ ನಿನ್ನ ಶಕ್ತಿಯಿಂದೆ ನುಡಿದು ನಡೆವುದು
ಹುಲ್ಲಿನಂತೆ ಹಗುರ ನಾವು ಎಲ್ಲ ನೀನೆ ಎಂದು ಅರಿದು
ಎಲ್ಲವ ನಿನ್ನಡಿಯೊಳಿಡಲು ಎನಗೆ ಕಲಿಪುದು

# ಗಾಯತ್ರಿ

ಬಿಲಹರಿ

ಬಾ ಸವಿತಾ
ಬಾ ಸವಿತಾ ಬಾ
ಬಾ ಸವಿತಾ

ಕೋಟಿಯೋಜನದ ಬಾನದಾರಿಯ
ದಾಟಿ ಧೀಂಕಿಡುತ ಕಾಪಿಡು ಬಾ
ಮೋಟಿ ಯಾರೆನಗೆ ಬರಲಿ ಎನ್ನುತ
ಬೂಟದಿ ಮುಸಗಿದೆ ಪಾಶವ ತಾ

ಒಳಗಿನ ಕಣ್ಣನು ಮುಚ್ಚಿಸಿ ಒಮ್ಮೆ
ತಿಳಿವಿಗೆ ಬಣ್ಣವ ಹಚ್ಚಿಸಿ ಒಮ್ಮೆ
ಒಳಿತಲ್ಲದದೇ ಒಳಿತೆಂಬ ಆದರ
ಚಳಕವೆಲ್ಲಕೆ ವಿನಾಶವ ತಾ

ನೆಲೆಯಿಂದ ಹೊರಟು ಅಲೆ ಅಲೆ ಅಲೆ ಅಲೆ
ಚಲತೊಟ್ಟು ಮಲ್ಲವಾಹಿಸಿ ಬಾ
ನಿಲವಿಲ್ಲ ಜಗದಿ ಕತ್ತಲಿಗೆಂದು
ಗೆಲವನು ಸಾರುವ ಭಾಸವ ತಾ

ಕೊಂಕು ಕುಟಿಲಕುಹಕದ ಎಲ್ಲಾ ಎಡ
ವಂಕದ ಯೋಚನೆ ನುಡಿನಡೆಯು
ಬಿಂಕವ ಬಯಲಿಗೆಳೆದು ಸತ್ಯದ ನಿ
ಶ್ಶಂಕ ಮುಖಾಬ್ಜಕೆ ಹಾಸವ ತಾ

ಓಂ ತತ್ಸವಿತುರ್ವರೇಣ್ಯವೆಂಬೆವು
ಅಂತಲ್ಲದೆ ಬೇರೆಯುದನು ನಂಬೆವು
ಪಂಥವ ಬೆಳಗಿ ನಿರೂಪಿಸು ಕಾಂಬೆವು
ಶಾಂತ ಸುಂದರ ಶಿವದ ಆ ಸವಿ ತಾ

# ತಾರಕ

## ಮಧ್ಯಮಾವತಿ

ರಾಮ ರಾಮಾ ಕಲ್ಲಲಿ ನಿನ್ನ
ನಾಮವ ಗುರುತಿಸಿ ನೀರಲಿ ಬಿಡಲು
ಆ ಮಹಾಂಬುಧಿಗೆ ಸೇತುವೆಯಾಯ್ತು ಮ
ಹಾಮಹಿಮಾ ಸುಗುಣಾಭಿರಾಮಾ
ರಾಮ ರಾಮಾ

ಕಲ್ಲಾಗಿದೆ ಮನ; ಭವದಲಿ ತೇಲಲು
ಬಲ್ಲೆನೆಂತೊ? ಇದರಲಿ ತವನಾಮ
ನಿಲ್ಲುವಂತೆ ಕೊರೆ; ಕೊರೆಯಲಾಗದೆನೆ
ಮೆಲ್ಲನೆ ಗುರುತಿಸಿ ರಕ್ಷಿಸು, ರಾಮಾ
ರಾಮ ರಾಮಾ

ಎದೆ ಕಲ್ ಇದಕೂ ತಗದೆನೆ, ಓ ನಿರ
ವಧಿಕ ಕೃಪಾಶ್ರಯ, ರಾಮ ರಾಮ
ಬದುಕನನುಕ್ಷಣ ಕೈಯಲೆ ಹಿಡಿದಿರು
ಇದು ಕಷ್ಟವೆ ಎಲ್ಲೆಡೆ ಇಹ ನಿನಗೆ
ರಾಮ ರಾಮ

# ದೈನ್ಯ

**ಯದುಕುಲಕಾಂಭೋಜಿ**

ಸತತವೂ ಜೊತೆಯೊಳಿರು ಜತನದಲಿ ಕಾಯುತಿರು
ನತಜನರ ಕಾವ ಸಿರಿಯರಸ ದೇವಾ

ಬೆಳೆದೇಳೆ ಬಾಳು ಚಂಚಲವಾಗುತಿದೆ ಮನಸು
ಇಳಿಯುತಿದೆ ಧೈರ್ಯ ಭಯದೊಡನಾಡುತಿದೆ ಮನಸು
ಬಳಿಸಾರೆ ಚೆಲುವಳಿವ ಒಣಕಲೆಯ ಚಿತ್ರವೆನೆ
ಕಳೆಗುಂದಿ ಕಾಣುತಿದೆ ಸೊಗದ ಕನಸು

ಎಳೆಯ ದಿನದಾನಂದ ಕಡಿಮೆಯಾಯಿತೆ ಎಂದು
ಕಳವಳಕೆ ಸಿಲುಕಿ ಸೊರಗಿತು ಎನ್ನ ಮನವಂದು
ಜಲವಿಳಿಯುತಿಹ ಬಾಳ ಸೊಗದ ಬಾವಿಯೊಳಿನ್ನು
ತಳವೆ ಕಾಂಬುದೊ ಎಂಬ ಭೀತಿಯಿಂದು

ಸತತ ಮನಸಿನಲಿ ನಿಲು; ಬಾಳಿನಲಿ ಬಹುದೆಲ್ಲ
ಹಿತಕಾಗಿ ನೀ ತೋರ್ಪ ಕರುಣೆಯೆಂಬುದನರಿಸು
ಪ್ರತಿಯಾಗಿ ಭಾವಿಸದ ತೆರದಿ ಜೀವವನಿರಿಸು
ನತಜನದ ನಡೆ ಕಲಿಸು ದಾಸನನು ಪತಿಕರಿಸು

# ಏಕಮೇವ

**ಯದುಕುಲಕಾಂಭೋಜಿ**

ನೀ ಕೊಡದ ಸಿರಿಯಿಲ್ಲ ಕೊಡಲು ಬಡತನವಿಲ್ಲ
ಶ್ರೀಕಾಂತ ನೀನಲ್ಲದೆನಗೆ ಗತಿಯಿಲ್ಲ

ತನುವಿತ್ತೆ ನೀನೆ ಈ ಮನವಿತ್ತೆ ನೀನೆ ಜೀ
ವನವಿತ್ತೆ ನೀನೆ ನೀ ಧನವನಿತ್ತೆ
ಜನವೇನು ಎನ್ನ ಬದುಕಲಿಮೆಚ್ಚಿ ಸರಿಯೆಂದ
ಘನದ ಸಿರಿಯೆಲ್ಲವನು ನೀನೆ ಇತ್ತೆ

ನೀ ನೀಡದಿರಲೆನಗೆ ತನುವಿಲ್ಲ ಮನವಿಲ್ಲ
ನೀ ನೀಡದೆನಗೆ ಧನ ಇನಿಸು ಇಲ್ಲ
ದಾನಿ ನೀ ಕನಿಕರಿಸಿ ನೀಡಲಿಲ್ಲವೆ ನನಗೆ
ಏನೊಂದು ಸಿರಿಯಿಲ್ಲ ಹಿರಿಮೆಯಿಲ್ಲ

ತನುವಿಂದ ಮನ ಘನತೆ ಜನದೊಲವು ಧನದಿಂದ
ಘನದ ಸಿರಿ ದೇವ ನಿನ್ನಡಿಯ ಭಕುತಿ
ಕನಿಕರಿಸಿ ಅದ ನೀಡಿದವನು ಇದನೂ ನೀಡು
ಕನಿಕರಿಸದಿಹೆಯ ಗತಿಯಿಲ್ಲ ನನಗೆ

# ತವಾಸ್ಮಿ

## ಯದುಕುಲಕಾಂಭೋಜಿ

ಹಿಡಿವುದಕು ನಿನ್ನದು ಬಿಡುವುದಕು ನಿನ್ನದು
ಒಡೆಯ ಏಗೆಯ್ವುದಕು ಈ ಬಾಳು ನಿನ್ನದು

ನೆನವು ಬಂದುದು ಮೊದಲು ಬಾಳಿನಲಿ ಅನುಗಾಲ
ಅನುದಿನ ಅನುಕ್ಷಣವು ಏನೊ ಶಂಕೆ
ಒಣಗಲರಿಯದ ಒರತೆಯಾಗಿ ಜಿನುಗುತಲಿಹುದು
ಕನವರಿಕೆಯುಲಿ ಉಂಬಕಷ್ಟದಂದ

ಎನಿತೊ ಒಳಿತಿರಲು ಆದ ನೆಚ್ಚದಿರುವುದು ಉಸಿರು
ಇನಿಸಾದರೂ ಕೆಡಕನೂಹಿಸುವುದು
ಮನಗೆಡದೆ ತೃಪ್ತಿ ಇಲ್ಲೆಂಬಂತೆ ತನ್ನ ಹೊಣೆ
ತನತೆ ಎಂಬಂತೆ ಚಿಂತೆಯ ಮೆಲುವುದು

ಇನ್ನಿಂತು ನಡೆವುದನು ನಾನೊಲ್ಲೆ ನನ್ನೊಡೆಯ
ಬನ್ನವಿದ ಬಿಡಿಸಿ ಪರಿಪಾಲಿಸೆನ್ನ
ನನ್ನದೆನ್ನುವುದೆನ್ನೊಳಿನಿಸಿಲ್ಲ ಬಾಳೆಲ್ಲ
ನಿನ್ನೊಡವೆ ಇದನಡೆಸು ಇಚ್ಛೆಯಂತೆ

# ಮಾರ್ಜಾಲ ಕಿಶೋರ

## ಯದುಕುಲಕಾಂಭೋಜಿ

ನಿನ್ನ ಕೃಪೆ ತಾನಾಗಿ ರಕ್ಷಿಸಲು ಮುಂಬರಿಯೆ
ನನ್ನ ಅರ್ಹತೆಯು ಮಾತೇನು ದೊರೆಯೇ

ನನ್ನ ತಪ್ಪು ಅನಂತ ಕೋಟಿಯಾದರೆ ಏನು
ನಿನ್ನ ಸ್ಥೈರಣೆಗೆ ಮಿತಿಯಿಲ್ಲ ಎಂದ
ಅಣ್ಣನಾ ನುಡಿ ಇಲ್ಲಿ ನೂರೊಮ್ಮೆ ಸಲ್ಲುವುದು
ಮನ್ನಿಸಿದೆ ಸರಿ ಬೇರೆ ದಾರಿ ಇಲ್ಲ

ಯಾವ ಭಾವದಿ ನನ್ನ ಮಾನವನ ಮಾಡಿದೆಯೊ
ದೇವ ನೀನಿದ ಬಲ್ಲೆ ಮಾಡಿದವನು
ಜೀವವನು ಕೊಟ್ಟಂದೆ ಕಾವ ಭಾರವ ಹೊತ್ತೆ
ಧಾವಿಸುತ ಬಾ ಇದನು ರಕ್ಷಿಸು ಸದಾ

ಅಂತಲ್ಲ ಕೃಪೆಗೆಲ್ಲ ನಾಅರ್ಹ ಅಹುದೆನಲೆ
ಎಂತು ಬಂದಿತ್ ನನಗೆ ಆ ಅರ್ಹತೆ
ಸ್ವಂತ ಒಂದಿಲ್ಲೆನಗೆ ಅರ್ಹತೆಯೊ ಕರುಣೆಯೊ
ಇಂತೆಂದೊ ಅಂತೆಂದೊ ನೀನೆ ಸಲಹು

# ವಾತ್ಸಲ್ಯ

## ಮಧ್ಯಮಾವತಿ

ನಾನಿನ್ನ ಮರೆತರೂ ನೀನೆನ್ನ ಮರೆಯದಿಹೆ
ಏನು ಕರುಣೆಯೊ ನಿನ್ನದು ರಂಗಯ್ಯ

ಬಣ್ಣ ಬಣ್ಣದ ಆಟದೊಡವೆಗಳ ಮಧ್ಯದಲಿ
ಚಿಣ್ಣ ತಾಯನು ಮರೆತು ನಲಿವ ತೆರದಿ
ನಿನ್ನ ಕೃಪೆ ನೀಡಿದೀ ಬಾಳಸುಖಗಳ ನಡುವೆ
ಎನ್ನ ಮನ ನಿನ್ನನೆನವನೆ ನೀಗಿ ಇಂತು

ಒಳಗೆ ಕುಳಿತಿಹ ತಾಯಿ ಬಾಲನಿಗೆ ತಾನಿರುವ
ನೆಲೆ ಮರೆಯದಿರಲೆಂದು ಆಗಆಗ
ಒಲುಮೆಯಲಿ ಅಣ್ಣಯ್ಯ ಎಲ್ಲಿಹೆಯೊ ಎಂಬಂತೆ
ಒಳಗೆ ಕುಳಿತನ್ನ ನೀ ಕರೆಯುತ್ತಿರುವೆ

ಎನ್ನೊಡೆಯ ಬಾಳಿನಲಿ ಎಲ್ಲಿರಲಿ ಎಂತಿರಲಿ
ನಿನ್ನ ನೆನಪೆನ್ನ ನಡೆಯನು ತಿದ್ದುತ ಅವಿ
ಚ್ಛಿನ್ನವಾಗಿರಿಸಿರಲಿ ನಾ ನಿನ್ನತೆಂಬುದನು
ಚೆನ್ನಕೇಶವ ಇಂತು ರಕ್ಷಿಸೆನ್ನ

# ತಿರುಕ

## ಜಂಜೂಟಿ

ಯುಗಕಲ್ಪಾಂತರ ಉರುಳುತಲಿರೆ ನೀ
ನೀಡುತಲಿಹೆ ಬೇಡುತಲಿಹೆನಾ

ಚಿರಕಾಲಕು ನಾ ನಿನ್ನ ಸನ್ನಿಧಿಯು
ತಿರುಕನೆ ಅಲ್ಲದೆ ಉಂಟೆ ಬೇರೆ
ಹರಿ ಕರುಣಾಕರ ನೀ ಎಂದೆಂದೂ
ಮರುಕಗೊಂಡು ನೀಡುವ ದಾತಾರ

ಎಳವೆಯ ದಿನದಲಿ ಅನ್ನವ ತಿರಿದೆನು
ವಾರದೇಳು ದಿನದಲಿ ಮನೆಯೇಳು
ನಿನ್ನೀ ಮನೆಯಲಿ ತಿರಿಯುವೆನಿಂದು
ಎನ್ನದ ಮಾಡಿದೆ ಇದನು ದಯಾಳು

ಅಂದಾ ಮನೆಯುವರಾಕೃತಿಯಿಂದೆ
ಅನ್ನವಿಟ್ಟು ಸಾಕಿತು ನಿನ್ನ ದಯ
ಎಂದೂ ಎಲ್ಲೂ ಹೊರೆವನು ನೀನೆ
ಬಿಡದಿರಲೀ ನಂಬುಗೆ ನನ್ನೆದೆಯ

# ಪ್ರಪತ್ತಿ

## ಧನ್ಯಾಸಿ

ಎನ್ನದೆನ್ನುವ ಎಲ್ಲ ಬಯಕೆಯನು ಬಿಟ್ಟು
ನಿನ್ನದಾಗಿಹುದ ಕಲಿಯಲಿ ಜೀವ, ದೇವ

ನೀ ಸ್ವಾಮಿ ನಾ ಸೊತ್ತು; ನೀ ನಿಲಿಸಿದೆಡೆಗೊತ್ತು
ನನಗೆ; ನನ್ನ ಅದೃಷ್ಟ ನಿನ್ನ ತೊತ್ತು;
ಏನು ಎಂತೆಂದು ಯೋಚಿಸಲೇಕೆ; ನಿನ್ನಿಚ್ಛೆ
ನನ್ನ ಭಾಗ್ಯದ ಬೆಳೆಗೆ ನೆಲ ನೀರು ಬಿತ್ತು;

ಹುಲ್ಲಾಗು ಎನೆ ನೀನು ನಾನಾದೆ ಬರಿಹುಲ್ಲು;
ಕಲ್ಲಾಗು ಎಂದಿರಲು ಆದೆ ನಾ ಕಲ್ಲು;
ನಿನ್ನಾಜ್ಞೆ ನಡೆಯುತಿದೆ ಈ ಬಾಳ ಎಲ್ಲೆಡೆಯು;
ಅದನುಳಿದು ಇಲ್ಲ ಬೇರೊಂದು ಸೊಲ್ಲು.

ಏನ ಮಾಡುವರೆ ಸಂಕಲ್ಪಿಸಿರುವೆಯೊ ಮಾಡು;
ಏನಾಯ್ತು ಆಗದು ಅದು ನಿನ್ನ ಪಾಡು;
ಗೆಯ್ಮೆ ನಿನತೆಂಬರಿವು ಒಂದ ಸಂತತ ಕೊಡು;
ನನ್ನ ಗೆಯ್ಮೆಯನದಕೆ ಮಾಡುಮೋಲ್ಜೋಡು.

# ಸಂಗಾತಿ

ಮಧ್ಯಮಾವತಿ

ನೀನೆನ್ನ ಜೊತೆಯಲೇ ಎಡೆಬಿಡದೆ ನಡೆವುದನು
ನಾನಿನ್ನೆವರಮರಿಯೆನಯ್ಯ

ನಿದ್ದೆಯಲಿ ನಡೆವಂತೆ ಮೆಯ್ಮರೆದು ನಡೆದೆನೋ
ಮೊದ್ದುತನದಲಿ ನಿನ್ನ ಅರಿಯದೋ ಮನವು
ಸದ್ದುಮಾಡದ ನಿನ್ನ ನಯದ ನಡೆಯೋ ಮಾಯೆ
ಹೊದ್ದು ಎನ್ನನು ನಿನ್ನ ಮರೆಗೊಳಿಸಿತೋ

ಮರುಭೂಮಿಯಲಿ ನಾನು ಒರುವನಾದೆನೆ ಎಂದು
ಮರು ಮರುಗಿ ಮನದಲೇ ಕರಗಿದೆನು ದೊರೆಯೆ
ಅರಿಯೆನಾ ದಾರಿಯನು ತೋರುವರು ಇಲ್ಲೆಂದೆ
ಅರಿಯೆ ನೀ ಕೈಹಿಡಿದು ನಡೆಯಿಸಿದುದ

ತಿರುಗಿ ನೋಡಲು ಮಳಲಮೇಲೆ ನಾ ನಡೆದಡಿಯ
ಗುರುತಿನೊಡನಿಹುದು ನಿನ್ನಡಿಯ ಗುರುತು
ಹರಿದಾರಿಗಳನು ಕಾಡಿನಲಿ ಬೇಸರಪಡದೆ
ಕರುಣಾಳು ಎನ್ನೊಡನೆ ನಡೆದೆ ನೀನು

# ರಕ್ಷಕ

ಶಾಪನ

ರಕ್ಕೆ ಮುರಿದು ಬಿದ್ದ ಹಕ್ಕಿವೊಲಿದ್ದೆನ್ನ
ಅಕ್ಕರೆ ತೋರಿ ನೀನೇ ಪೊರೆದೆ

ಅಕ್ಕರೆಯಿಂದ ನೀ ನೀಡಿದ್ದೈಸಿರಿಗೆ
ಸೊಕ್ಕಿ ನಾ ಮೆರೆಯೆ ಮರುಗಿದೆ ನೀನು
ಸೊಕ್ಕು ಮುರಿದು ನಾನು ನೆಲಕೆ ಬೀಳೆ ನಿನ್ನ
ತೆಕ್ಕೆಯಲ್ಲಿ ನೀ ಹಿಡಿದೆತ್ತಿದೆ

ಹಿರಿಯರ ನಡೆಯಲಿ ಅರಿತೆನೊ ನಿನ್ನನು
ದೊರೆ ನೀನು ಎಂಬುದನೊಪ್ಪಿದೆನೋ
ಸಿರಿ ಬರೆ ಪರೆ ಬಂದ ಕಣ್ಣಂತೆ ಮನವಿದು
ಮರೆತುದೊ ನಿನ್ನನು ಅರಿಯುವ ಪರಿಯನು

ಪರೆವು ಹೋಗಿ ಮತ್ತೆ ನಿನ್ನ ನೆನೆದ ದಿನ
ಹರಿ ಎನ್ನ ಹಿರಿ ಹಿರಿ ಕಾರ್ಯದಲಿ
ನೆರವಾಗೆ ನೀನಿಹೆ ಎಂದೇ ತಿಳಿದೆನೊ
ದೊರೆ ನೀನು ಎಂಬುದ ಮರೆದೆನೊ ಬಿದ್ದೆನೊ

# ಎಚ್ಚರಿಕೆ

## ಬೇಹಾಗ್

ಮರೆಯುವುದು ಬೇಡ ಮನವೇ ಶ್ರೀಹರಿಯ
ಕರುಣೆ ಈ ಬಾಳುವೆಯ ತುಂಬು ತುಂಬಿರುವುದನು

ನೆನೆಯೊ ಈ ಮೊದಲು ನೀನೆನಿತು ಸಲ ಬೆದರಿದೆ
ಎನಿತು ಸಲ ಇಂತು ಅಂತಾಯಿತೆಂದೆ
ಎನಿತು ಸಲ ನೀನು ಅಂಜಿದೆ ನೋಡು ಅನಿತು ಸಲ
ಘನಮಹಿಮ ಕೃಪೆಯಿಂದ ಹೊರೆದನಲ್ತೆ

ಏನ ಮಾಡಿದೆ ನೀನು ಕರುಣೆಯನು ಗಳಿಸುವರೆ
ತಾನೆ ಕರುಣಾಳು ರಕ್ಷಿಸಿದನಲ್ಲಾ
ದೀನನಾಗುವೆ ಯೇಕೆ ದಾನಿ ನೀಡುವನು ತಾ
ದಾನಿಯಾದುದರಿಂದ ಬೇರೆಯಲ್ಲ

ಈ ಮೊದಲು ಹೊರೆದವನು ಹೊರೆಯನೇ ಬಹಕಾಲ
ನೇಮವಲ್ಲವೆ ಹೊರೆವೆನೆಂಬುದವಗೆ
ಸ್ವಾಮಿ ಮರೆವನೆ ತನ್ನ ಸೊತ್ತು ಚಿಂತಿಸಬೇಡ
ಕ್ಷೇಮವನು ನೋಡಿಕೊಳುತಿಹನು ಸತತ

# ಬುದ್ಧಿವಾದ

## ನಾದನಾಮಕ್ರಿಯ

ಬಹು ಚಿಂತೆ ಬೇಡ ಮನುಜಾ ಬದುಕನು
ಕಹಿಮಾಡಿಕೊಳಬೇಡ ಅನುಜಾ

ಹರಿಯೆನಲು ರಾಯರತುನಾ
ಪೊರೆಯೆಂಬುದಾಣಿಮುತ್ತು
ಹರಿಪೊರೆಯೆಂಬುವ ರಕ್ಷೆಯ ಜತನ
ಧರಿಸು ಓಡುವವು ಎಲ್ಲ ಕುತ್ತು

ಬಂದಿತೆಲ್ಲಿಂದ ಬಾಳು
ಚಂದ ಬಾಳುವೆನೆ ಎಂಬಾಸೆ
ಸಂದೇಹ ಬೇಡ ತಮ್ಮಾ ಕೇಳ
ಲ್ಲಿಂದ ಸುರಿಯುತಿದೆ ಹರಕೆಯ ಸೇಸೆ

ನನ ನಿನಗೆ ಬದುಕ ಕೊಟ್ಟು
ಅನುಕ್ಷಣವು ಗಾಸಿಪಟ್ಟು
ನಿನ ನನಗೆ ಮಿಗಿಲು ಮಮತೆಯನಿಟ್ಟು
ತನದೆಂದೆ ಕಾದಿಹನು ಪಣತೊಟ್ಟು

## ನೇತಾ

### ಮೋಹನ

ನೀನೆ ಕೈ ಹಿಡಿದು ನಡೆಯಿಸುತಿರೆ ಇ
ನ್ನೇನು ಚಿಂತೆ ನನಗೆ

ಇಂದು ಇಲ್ಲಿಹೆನು ದಿಟ ಆದರೆ ನಾ
ಬಂದೆನು ಎಲ್ಲಿಂದ
ಅಂದು ಎನ್ನ ಅಲ್ಲಿಂದ ಹೊರಡಿಸಿ
ಒಂದೆ ಸಮನೆ ಈವರೆಗೂ ನಡೆಸಿ
ಕ್ಷಣದಿನ ಪಕ್ಷ ತಿಂಗಳು ವತ್ಸರ
ಎಣಿಸದೆ ಜೊತೆನಡೆಯುತ ನಿರ್ಮತ್ಸರ
ತಂದೆ ತಾಯಿ ಸಖ ಬಂಧು ಆಗಿ ತರಿ
ಸಂದು ಸದಾ ಸಂರಕ್ಷಿಸಿ ದೇವ

ಒಂದೆ ಎರಡೆ ನೀತೋರಿದ ಕರುಣೆ
ಕಂದನೆಂದು ನನಗೆ
ಮಂದ ಬುದ್ಧಿ ಉಸಿರಾಡಲು ಬಲ್ಲೆನೆ
ಎಂದು ನೀನು ಎದೆ ತಿದಿಯನು ಮೆಲ್ಲನೆ
ಆಡಿಸಿ ಒಡಲಲಿ ಪ್ರಾಣವ ಸುಳಿಸಿದೆ
ಜೋಡಿಸಿ ನನ್ನನು ಅದರೊಳು ನಿಲಿಸಿದೆ
ಚಂದದ ಒಳಗಿನ ಹೊರಗಿನ ಕರಣವ
ಸಂದುಗೂಡಿಸಿ ಸಲಹಿದೆ ದೇವ

ಈತೆರ ಬಾಳಿನ ಮೊದಲಲೆ ಇದರ
ಸೂತರ ನೀ ಹಿಡಿದೆ
ಕರುಣೆಯಿಂದ ಇದರೆಡೆಯನು ತುಂಬಿದೆ
ಇರುಕಲಿ ಇಲ್ಲೇ ನನಗೂ ಇಂಬಿದೆ
ಎನ್ನುತ ನಾನೆನ್ನುವ ಈ ಗವಿಯಲಿ
ಸನ್ನುತ ಮನೆ ಮಾಡಿದೆ ನೀ ದಯದಲಿ
ಒಳಗನು ಬೆಳಗಿದೆ ಕತ್ತಲ ಕೆಡಿಸಿದೆ
ಕಳಕಳಿಯಿಂದೆನ್ನಡಿಗಳನಿಡಿಸಿದೆ

## ಕೃಪಾರಸ

ಮಧ್ಯಮಾವತಿ

ತುಂಬಿತು ಬಾಳನು ನಿನ್ನ ಕೃಪಾರಸ
ಇಂಬನು ತುಂಬಿತು ಮೇಲ್ವರಿ ಹರಿಯಿತು

ಜಡವನು ಚೇತನಮಾಡಿ ಕೃಪಾರಸ
ಒಡಲು ಉಸಿರು ಮನ ಬುದ್ಧಿಯ ಬೆಳಿಸಿತು

ಜೀವಕೆ ದೈವವ ಸವಿಸಿ ಕೃಪಾರಸ
ದೇವ ನಿನ್ನಕಡೆ ತಿರುಗಲು ಕಲಿಸಿತು

ನಿನ್ನನಾ ಬಯಸಿದೊಡನೆ ಕೃಪಾರಸ
ನನ್ನಬಳಿಗೆ ನಿನ್ನಡಿಯನು ತಂದಿತು

ಎದುರಲಿ ನಿನ್ನನು ನಿಲಿಸಿ ಕೃಪಾರಸ
ಸದಯ ಹಸ್ತದಲಿ ಕರೆಸಿತು ಹೊರೆಸಿತು

# ಅರ್ಪಣೆ

## ಶಂಕರಾಭರಣ

ನೀನೇ ಗತಿ ನೀನೆದಾರಿ ನೀನೇ ಗಮನದ ಕೊನೆಯು
ನೀನೇ ಗಮನದ ಮೊದಲು ನೀನೇ ಗಮನೋದ್ಯಮಿಯು
ನೀನೇ ಗಮನದೊಳಿಲ್ಲವ ಪ್ರೇರಿಸಿದಾ ಆದಿ ಚೇತನ
ನೀನೇ ಸರ್ವವು ಎಂಬುದನರಿಯಲಿ ಈ ಆತ್ಮ ಹರಿಯೆ

ನೀನೇ ಈ ಅಖಿಲ ಜಗದಿ ಜೀವಿಸುತಿಹ ಜೀವಕೋಟಿ
ನೀನೇ ಜೀವಿಗಳ ಜೀವದಾಂತರ್ಯದ ಜೀವತತ್ವ
ನೀನೇ ಜೀವನು ಜೀವಿಪ ಜೀವನವೂ ಅದರ ಫಲವು
ನೀನೇ ಸಕಲವು ಎಂಬುದನರಿಯಲಿ ಈ ಆತ್ಮ ಹರಿಯೆ

ನೀನೇ ಲೋಕದಿ ತೋರುವ ಸಕಲರೂಪರಸಗಂಧವು
ನೀನೇ ಈ ಗಂಧರೂಪರಸಗಳನರಿಯುವ ಮನವು
ನೀನೇ ರಸಗಂಧ ರೂಪದನುಭವದಂತ್ಯದ ಫಲವು
ನೀನೇ ಸಕಲವು ಎಂಬುದನರಿಯಲಿ ಈ ಆತ್ಮ ಹರಿಯೆ

ನಿನ್ನೊಳಿಲ್ಲ ಮೊದಲಾದುದು ನಿನ್ನೊಳಿಲ್ಲ ನಿಂದಿಹುದು
ನಿನ್ನೊಳಯಸ್ಕಾಂತದಲ್ಲಿ ರೇಣು ರೇಣು ಎಂತು ಅಂತೆ
ನಿನ್ನ ಕಳೆಯನೊಂದಿ ಎಲ್ಲ ಅಮರವಾಗಿ ಇರುವ ಹದನ
ಚೆನ್ನಕೇಶವಾ ಅರಿಯುತೆ ನೆಮ್ಮದಿಯನು ಕಾಣಲಾತ್ಮ

# ಪದಗಳ ಅಕಾರಾದಿ

563–51. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩
ಯಶೋಧರಾ (ನಾಟಕ)
ನವರಾತ್ರಿ ೫
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ನಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯು ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್ ಬ್ರಾಂಚ್ ಡಿಪೊ, ಅವೆನ್ಯೂ ರೋಡ್,
"ಕೃಷ್ಣಾ ಬಿಲ್ಡಿಂಗ್ಸ್", ಬೆಂಗಳೂರು ಸಿಟಿ
ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು